


**ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ**
ನಂ 10, 3ನೇ ಮಹಡಿ, ಖಾದಿ ಭವನ, ಜೆಸ್ಮಾದೇವಿ ಭವನ ರಸ್ತೆ, ವಸಂತನಗರ, ಬೆಂಗಳೂರು–560052
ದೂರವಾಣಿ ಸಂಖ್ಯೆ : 22250017/18, ಫ್ಯಾಕ್ಸ್ ಸಂಖ್ಯೆ : 22250051
ಇ–ಮೇಲ್ : mdkmvstdc@gmail.com website: www.karnataka.gov.in/kmvstdcl




## ನಿಗಮದ ಕಾರ್ಯಕ್ರಮಗಳ ಸಂಕ್ಷಿಪ್ತ ಪರಿಚಯ

### ಸ್ವಯಂ ಉದ್ಯೋಗ ಯೋಜನೆ

- ಯೋಜನೆಯಡಿ ಪರಿಶಿಷ್ಟ ವರ್ಗದ ವಿವಿಧ ಚಟುವಟಿಕೆಗಳಿಗೆ ಘಟಕ ವೆಚ್ಚ ರೂ. 1,00,000/– ಒಳಗಿನ ಉದ್ದೇಶಗಳಿಗೆ ಬ್ಯಾಂಕ್ ಮುಖಾಂತರ ಸಾಲ ಸೌಲಭ್ಯವನ್ನು ಒದಗಿಸಲಾಗುವುದು.
- ನಿಗಮದಿಂದ ಘಟಕ ವೆಚ್ಚದ ಶೇ. 50 ಭಾಗ ಅಥವಾ ಗರಿಷ್ಠ ರೂ. 35,000/–ಗಳು ಸಹಾಯಧನ ಮಂಜೂರು ಮಾಡಲಾಗುವುದು. ಉಳಿದ ಭಾಗ ಬ್ಯಾಂಕ್ ಸಾಲವಾಗಿರುತ್ತದೆ.

### ಹೈನುಗಾರಿಕೆ ಯೋಜನೆ

- ಯೋಜನೆಯಡಿ ಹೈನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪರಿಶಿಷ್ಟ ಪಂಗಡದ ಫಲಾಪೇಕ್ಷಿಗಳಿಗೆ ಘಟಕ ವೆಚ್ಚ ರೂ. 1.00 ಲಕ್ಷದ ಮಿತಿಯೊಳಗೆ 2 ಹಾಲು ಕರೆಯುವ ಮಿಶ್ರತಳಿ ಹಸು ಅಥವಾ ಸುಧಾರಿತ ಎಮ್ಮೆಗಳನ್ನು ಖರೀದಿಸಲು ಬ್ಯಾಂಕ್‌ಗಳ ಸಹಭಾಗಿತ್ವದೊಂದಿಗೆ ಸಾಲ ಸೌಲಭ್ಯ ಕಲ್ಪಿಸಲಾಗುವುದು.
- ನಿಗಮದಿಂದ ಘಟಕ ವೆಚ್ಚದ ಶೇ. 50 ಭಾಗ ಅಥವಾ ಗರಿಷ್ಠ ರೂ. 50,000/–ಗಳು ಸಹಾಯಧನವನ್ನು ಮಂಜೂರು ಮಾಡಲಾಗುವುದು. ಉಳಿದ ಭಾಗ ಬ್ಯಾಂಕ್ ಸಾಲವಾಗಿರುತ್ತದೆ.

### ಉದ್ಯಮ ಶೀಲತಾ ಅಭಿವೃದ್ಧಿ ಯೋಜನೆ

- ಈ ಯೋಜನೆಯಡಿ ವಾಹನ ಸೌಲಭ್ಯ ಅಥವಾ ಇಚ್ಛಿಸುವ ವಿವಿಧ ಉದ್ಯಮಶೀಲತಾ ಅಭಿವೃದ್ಧಿಗಾಗಿ ಸೌಲಭ್ಯ ಕಲ್ಪಿಸಲಾಗುವುದು
- ರೂ. 1.00 ಲಕ್ಷದಿಂದ ರೂ. 5.00 ಲಕ್ಷಗಳವರೆಗೆ ಘಟಕ ವೆಚ್ಚದ 70% ಭಾಗ ಅಥವಾ ಗರಿಷ್ಠ ರೂ. 3.50 ಲಕ್ಷ ಸಹಾಯಧನ ಉಳಿದ ಮೊತ್ತ ಬ್ಯಾಂಕ್ ಸಾಲ
- ರೂ. 5.00 ಲಕ್ಷಗಳಿಂದ ರೂ. 10.00 ಲಕ್ಷಗಳವರೆಗೆಘಟಕ ವೆಚ್ಚದ 60% ಭಾಗ ಅಥವಾ ಗರಿಷ್ಠ ರೂ. 5.00 ಲಕ್ಷ ಸಹಾಯಧನ ಉಳಿದ ಮೊತ್ತ ಬ್ಯಾಂಕ್ ಸಾಲ
- ರೂ. 10.00 ಲಕ್ಷಗಳಿಂದ ರೂ. 20.00 ಲಕ್ಷಗಳವರೆಗೆಘಟಕ ವೆಚ್ಚದ 50% ಭಾಗ ಅಥವಾ ಗರಿಷ್ಠ ರೂ. 5.00 ಲಕ್ಷ ಸಹಾಯಧನ ಉಳಿದ ಮೊತ್ತ ಬ್ಯಾಂಕ್ ಸಾಲ

### ಸ್ವಯಂ ಉದ್ಯೋಗ ಯೋಜನೆ (ಪ್ರವಾಸಿ ಟ್ಯಾಕ್ಸಿ)

- ರಾಜ್ಯದಲ್ಲಿನ ಪರಿಶಿಷ್ಟ ಪಂಗಡದ ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮೂಲಕ ಅವರುಗಳ ಆರ್ಥಿಕ ಸ್ಥಿತಿಯನ್ನು ಸುಧಾರಣೆ ಮಾಡಿಕೊಳ್ಳುವಲ್ಲಿ ನೆರವಾಗಲು ಬ್ಯಾಂಕ್‌ಗಳ ಸಹಯೋಗದೊಂದಿಗೆ ನಿಗಮವು ಪ್ರಸಕ್ತ ಸಾಲಿನಲ್ಲಿ ಸ್ವಯಂ ಉದ್ಯೋಗ ಯೋಜನೆಯಡಿ ವಾಹನ ಚಾಲನಾ ಪರವಾನಗಿ ಹೊಂದಿರುವ 1500 ಪರಿಶಿಷ್ಟ ಪಂಗಡಗಳ ನಿರುದ್ಯೋಗಿ ಯುವಕರಿಗೆ ಟೂರಿಸ್ಟ್ ಟ್ಯಾಕ್ಸಿಗಳನ್ನು ಖರೀದಿಸಲು ರೂ.3.00 ಲಕ್ಷಗಳವರೆಗೆ ಅಥವಾ ವಾಹನದ ಶೇ. 50ರಷ್ಟು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸಹಾಯಧನ ನೀಡಲಾಗುವುದು. ಉಳಿದ ಮೊತ್ತವನ್ನು ಬ್ಯಾಂಕ್‌ಗಳಿಂದ ಸಾಲದ ರೂಪದಲ್ಲಿ ಪಡೆಯಬಹುದು.

### ವೃತ್ತಿ ಕೌಶಲ್ಯ ಸ್ವಯಂ ಉದ್ಯೋಗ ಯೋಜನೆ

- ರಾಜ್ಯದಲ್ಲಿನ ವೃತ್ತಿ ಕೌಶಲ್ಯ ತರಬೇತಿ ಪಡೆದ 600 ಪರಿಶಿಷ್ಟ ಪಂಗಡಗಳ ನಿರುದ್ಯೋಗಿ ಯುವಕರಿಗೆ ಬ್ಯಾಂಕ್ ಸಹಯೋಗದೊಂದಿಗೆ ರೂ. 5 ಲಕ್ಷಗಳವರೆಗಿನ ಘಟಕ ವೆಚ್ಚವನ್ನು ಹೊಂದಿರುವ ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ರೂ. 2.50 ಲಕ್ಷ ಅಥವಾ ಶೇ. 50ರಷ್ಟು ಯೋಜನಾ ವೆಚ್ಚ ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸಹಾಯಧನ ನೀಡಲಾಗುವುದು.

### ನೇರಸಾಲ ಯೋಜನೆ

- ಪ್ರಸಕ್ತ ಸಾಲಿನಲ್ಲಿ ನೇರ ಸಾಲ ಯೋಜನೆಯಡಿ ರಾಜ್ಯದ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗಾಗಿ ರೂ. 40,000/–ಗಳ ಘಟಕ ವೆಚ್ಚದಲ್ಲಿ ಹಸು/ಎಮ್ಮೆ ಮತ್ತು ಕುರಿ/ಮೇಕೆ ಸಾಕಾಣಿಕೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ನೆರವು ನೀಡಲಾಗುತ್ತಿದೆ. ಇದರಲ್ಲಿ ಸಹಾಯಧನ ರೂ. 25,000/– ಮತ್ತು ನೇರ ಸಾಲ ಶೇ. 4ರ ಬಡ್ಡಿ ದರದಲ್ಲಿ ರೂ. 15,000/–ಗಳು ಒಳಗೊಂಡಿರುತ್ತದೆ.

### ಭೂ ಒಡೆತನ ಯೋಜನೆ

- ಪರಿಶಿಷ್ಟ ಪಂಗಡದ ಭೂ ರಹಿತ ಮಹಿಳಾ ಕೃಷಿ ಕಾರ್ಮಿಕರನ್ನು ಭೂ ಒಡೆಯರನ್ನಾಗಿಸುವುದು ಈ ಯೋಜನೆಯ ಅನುಷ್ಠಾನದ ಉದ್ದೇಶ.
- ಘಟಕ ವೆಚ್ಚ ರೂ. 15.00 ಲಕ್ಷಗಳಿದ್ದು, ಇದರಲ್ಲಿ ಸಹಾಯಧನ ಮತ್ತು ಅವಧಿ ಸಾಲ 50:50ರ ಅನುಪಾತದಲ್ಲಿರುತ್ತದೆ. ಅವಧಿ ಸಾಲಕ್ಕೆ ವಾರ್ಷಿಕ ಶೇ. 6ರ ದರದಲ್ಲಿ ಬಡ್ಡಿ ವಿಧಿಸಲಾಗುವುದು. ಸಾಲ ಮತ್ತು ಬಡ್ಡಿಯನ್ನು 10 ವರ್ಷಗಳ ಅವಧಿಯಲ್ಲಿ ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗಿರುತ್ತದೆ.
- ಘಟಕ ವೆಚ್ಚದಲ್ಲಿ ಎಷ್ಟು ವಿಸ್ತೀರ್ಣ ಜಮೀನು ದೊರಕುತ್ತದೆಯೋ ಅಷ್ಟು ವಿಸ್ತೀರ್ಣದ ಜಮೀನನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿರದ ಭೂ ಮಾಲೀಕರಿಂದ ಖರೀದಿಸಿ ಫಲಾಪೇಕ್ಷಿಗಳ ಹೆಸರಿಗೆ ನೇರವಾಗಿ ನೊಂದಣಿ ಮಾಡಿಸಿಕೊಡಲಾಗುವುದು.

### ಮೈಕ್ರೋ ಕ್ರೆಡಿಟ್ ಯೋಜನೆ (ಕಿರುಸಾಲ)

- ಸ್ವ–ಸಹಾಯ ಸಂಘಗಳಲ್ಲಿ ಸದಸ್ಯರಾಗಿರುವ ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಸಣ್ಣ ಪ್ರಮಾಣ ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಆರ್ಥಿಕ ನೆರವನ್ನು ಕಲ್ಪಿಸುವುದು.
- ಪ್ರತಿ ಮಹಿಳಾ ಫಲಾಪೇಕ್ಷಿಗೆ ರೂ. 15,000/–ದಂತೆ ಸ್ವ–ಸಹಾಯ ಸಂಘದ ಮೂಲಕ ನೆರವು ಕಲ್ಪಿಸಲಾಗುವುದು, ಇದರಲ್ಲಿ ರೂ. 10,000/– ಸಹಾಯಧನ ಮತ್ತು ರೂ. 5,000/– ಸಾಲವಾಗಿರುತ್ತದೆ. ಸಾಲಕ್ಕೆ ವಾರ್ಷಿಕ ಶೇ. 4ರ ದರದಲ್ಲಿ ಬಡ್ಡಿ ವಿಧಿಸಲಾಗುವುದು. ಸಾಲ ಮತ್ತು ಬಡ್ಡಿಯನ್ನು 3 ವರ್ಷಗಳಲ್ಲಿ ಮಾಸಿಕ/ತ್ರೈಮಾಸಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗಿರುತ್ತದೆ.

### ವೈಯಕ್ತಿಕ ನೀರಾವರಿ ಕೊಳವೆಬಾವಿ/ತೆರೆದ ಬಾವಿ ಯೋಜನೆ

- ಈ ಯೋಜನೆಯಲ್ಲಿ ಪರಿಶಿಷ್ಟ ಪಂಗಡದ ಸಣ್ಣ, ಅತಿ ಸಣ್ಣ ರೈತರ ಜಮೀನಿನಲ್ಲಿ ಕೊಳವೆಬಾವಿ ಕೊರೆದು ಪಂಪ್‌ಸೆಟ್ ಹಾಗೂ ಇತರೆ ಪೂರಕ ಸಾಮಾಗ್ರಿಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಿಕೊಡಲಾಗುವುದು.
- ಘಟಕ ವೆಚ್ಚ ರೂ. 3.00 ಲಕ್ಷ ಇದರಲ್ಲಿ ರೂ. 2.50 ಲಕ್ಷ ಸಹಾಯಧನ ಮತ್ತು ರೂ. 50,000/– ಅವಧಿಸಾಲ ಹಾಗೂ ವಿದ್ಯುದ್ದೀಕರಣದ ಬಾಬ್ತು ರೂ. 50,000/–ಗಳು ಒಳಗೊಂಡಿರುತ್ತದೆ ಸಾಲಕ್ಕೆ ವಾರ್ಷಿಕ ಶೇ. 6ರ ದರದಲ್ಲಿ ಬಡ್ಡಿ ವಿಧಿಸಲಾಗಿವುದು. ಸಾಲ ಮತ್ತು ಬಡ್ಡಿಯನ್ನು 6 ವರ್ಷಗಳಲ್ಲಿ ಅರ್ಧವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗಿರುತ್ತದೆ.
- ಅಂತರ್ಜಲದ ಮಟ್ಟ ಕುಸಿದಿರುವ ಜಿಲ್ಲೆಗಳಾದ ಕೋಲಾರ, ರಾಮನಗರ, ಚಿಕ್ಕಬಳ್ಳಾಪುರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಮತ್ತು ತುಮಕೂರು ಜಿಲ್ಲೆಗಳಿಗೆ ಘಟಕ ವೆಚ್ಚವನ್ನು ರೂ. 4.00 ಲಕ್ಷಗಳಿಗೆ ನಿಗದಿಪಡಿಸಿದ್ದು, ರೂ. 3.00 ಲಕ್ಷ ಸಹಾಯದನ ರೂ. 50,000/– ಅವಧಿಸಾಲ ಮತ್ತು ವಿದ್ಯುದೀಕರಣಕ್ಕೆ ರೂ. 50,000/– ಆಗಿರುತ್ತದೆ. ಸಾಲಕ್ಕೆ ವಾರ್ಷಿಕ ಶೇ.6ರ ದರದಲ್ಲಿ ಬಡ್ಡಿ ವಿಧಿಸಲಾಗಿವುದು. ಸಾಲ ಮತ್ತು ಬಡ್ಡಿಯನ್ನು 6 ವರ್ಷಗಳಲ್ಲಿ ಅರ್ಧವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗಿರುತ್ತದೆ.

### ಏತ ನೀರಾವರಿ ಯೋಜನೆ

- ಯೋಜನೆಯಡಿ, ನೈಸರ್ಗಿಕವಾಗಿ ನದಿ, ತೊರೆ, ನಾಲೆಗಳ ಅಕ್ಕಪಕ್ಕದಲ್ಲಿರುವ ಪರಿಶಿಷ್ಟ ಪಂಗಡದ ಕನಿಷ್ಠ 3 ಸಣ್ಣ ಮತ್ತು ಅತಿ ಸಣ್ಣ ರೈತರುಗಳ ಜಮೀನುಗಳಿಗೆ ಪಂಪ್‌ಸೆಟ್ ಮತ್ತು ಪೈಪ್‌ಲೈನ್ ಅಳವಡಿಸಿ ಉಚಿತವಾಗಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗುವುದು.
- ಘಟಕ ವೆಚ್ಚವು ಕನಿಷ್ಠ 8–00 ಎಕರೆ ಖುಷ್ಕಿ ಜಮೀನಿನ ಘಟಕಕ್ಕೆ ರೂ. 4.00 ಲಕ್ಷ ಮತ್ತು 15–00 ಎಕರೆ ಜಮೀನಿನ ಘಟಕಕ್ಕೆ ರೂ. 6.00 ಲಕ್ಷ ಇರುತ್ತದೆ.

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು** : ನಾಮದೇವ ಕಾಗದಗಾರ, ಕಮಲಂ ಅರಸು, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಆಯ್. ಬಿ. ರಾಠೋಡ್, ಪಿ. ಜಿ. ನಾರಾಯಣ

**ಮುಖಪುಟದಲ್ಲಿ** : ರಂಗ ಕಲಾವಿದ ಏಣಗಿ ಬಾಳಪ್ಪ

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ




## ಈ ತಿಂಗಳು

ರಾಜಕೀಯದಲ್ಲಿ ಏನು ಬೇಕಾದರೂ ಆಗಬಹುದು ಎಂಬ ಕ್ಲೀಷೆಗೆ ಇತ್ತೀಚಿನ ಎರಡು ಘಟನೆಗಳು ಉದಾಹರಣೆ. ಅಧಿಕಾರದ ಸವಿ ಉಂಡ ರಾಜಕಾರಣಿಯ ಸಂದರ್ಭ ಸಾಧನೆಗೆ ಇನ್ನೊಂದು ಹೆಸರು ಬಿಹಾರದ ಮುಖ್ಯಮಂತ್ರಿ ನೀತೀಶ್ ಕುಮಾರ್. ಮಹಾಘಟಬಂಧನ್ ಒಡೆದು ಭಾಜಪ ದೊಂದಿಗೆ ಮತ್ತೆ ಕೈಜೋಡಿಸಿದ ಮಹಾವಂಚಕ ನೀತೀಶ್ ಕುಮಾರ್. ಲಾಲೂ ಪ್ರಸಾದ್ ನೇತೃತ್ವದ ರಾಷ್ಟ್ರೀಯ ಜನತಾದಳ, ನೀತೀಶ್ ಕುಮಾರ್ ನೇತೃತ್ವದ ಸಂಯುಕ್ತ ಜನತಾದಳ ಹಾಗೂ ಕಾಂಗ್ರೆಸ್ ಮೈತ್ರಿಕೂಟ ಹೊಸೆದ ಇಪ್ಪತ್ತು ತಿಂಗಳಲ್ಲೆ ತಿಪ್ಪರಲಾಗ ಹಾಕಿ ಮತ್ತೆ ಕುರ್ಚಿಗಂಟಿಕೊಂಡ ಕೀರ್ತಿ ಬಿಹಾರದ ಮುಖ್ಯಮಂತ್ರಿಗೆ ಸಲ್ಲುತ್ತದೆ. ಮೈತ್ರಿಕೂಟ ದೇಶದ ರಾಜಕಾರಣದಲ್ಲಿ ಸಂಚಲನ ಮೂಡಿಸಿತ್ತು. ಭಾಜಪವನ್ನು ಬಿಹಾರದಲ್ಲಿ ಮೂಲೆಗುಂಪುಮಾಡಿತ್ತು. ಬಿಹಾರದ ರಾಜಕಾರಣದಲ್ಲಿ ಇಂಥವೆಲ್ಲ ಸಾಧಾರಣ ಎನಿಸಿಕೊಂಡಿದೆ. ಬಿಹಾರದ ನಾಯಕ ಜಯಪ್ರಕಾಶ ನಾರಾಯಣ್ ಅವರ ಗರಡಿಯಲ್ಲಿ ಪಳಗಿದ ನೀತೀಶ್ ರಾಜಕಾರಣಿಯಾಗಿ ಬೆಳೆದದ್ದೂ ಆತ ಕಾಂಗ್ರೆಸ್ ನಾಯಕಿ ಇಂದಿರಾ ಗಾಂಧಿ ವಿರುದ್ಧವಾಗಿ ನಡೆಸಿದ ಚಳುವಳಿಯಲ್ಲೆ. ಈಚೆಗೆ ಜರುಗಿದ ರಾಷ್ಟ್ರಪತಿ ಚುನಾವಣೆಯ ಕಾಲದಲ್ಲಿ ನೀತೀಶ್ ಕುಮಾರ್ ಎನ್‌ಡಿಎ ಅಭ್ಯರ್ಥಿಗೆ ಬೆಂಬಲ ಸೂಚಿಸಿದಾಗಲೇ ಅವರ ಮುಂದಿನ ನಡೆಗೆ ಸುಳಿವು ಲಭಿಸಿತ್ತು. ಭ್ರಷ್ಟಾಚಾರದ ಆಪಾದನೆ ಹೊರೆಸಿದ್ದು, ತಾನು ನಿಷ್ಠಾವಂತ ಎಂದು ಹೇಳಿಕೊಂಡದ್ದು ಒಂದು ನೆಪ ಅಷ್ಟೆ. ವ್ಯಕ್ತಿನಿಷ್ಠ ರಾಜಕಾರಣವೇ ಪ್ರಧಾನ ಎಂಬುದನ್ನು ಅವರು ಸ್ಪಷ್ಟವಾಗಿ ತೋರ್ಪಡಿಸಿಕೊಂಡಿದ್ದಾರೆ. ಜೆಡಿಯು ಈಗ ಒಡೆದು ಹೋಳಾಗಿದೆ. ಬಿಹಾರವನ್ನು ಬಿಟ್ಟು ಉಳಿದ ಭಾಗಗಳಲ್ಲಿನ ಜೆಡಿಯು ಪ್ರತ್ಯೇಕಗೊಂಡಿದೆ. ಅಂತೂ ಬಿಹಾರದ ರಾಜಕಾರಣದ ತಿರುವುಗಳು ಭಾಜಪದ ಕುತಂತ್ರಕ್ಕೆ ಹೇಳಿಮಾಡಿಸಿದಂತೆ ಇದೆ.

✷ ✷ ✷

ಬಿಹಾರದ ಯಶಸ್ಸಿನ ಗುಂಗಿನಲ್ಲೇ ಇದ್ದ ಅಮಿತ್ ಷಾ – ಮೋದಿ ಜೋಡಿಗೆ ಗುಜರಾತ್‌ನಲ್ಲಿ ಭಾರೀ ಹೊಡೆತ. ರಾಜ್ಯಸಭೆಗೆ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ನಿಷ್ಠ ಅಹ್ಮದ್ ಪಟೇಲ್‌ರನ್ನು ಪರಾಜಯ ಗೊಳಿಸಲು ಹೆಣೆದ ಕುತಂತ್ರಗಳೆಲ್ಲ ತಿರುಗೇಟಾಗಿ ಪರಿಣಮಿಸಿದವು ಅವರಿಗೆ. ರಾಜ್ಯಸಭೆಗೆ ಖಾಲಿ ಇದ್ದ ಮೂರು ಸ್ಥಾನಗಳಿಗೆ ಇದ್ದ ಅಭ್ಯರ್ಥಿಗಳು ಭಾಜಪ ಅಧ್ಯಕ್ಷ ಷಾ, ಕೇಂದ್ರ ಸಚಿವೆ ಸ್ಮೃತಿ ಇರಾನಿ ಮತ್ತು ಅಹ್ಮದ್ ಪಟೇಲ್ ಮತ್ತು ಕೊಸರಿಗೆ ಇನ್ನೊಬ್ಬ ಭಾಜಪ ಅಭ್ಯರ್ಥಿ. ಏನಾದರೂ ಮಾಡಿ ಪಟೇಲ್‌ರನ್ನು ಸೋಲಿಸಲು ಹಠತೊಟ್ಟ ಭಾಜಪ ಕುದುರೆ ವ್ಯಾಪಾರ ಪ್ರಾರಂಭಿಸಿತು. ಹಣದ ಹೊಳೆ ಹರಿಸಿ, ಕಾಂಗ್ರೆಸ್ ಶಾಸಕರನ್ನು ಕೈತುಂಬ ಹಣ ನೀಡಿ ಕೊಳ್ಳುವುದಕ್ಕೆ ಕೈ ಹಾಕಿತು ಅಧಿಕಾರದಲ್ಲಿರುವ ಭಾಜಪ. ರಾಜ್ಯಸಭೆ, ವಿಧಾನ ಪರಿಷತ್ತುಗಳ ಚುನಾವಣೆ ನಡೆಯುವಾಗ ಇಂಥ ವ್ಯವಹಾರಗಳೆಲ್ಲ ಮಾಮೂಲು. ಇದು ಕಾಂಗ್ರೆಸ್ ಹಾಕಿಕೊಟ್ಟ ಮೇಲ್ಪಂಕ್ತಿ, ಈಗ ಅದಕ್ಕೆ ತಿರುಗೇಟಾಗಿ ಬರುತ್ತಿದೆ ಅಷ್ಟೆ. ತನ್ನ ಹಕ್ಕಿಗಳನ್ನು ಕಾಪಾಡಿಕೊಳ್ಳಲು ಕಾಂಗ್ರೆಸ್ ಇಳಿಯಿತು 'ರಿಸಾರ್ಟ್ ರಾಜಕಾರಣ'ಕ್ಕೆ. ಇದು ಕೂಡ ಕಾಂಗ್ರೆಸ್ ಕಲಿಸಿದ ಪಾಠವೆ. ಕರ್ನಾಟಕಕ್ಕೆ ಸಾಗ ಹಾಕಲಾಯಿತು ಕಾಂಗ್ರೆಸ್ ಶಾಸಕರನ್ನು. ರಾಜಧಾನಿ ಬೆಂಗಳೂರಿಗೆ ಆಗಮಿಸಿದ ಗುಜರಾತ್ ಶಾಸಕರ ಉಸ್ತುವಾರಿಯನ್ನು ಸಚಿವ ಡಿ. ಕೆ. ಶಿವಕುಮಾರ್‌ಗೆ ವಹಿಸಲಾಗಿತ್ತು. ಈತ ಏನು ಅಂಥ ಘನಂದಾರಿ ವ್ಯಕ್ತಿ ಅಲ್ಲ, ಸಾಕಷ್ಟು ವ್ಯವಹಾರಗಳನ್ನಿರಿಸಿಕೊಂಡಿರುವ ಆಸಾಮಿ. ಮೋದಿ ಸರಕಾರ ಈತನ ಮೇಲೆ ಇನ್ಕಮ್‌ಟ್ಯಾಕ್ಸ್ ಅಧಿಕಾರಿಗಳನ್ನು ಛೂ ಬಿಟ್ಟಿತು. ಮಾಧ್ಯಮಗಳ ಅಬ್ಬರದ ಪ್ರಚಾರದಲ್ಲಿ ಎಷ್ಟೋ ಕೋಟಿ ಅಕ್ರಮ ವ್ಯವಹಾರಗಳು, ದಾಖಲೆಗಳು ಇಲಾಖಾ ಅಧಿಕಾರಿಗಳ ವಶಕ್ಕೆ ಬಂತು. ಇದೊಂದು ರಾಜಕೀಯ ಪ್ರೇರಿತ ಆದಾಯ ತೆರಿಗೆ ದಾಳಿ ಎನ್ನುವುದು ಸ್ಪಷ್ಟವಾಗಿತ್ತು ಎಲ್ಲರಿಗೂ. ಮೂರು – ನಾಲ್ಕು ದಿನ ಅದೇ ದೊಡ್ಡ ಸುದ್ದಿ. ಇವೆಲ್ಲ ಆದದ್ದು ಗುಜರಾತ್ ಚುನಾವಣೆಯ ಹಿಂದಿನ ವಾರದಲ್ಲಿ. ಈಗ ಸಚಿವ ಡಿಕೆಶಿ ಆರಾಮವಾಗಿ ಓಡಾಡಿಕೊಂಡು ಹೀರೋ ಆಗಿಬಿಟ್ಟಿದ್ದಾರೆ


***(2ನೇ ಪುಟಕ್ಕೆ )***







ಸಂಪುಟ-೧೯ ಸಂಚಿಕೆ-೨ ಸೆಪ್ಟೆಂಬರ್ ೨೦೧೭

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ-ಮುದ್ರಕ-ಪ್ರಕಾಶಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ರಮೇಶ ಉಡುಪ

■ *ಮುದ್ರಣ*

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ಅರಮನೆ ಗುರುಮನೆ ಅಂತರಂಗ

ಪ್ರಭುತ್ವ ಮತ್ತು ಧರ್ಮ ಒಂದಕ್ಕೊಂದು ಪೂರಕವಾಗಿ ಒಂದನ್ನೊಂದು ರಕ್ಷಿಸುತ್ತ, ಪೋಷಿಸುತ್ತ ಬಂದದ್ದು ಪ್ರಭುತ್ವದ ಚರಿತ್ರೆ. ಆದರೆ ಪ್ರಜಾಪ್ರಭುತ್ವದಲ್ಲಿ ಪ್ರಜೆಯೇ ಪ್ರಭುತ್ವದ ಕೇಂದ್ರ ಮತ್ತು ಗುರಿಯೂ ಆಗುವುದರಿಂದ ಪ್ರಜೆ ಮತ್ತು ಪ್ರಜೆಯ ಪರಿಸರ ರಾಜಕಾರಣದ ಆದ್ಯತೆ ಆಗಬೇಕು. ರಾಜಕಾರಣದಲ್ಲಿ ಭೌತಿಕ ಅಗತ್ಯಗಳನ್ನು ಭಾವುಕ ಅಂಶಗಳ ಕಾರಣಕ್ಕಾಗಿ ತಿರಸ್ಕರಿಸಲಾಗದು. ಹಸುವನ್ನು ಮುಂದಿಟ್ಟು ಹಸಿವನ್ನು ಮರೆಸುವ ಭಾವುಕ ರಾಜಕಾರಣ ತಕ್ಷಣಕ್ಕೆ ಯಶಸ್ಸು ಕಂಡರೂ ಹಸಿವಿಗೆ ಭಾವನೆಗಳನ್ನು ನಿಯಂತ್ರಿಸುವ ಶಕ್ತಿ ಇದೆ. ಅರಮನೆ ಗುರುಮನೆಗೆ ಅಧೀನವಾದರೆ ಪ್ರಜಾಸತ್ತೆ ದಿಕ್ಕು ತಪ್ಪುತ್ತದೆ. ಧರ್ಮವು ರಾಜಕಾರಣಕ್ಕೆ ಅಸ್ತ್ರವಾಗಬಾರದು. ಹಾಗೇ ರಾಜಕಾರಣ ಧರ್ಮದ ಆಯುಧವಾಗಬಾರದು. ವಿಶ್ವದ ಆಧುನಿಕ ಪ್ರಜಾಸತ್ತೆಗಳ ಸಂವಿಧಾನಗಳಲ್ಲಿ ಧರ್ಮ ಮತ್ತು ರಾಜಕಾರಣದ ಕ್ಷೇತ್ರಗಳು ಭಿನ್ನವಾಗಿಯೇ ಇವೆ. ಧರ್ಮಾಧಾರಿತ ರಾಜಕಾರಣ ಅಥವಾ ಧರ್ಮನಿಯಂತ್ರಿತ ಪ್ರಭುತ್ವಗಳು ಪ್ರಜಾಸತ್ತೆಯನ್ನು ಚಿವುಟಿಹಾಕಿವೆ ಅಥವಾ ನಾಶಮಾಡಿವೆ. ಧರ್ಮಾಧಾರಿತ ಪ್ರಭುತ್ವದಡಿಯಲ್ಲಿರುವ ಬಹುತೇಕ ದೇಶಗಳು ಹಸಿವು, ಬಡತನ, ದಾರಿದ್ರ್ಯದಿಂದ ಬಳಲುತ್ತಿವೆ. ಕೆಲವು ಶ್ರೀಮಂತ ದೇಶಗಳು ಪ್ರಜಾಸತ್ತೆಯನ್ನು ಸದೆಬಡಿದು ಕೆಲವೇ ಕುಟುಂಬಗಳ ಒಡೆತನದಲ್ಲಿ ನಲಗುತ್ತಿವೆ.

ಕಳೆದ ತಿಂಗಳು ಕರ್ನಾಟಕದ ರಾಜಕಾರಣದಲ್ಲಿ, ಧರ್ಮ-ರಾಜಕಾರಣದ ಕ್ಷೇತ್ರದಲ್ಲಿ ಒಂದು ಬೆಳವಣಿಗೆಯಾಯಿತು. ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ ಲಿಂಗಾಯತ ಮಠಾಧೀಶರ ನಾಯಕತ್ವದಲ್ಲಿ ಅಭಿನಂದನೆ ಸಲ್ಲಿಸಲಾಯಿತು. ಸರಕಾರಿ ಕಚೇರಿಗಳಲ್ಲಿ ಬಸವಣ್ಣನವರ ಭಾವಚಿತ್ರ ಹಾಕಲು ಆದೇಶಿಸಿದ್ದಕ್ಕಾಗಿ ಈ ಅಭಿನಂದನೆ. ಆಗ ಕೆಲವರು ಲಿಂಗಾಯತ ಧರ್ಮವನ್ನು ಪ್ರತ್ಯೇಕ ಧರ್ಮವಾಗಿ ಪರಿಗಣಿಸಲು ಮುಂದಿನ ಕ್ರಮಕ್ಕಾಗಿ ಮುಖ್ಯಮಂತ್ರಿಗಳಿಗೆ ಮನವಿ ಕೊಟ್ಟರು. ಆಗ ವೀರಶೈವ ಮಹಾಸಭಾದವರು ನಾವು ಹಲವು ವರ್ಷಗಳಿಂದ ಮನವಿ ಕೊಟ್ಟಿದ್ದೇವೆ, ಪ್ರತ್ಯೇಕ ಧರ್ಮದ ಹೆಸರು ವೀರಶೈವ ಧರ್ಮ ಎಂದು ಇರಬೇಕೆಂದರು. ಪಂಚಪೀಠದವರ ನಿಲುವು ಇದಾದರೆ, ವಿರಕ್ತಮಠಗಳವರು ಲಿಂಗಾಯತ ಧರ್ಮ ಎಂದಿರಬೇಕು ಎಂದರು. ಈ ಎರಡು ಬಣಗಳ ಕಿತ್ತಾಟದಲ್ಲಿ ಮೂರನೇ ಬಣ ರಾಜಿಪಂಚಾಯ್ತಿಗಿಳಿದು 'ವೀರಶೈವ-ಲಿಂಗಾಯತ' ಧರ್ಮ ಎಂದಿರಬೇಕು ಎಂಬ ವಾದ ಮಂಡಿಸಿತು. ಈ ಮೂರೂ ವಾದಗಳ ಪರವಾಗಿ ಅನೇಕರು ಪಂಗಡಗಳಾಗಿ ಸಮಾವೇಶ, ಸಮ್ಮೇಳನ ನಡೆಸುತ್ತಿದ್ದಾರೆ.

ಕರ್ನಾಟಕದಲ್ಲಿ ಹಿಂದೂಯೇತರವಾದ ಒಂದು ಧರ್ಮದ ಮಾನ್ಯತೆಗಾಗಿ ಕಿತ್ತಾಟ ನಡೆಯುತ್ತಿರುವ ಈ ಸಂದರ್ಭದಲ್ಲಿ ಈ ಹಿಂದಿನ ಬಿಜೆಪಿ ಸರಕಾರದಲ್ಲಿ ಸಚಿವರಾಗಿದ್ದ ಆರ್.ಎಸ್.ಎಸ್.ನ ಕಾಲಾಳು ಒಬ್ಬರು ಒಂದು ಅಮೋಘ ಹೇಳಿಕೆ ಕೊಟ್ಟರು: 'ರಾಜಕೀಯ ಲಾಭಕ್ಕಾಗಿ ಸಮಾಜವನ್ನು ಒಡೆಯಬಾರದು.' ಎಂಥ ಅಮೂಲ್ಯವಾದ ಹೇಳಿಕೆ. ಇದನ್ನು ಹೇಳಿದ ಮಾಜಿ ಸಚಿವರು ತಾವು ನಡೆದು ಬಂದ ದಾರಿಯತ್ತ ಹಿಂತಿರುಗಿ ನೋಡಬೇಕು. ಬಾಬಾಬುಡನ್‌ಗಿರಿ, ದತ್ತಪೀಠದ ವಿವಾದವನ್ನು ಹುಟ್ಟುಹಾಕಿ ಹಿಂದೂ ಮುಸ್ಲಿಂ ಸಂಘರ್ಷ ನಡೆಸಿ ಒಂದು ಸಮಾಜವನ್ನು ಒಡೆದೇ ಇವರು ಶಾಸಕರಾಗಿದ್ದು. ಎಲ್. ಕೆ. ಅದ್ವಾನಿ ಈ ದೇಶದ ಜನರ ಬದುಕಿನ ಮೇಲೆ ರಥಯಾತ್ರೆ ನಡೆಸಿ, ಬಾಬ್ರಿ ಮಸೀದಿ ಧ್ವಂಸಮಾಡಿ ಸಾಮಾಜಿಕ ಸಂಘರ್ಷ ಉಂಟುಮಾಡಿಯೇ ಇಂದು ಬಿ.ಜೆ.ಪಿ. ಕೇಂದ್ರದಲ್ಲಿ ಅಧಿಕಾರಕ್ಕೆ ಬಂದದ್ದು. ಧರ್ಮ-ರಾಜಕೀಯ ಅಸ್ತ್ರದ ಮುಂಚೂಣಿಯಲ್ಲಿದ್ದರೆ ಈ ಥರದ ವಿಘಟನೆಗಳು ಮೇಲಿಂದ ಮೇಲೆ ನಡೆಯುತ್ತವೆ. ಆಗ ಹಸಿವಿನ ರಾಜಕಾರಣ ಮೂಲೆ ಸೇರಿ ಹಸುವಿನ ರಾಜಕಾರಣ ಮುಂಚೂಣಿಗೆ ಬರುತ್ತದೆ.

ಕರ್ನಾಟಕದಲ್ಲಿ ಲಿಂಗಾಯತ ಧರ್ಮ ಅಥವಾ ವೀರಶೈವ ಧರ್ಮದ ಬೇಡಿಕೆ ಧರ್ಮಾಧಾರಿತ ರಾಜಕಾರಣ ಮಾಡುವವರಿಗೆ ಆಘಾತವನ್ನುಂಟುಮಾಡಿದೆ. ಕರ್ನಾಟಕದಲ್ಲಿ ಈ ಬೇಡಿಕೆ ಮೊದಲೂ ಇತ್ತು. ಆದರೆ ಅದರ ಚರ್ಚೆಗೆ ಇಂದಿನ ಸಂದರ್ಭವನ್ನು ಸೃಷ್ಟಿಸಿದ್ದು ಮುಖ್ಯಮಂತ್ರಿ ಸಿದ್ದರಾಮಯ್ಯನವರು. ಬಿ.ಜೆ.ಪಿ., ಆರ್.ಎಸ್.ಎಸ್.ನವರು ಕರಾವಳಿಯಲ್ಲಿ ಕೆಂಡ ಹಿಡಿದು ತಿರುಗುತ್ತಿರುವಾಗ ಸಿದ್ದರಾಮಯ್ಯನವರು ಅವರದೇ 'ತಾತ್ವಿಕ' ನೆಲೆಯಿಂದ ಹಿಂದೂ ವಿಘಟನೆಯ ಬಿಸಿಗೆ ಗಾಳಿ ಬೀಸತೊಡಗಿದರು. ಲಿಂಗಾಯತ ಅಥವಾ ವೀರಶೈವ ಪ್ರತ್ಯೇಕ ಧರ್ಮದ ಬೇಡಿಕೆಗೆ ರಾಜಕೀಯ ಆಯಾಮ ಕೊಟ್ಟು ಬಾಯಲ್ಲಿ ಬೆಂಕಿ ಊದುತ್ತಿದ್ದ ಆರ್.ಎಸ್.ಎಸ್.ನವರ ಮೂಗಿನಿಂದ ನೀರುಬಿಟ್ಟರು. ಇದೂ ಸಹ ರಾಜಕೀಯ ನಡೆಯೇ.

ವೀರಶೈವ ಅಥವಾ ಲಿಂಗಾಯತ ಧರ್ಮ ಒಂದೆಯೇ, ಬೇರೆ ಬೇರೆಯೇ ಎಂಬ ಪ್ರಶ್ನೆ ಒಂದು ಕಡೆಯಾದರೆ ಇವು ಹಿಂದೂ ಧರ್ಮದ ಭಾಗವೇ ಎಂಬುದು ಇನ್ನೊಂದು ಪ್ರಶ್ನೆ. ವೀರಶೈವರು ಹಿಂದೂ ಧರ್ಮದ ಭಾಗ ಅಲ್ಲ ಎಂದು ಹೇಳಿಕೊಂಡರೂ ಪಂಚಾಚಾರ್ಯರ ನಡತೆ, ನಂಬಿಕೆ, ಆಚರಣೆಗಳು ವೈದಿಕರ

ಜೊತೆಗೆ ಸ್ಪರ್ಧೆಗಿಳಿದಿವೆ ಎಂಬುದನ್ನು ಗಮನಿಸಬೇಕು. ಈ ಆಚಾರ್ಯರಲ್ಲಿ ವೇದಪಂಡಿತರಿದ್ದಾರೆ, ವೇದಮೂರ್ತಿಗಳಿದ್ದಾರೆ. ಬ್ರಹ್ಮಸೂತ್ರಗಳಿಗೆ ಅವರದೇ ಶ್ರೀಕರ ಭಾಷ್ಯವಿದೆ. ಹಿಂದೂ ಧರ್ಮ ವೇದಮೂಲವನ್ನೇ ತನ್ನ ಅಸ್ಮಿತೆಗೆ ಬಳಸುವಾಗ ನಮ್ಮ ಪಂಚಾಚಾರ್ಯರು ವೇದಪಾಂಡಿತ್ಯಕ್ಕಾಗಿ ನಡೆಸುವ ಸ್ಪರ್ಧೆಯನ್ನು ಬಿಡದೇ ಅವರು ವೀರಶೈವ ಧರ್ಮ ಪ್ರತ್ಯೇಕ ಎಂದು ಹೇಳಲು ಸಾಧ್ಯವಾಗದು. ಮೂಲತಃ ದ್ರಾವಿಡರಾದ ಪಂಚಾಚಾರ್ಯರು ಆರ್ಯಮೂಲದ ಸಂಸ್ಕೃತಿಯ ದಾಸರಾದಾಗ ಅವರು ತಮ್ಮ ಧಾರ್ಮಿಕ ಅಸ್ಮಿತೆಯನ್ನು ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗದು.

ಬಸವಣ್ಣ ಮತ್ತು ಶರಣರು ಖಂಡಿತವಾಗಿಯೂ ಈ ಸನಾತನ, ವೇದಮೂಲದ ಧರ್ಮಕ್ಕೆ ಒಂದು ಪರ್ಯಾಯವನ್ನು ಕಂಡುಕೊಂಡರು. ವೇದ, ಆಗಮ, ತರ್ಕಗಳನ್ನು ಧಾರ್ಮಿಕತೆಯ, ಸಂಸ್ಕೃತಿಯ, ಶ್ರೇಷ್ಠತೆಯ ಸಂಕೇತಗಳನ್ನಾಗಿ ಮಾಡಿಕೊಂಡು ಸನಾತನಿಗಳು ಕುಣಿಯುತ್ತಿದ್ದಾಗ

*ವೇದಕ್ಕೆ ಒರೆಯಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,*
*ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗುಕೊಯಿವೆ, ನೋಡಯ್ಯಾ*
*ಮಹಾದಾನಿ ಕೂಡಲ ಸಂಗಮದೇವಾ,*
*ಮಾದಾರ ಚನ್ನಯ್ಯನ ಮನೆಯ ಮಗ ನಾನಯ್ಯಾ*

ಎಂದು ಬಸವಣ್ಣನವರು ಹೇಳುತ್ತಾರೆ. ಈ ಶರಣ ಚಳುವಳಿ ಹಿಂದೂ ಧರ್ಮಕ್ಕೆ ಪ್ರತಿರೋಧವನ್ನು ಮಾತ್ರ ಒಡ್ಡಲಿಲ್ಲ, ಒಂದು ಪರ್ಯಾಯವಾಗಿ ರೂಪಗೊಂಡಿತು. ವರ್ಣಾಶ್ರಮ ವ್ಯವಸ್ಥೆಯ ಮೇಲೆ ಸ್ಥಾಪಿತವಾದ ಧರ್ಮದ ಅಡಿಪಾಯವನ್ನೇ ಪ್ರಶ್ನಿಸಿ "ಆವ ಕುಲವಾದಡೇನು? ಶಿವಲಿಂಗವಿದ್ದವನೆ ಕುಲಜನು, ಕುಲವನರಸುವರೆ ಶರಣರಲ್ಲಿ ಜಾತಿ ಸಂಕರವಾದ ಬಳಿಕ?" ಎಂದು ಜಾತಿವ್ಯವಸ್ಥೆಯಿಲ್ಲದ ಒಂದು ಶರಣ ಸಂಕುಲವನ್ನು ಸೃಷ್ಟಿಸುತ್ತಾರೆ. ಅವರನ್ನು ಲಿಂಗಾಯತರು ಎಂದಿದ್ದೇವೆ. ವೈದಿಕರಿಗೆ ಚಿಂತನೆ, ನಡತೆ, ಆಚಾರ, ವಿಚಾರ ಹೀಗೆ ಎಲ್ಲದರಲ್ಲಿಯೂ ಪರ್ಯಾಯವನ್ನು ಸೂಚಿಸುವ ಶರಣರನ್ನು ಲಿಂಗಾಯತ ಧರ್ಮದವರು ಎಂದು ಕರೆದರೆ ಖಂಡಿತ ಲಿಂಗಾಯತ ಧರ್ಮ ಹಿಂದೂ ಧರ್ಮದ ಶಾಖೆಯಲ್ಲ. ಅದೊಂದು ಪ್ರತ್ಯೇಕ ಧರ್ಮ ಆಗುವ ಎಲ್ಲ ಅರ್ಹತೆಯನ್ನೂ ಪಡೆದಿದೆ.

ಶರಣರ ಧರ್ಮವನ್ನು ಲಿಂಗಾಯತ ಧರ್ಮ ಎಂದು ಕರೆಯಬಹುದಾದರೆ ಖಂಡಿತ ಅದೊಂದು ಮಾನವೀಯ ಧರ್ಮ. ಜಾತಿಯನ್ನೇ ನಾಶಮಾಡಲು ಹೊರಟ ಒಂದು ಪಂಥವನ್ನು ಹಿಂದೂ ಧರ್ಮದ ಒಂದು ಜಾತಿ ಎಂದು ಹೇಳಿದರೆ ಅದೊಂದು ಚಾರಿತ್ರಿಕ ಅಪರಾಧವೇ ಸರಿ. ಅಂದಿನ ಲಿಂಗಾಯತರ ನಡೆನುಡಿ, ಆಚಾರ-ವಿಚಾರಗಳು ಪ್ರತ್ಯೇಕ ಧರ್ಮದ ಲಕ್ಷಣಗಳನ್ನು ಹೊಂದಿದ್ದವು. ಆದರೆ ಇಂದು ಲಿಂಗವಂತರೆಂದು ಕರೆಸಿಕೊಳ್ಳುವವರು ಅಂಥ ಲಕ್ಷಣಗಳನ್ನು ಉಳಿಸಿಕೊಂಡಿದ್ದಾರೆಯೆ? ಪಂಚಾಚಾರ್ಯರು, ವಿರಕ್ತರ ನಡುವೆ ಕೆಲವು ಆಚರಣೆಗಳು ಭಿನ್ನವಿರಬಹುದು ಆದರೆ ಶ್ರೇಷ್ಠತೆಯ ಪ್ರಶ್ನೆ ಬಂದಾಗ, ಶರಣರು ಮಾಡಿದಂತೆ ಅಸ್ಪೃಶ್ಯತೆಯನ್ನು ತೊಲಗಿಸಲು ಸಿದ್ಧರಿದ್ದಾರೆಯೆ? ಅದು ಲಿಂಗಾಯತವೇ ಆಗಿರಲಿ, ವೀರಶೈವ ಲಿಂಗಾಯತವೇ ಆಗಿರಲಿ ವೈದಿಕರಿಗೆ ಪರ್ಯಾಯವಾದ, ಬಸವಣ್ಣನವರು ಹೇಳಿದ್ದ 'ಮಾದಾರ ಚನ್ನಯ್ಯನ ಮಗ ನಾನಯ್ಯ' ಎಂಬ ತತ್ವವನ್ನು ಒಪ್ಪುತ್ತಾರೆಯೇ? ಹಿಂದೂ ಧರ್ಮದ ಅಡಿಪಾಯವನ್ನೇ ಅಲ್ಲಾಡಿಸಿದ 'ವರ್ಣಸಂಕರ'ಕ್ಕೆ ಸಿದ್ಧರಿದ್ದಾರೆಯೇ? ಮಾದಾರಚನ್ನಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಮಡಿವಾಳ ಮಾಚಿದೇವ, ಸತ್ಯಕ್ಕ, ಲಕ್ಕಮ್ಮ ಮುಂತಾದ ಎಲ್ಲ ಜಾತಿಗಳವರನ್ನು ಅಪ್ಪಿಕೊಳ್ಳಲು ಸಿದ್ಧರಿದ್ದಾರೆಯೆ? ಕೇವಲ ಮೇಲಿರುವ ಸನಾತನಿಗಳಿಂದ, ವೈದಿಕರಿಂದ ದೂರವಾಗಿ ಪ್ರತ್ಯೇಕ ಧರ್ಮವಾದರೆ ಸಾಲದು; ವೈದಿಕರ, ಶೈವರ ಆಚಾರಗಳಿಗೆ ಪರ್ಯಾಯವಾಗಿ ಒಂದು ಕುಲವಿಲ್ಲದ, ಮೇಲರಿಮೆ ಕೀಳರಿಮೆ ಇಲ್ಲದ, ಇಷ್ಟಲಿಂಗ ಉಪಾಸನೀಯ, ಕಾಯಕವನ್ನೇ ಕೈಲಾಸವೆನ್ನುವ ಶರಣರ ಆದರ್ಶಗಳನ್ನು ಪಾಲಿಸಿದಾಗ ಮಾತ್ರ ಅದು ಪ್ರತ್ಯೇಕ ಧರ್ಮವಾಗುತ್ತದೆ. ಅದಕ್ಕೆ ವೀರಶೈವವಾದರೂ ಎನ್ನಿ, ಲಿಂಗಾಯತವಾದರೂ ಅನ್ನಿ. ಪಂಚಾಚಾರ್ಯರಿಗೆ, ವಿರಕ್ತರಿಗೆ ತಮ್ಮ ನಾಮಾಂಕಿತಗಳು ಪ್ರತಿಷ್ಠೆಯ ಪ್ರಶ್ನೆಯಾದರೆ ವೀರಶೈವರನ್ನೂ, ಲಿಂಗಾಯತರನ್ನೂ ಒಳಗೊಂಡ 'ಶರಣ ಧರ್ಮ' ಎಂದು ಕರೆಯಬಹುದು. ಆದರೆ ಶರಣ ಧರ್ಮ ಸನಾತನಿ ವೈದಿಕರಿಗಿಂತ ಭಿನ್ನವಾದ, ಪ್ರತಿಯಾದ, ಪರ್ಯಾಯವಾದ ಧರ್ಮ ಎಂಬುದನ್ನು ಗಮನಿಸಬೇಕು.

ಇಷ್ಟಕ್ಕೂ ಈಗ ಎದ್ದಿರುವ ಕೂಗು ನಾವು ಹಿಂದೂಗಳಲ್ಲ ಅಲ್ಪಸಂಖ್ಯಾತರು ಎಂಬ ಕಾರಣಕ್ಕಾಗಿ. ಇದು ಶರಣರು ವೈದಿಕರನ್ನು ವಿರೋಧಿಸಿದ ಕಾರಣಕ್ಕಲ್ಲ, ಭಾರತದ ಸಂವಿಧಾನದ ಅನುಚ್ಛೇದ ೩೦ರನ್ವಯ ಅಲ್ಪಸಂಖ್ಯಾತ ಸೌಲಭ್ಯಗಳನ್ನು ಪಡೆಯಲು. ಇದರಿಂದ ಅಪಾರ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವವರಿಗೆ ಲಾಭ ಆಗುವುದು ಖಂಡಿತ. ಇಂಥದ್ದೇ ಒಂದು ಕೇಸು ೧೯೯೫ರಲ್ಲಿ ಸುಪ್ರೀಂ ಕೋರ್ಟಿನ ಮುಂದಿತ್ತು. ಬ್ರಹ್ಮಚಾರಿ ಸಿದ್ದೇಶ್ವರ ಭಾಯಿ ವಿರುದ್ಧ ಪಶ್ಚಿಮ ಬಂಗಾಲ ರಾಜ್ಯ (೨ ಜುಲೈ ೧೯೯೫) ರಾಮಕೃಷ್ಣ ಮಿಶನ್‌ನವರು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳನ್ನು ಭಾರತದ ಸಂವಿಧಾನದ ಅನುಚ್ಛೇದ ೨೬ (ಅ) ಮತ್ತು ೩೦ (೧) ಅಡಿಯಲ್ಲಿ ಉಳಿಸಿಕೊಳ್ಳಲು ತಮ್ಮದು ಹಿಂದೂ ಧರ್ಮದ ಭಾಗವಲ್ಲ, ತಾವು ಅಲ್ಪಸಂಖ್ಯಾತರು ಎಂದು ಘೋಷಿಸುವಂತೆ ನ್ಯಾಯಾಲಯದ ಮೆಟ್ಟಿಲೇರಿದ್ದರು. ಪಶ್ಚಿಮ ಬಂಗಾಲ ಸರಕಾರದ ಆಡಳಿತ






**■ ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ವ್ಯಾಪ್ತಿಯಿಂದ ತಮ್ಮ ಶಾಲೆಗಳನ್ನು ಹೊರಗುಳಿಸುವ ಒಂದೇ ಕಾರಣಕ್ಕೆ ತಾವು ಹಿಂದೂಗಳೇ ಅಲ್ಲ, ರಾಮಕೃಷ್ಣ, ವಿವೇಕಾನಂದ ಅವರು ಹಿಂದೂಗಳಾಗಿರಲಿಲ್ಲ, ವಿಶ್ವದ ಎಲ್ಲ ಧರ್ಮಗಳ ಸಾರವನ್ನು ಒಳಗೊಂಡ ಒಂದು ವಿಶ್ವಧರ್ಮ ನಮ್ಮದು ಎಂದು ವಾದ ಮಾಡಿದ್ದರು. ಕೆಳಹಂತದ ನ್ಯಾಯಾಲಯದಲ್ಲಿ ಯಶಸ್ವಿಯಾದರೂ ಸುಪ್ರೀಂ ಕೋರ್ಟ್‌ನಲ್ಲಿ ಯಶಸ್ವಿ ಆಗಲಿಲ್ಲ. ಕೇವಲ ಕೆಲವು ಲಾಭಗಳಿಗಾಗಿ ಅಲ್ಪಸಂಖ್ಯಾತರಿಗೆ, ಅವರ ಶಿಕ್ಷಣ ಸಂಸ್ಥೆಗಳಿಗೆ ಇರುವ ಸೌಲಭ್ಯಗಳಿಗಾಗಿ ಮಾತ್ರ ಪ್ರತ್ಯೇಕ ಧರ್ಮ ಸಲ್ಲದು. ಜಾತಿ, ಮೇಲು, ಕೀಳು, ಅಸ್ಪೃಶ್ಯತೆ, ಮೌಢ್ಯ ಇಲ್ಲದ, ಸಮಾನತೆ ಮಾನವೀಯತೆ, ಕಾಯಕಕ್ಕೆ ಗೌರವ ಪ್ರೀತಿ ಘನತೆ ತುಂಬಿದ ಒಂದು ಸಮಾಜ ಬೇಕಾಗಿದೆ. ಅದು ಧರ್ಮದ ಹೆಸರಿನಲ್ಲಿಯೇ ಬೇಕೆಂದೇನೂ ಅಲ್ಲ. ಆದರೆ ಈಗ ಅಂಥ ಒಂದು ಸಮಾಜ ಧರ್ಮದ ಹೆಸರಿನಲ್ಲಿ ಬರುವುದಾದರೆ ಬರಲಿ. ಹೆಸರೇನೇ ಇದ್ದರೂ ಶರಣರ ಆಶಯದ ಒಂದು ಸಮತಾ ಸಮಾಜ ಅಸಮಾನತೆ, ಅಸ್ಪೃಶ್ಯತೆಯ ವ್ಯವಸ್ಥೆಗೆ ಪರ್ಯಾಯವಾಗಿ ಬರಲಿ.

## ಮಧ್ಯರಾತ್ರಿಯಲ್ಲಿ ಮಹಿಳೆಗೆ ಓಡಾಡುವ ಸ್ವಾತಂತ್ರ್ಯ

ನಮ್ಮ ದೇಶ ಸ್ವಾತಂತ್ರ್ಯೋತ್ಸವದ ೭೦ನೇ ಹುಟ್ಟು ಹಬ್ಬವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ 'ಮಧ್ಯರಾತ್ರಿಯಲ್ಲಿ ಮಹಿಳೆಗೆ ಓಡಾಡುವ ಸ್ವಾತಂತ್ರ್ಯ ಬಂದಿದೆಯೇ' ಎಂದು ಪ್ರಶ್ನಿಸಿಕೊಳ್ಳುವುದು ಎಷ್ಟು ಸರಿಯಾಗುತ್ತದೆ? ಗಾಂಧೀಜಿಯವರ 'ಮಹಿಳಾ ಸ್ವಾತಂತ್ರ್ಯ'ದ ಪರಿಕಲ್ಪನೆಯಲ್ಲಿ ಇದೂ ಒಂದು ಅಂಶವಾಗಿತ್ತು. ಅದಿನ್ನೂ ಈಡೇರಿಸಲಾಗದ ಆಶಯವಾಗಿದೆಯೆನ್ನುವುದು ಇಂದಿನ ನಮ್ಮ ದೇಶದ ಪರಿಸ್ಥಿತಿಯನ್ನು ತೋರಿಸುತ್ತದೆ. ೨೦೧೨ರ ಡಿಸೆಂಬರ್‌ನಲ್ಲಿ ತನ್ನ ಸ್ನೇಹಿತನೊಡನೆ ರಾತ್ರಿ ಸಿನಿಮಾ ನೋಡಿ ಹಿಂತಿರುಗುವಾಗ ಬಸ್ ಏರಿ ಪಾತಕಿಗಳಿಂದ ಅತ್ಯಾಚಾರಕ್ಕೊಳಗಾಗಿ ಕೊನೆಗೆ ಮೃತ್ಯುವನ್ನಪ್ಪಿದ ನಿರ್ಭಯಾಳ ಬಗ್ಗೆ ಅಂದು ಸಮಾಜದ ಪ್ರತಿಷ್ಠಿತರೂ ಸೇರಿದಂತೆ ಹಲವು ಮಂದಿ ಮಾತನಾಡುವಾಗ ಸಂತ್ರಸ್ತೆಯನ್ನೇ ನಿಂದಿಸಿದ್ದರು. ಅವಳು ರಾತ್ರಿ ವೇಳೆ ಏಕೆ ಓಡಾಡಬೇಕಿತ್ತು? ಕುಟುಂಬದ ಸದಸ್ಯರಲ್ಲದವರ ಜೊತೆ ಏಕೆ ಓಡಾಡಬೇಕಿತ್ತು? ಅಪರಾಧಿಯೂ, ಅವನ ಪರ ವಕೀಲನೂ ಸೇರಿದಂತೆ ಹಲವಾರು ಮಂದಿ ಇದೇ ಪ್ರಶ್ನೆಯನ್ನು ಮುಂದೊಡ್ಡಿದ್ದರು.

ಇತ್ತೀಚೆಗೆ ವರದಿಯಾಗಿರುವ ಆಗಸ್ಟ್ ೫ರಂದು ಚಂಡೀಗಢದಲ್ಲಿ ೨೯ರ ಹರೆಯದ ವರ್ಣಿಕಾ ಕುಂಡು ಎದುರಿಸಿದ ಪ್ರಸಂಗ ಕೂಡ ಇಂದು ನಮ್ಮ ಮುಂದೆ ಹಲವಾರು ಪ್ರಶ್ನೆಗಳನ್ನು ಬಿಚ್ಚಿಡುತ್ತದೆ. ಡಿಜೆಯಾಗಿ ವೃತ್ತಿ ನಿರ್ವಹಿಸುತ್ತಿರುವ ವರ್ಣಿಕಾ ತನ್ನ ಕೆಲಸ ಮುಗಿಸಿ ಮಧ್ಯರಾತ್ರಿಯಲ್ಲಿ ತನ್ನ ಕಾರಿನಲ್ಲಿ ಪ್ರಯಾಣಿಸುತ್ತಿದ್ದಾಗ ಅವಳನ್ನು ಹಿಂಬಾಲಿಸಿದ ಸಾಕಷ್ಟು ಕುಡಿದಿದ್ದ ವಿಕಾಸ್ ಬರಾಲಾ ಮತ್ತು ಆಶಿಶ್ ಕುಮಾರ್ ಇಬ್ಬರೂ ಅವಳನ್ನು ಸುಮಾರು ಏಳು ಕಿಲೋಮೀಟರ್‌ವರೆಗೆ ಹಿಂಬಾಲಿಸಿದ್ದೇ ಅಲ್ಲದೆ ಕಾರಿಗೆ ಅಡ್ಡಗಟ್ಟಿ ಅವಳ ಕಾರಿನ ಕಿಟಕಿಯನ್ನು ತೆಗೆಯಲು ಪ್ರಯತ್ನಿಸಿದರು. ಪರಿಸ್ಥಿತಿಯ ಗಂಭೀರತೆಯ ಅರಿವಾದ ವರ್ಣಿಕಾ ಕಾರನ್ನು ಜೋರಾಗಿ ಓಡಿಸಿಕೊಂಡು ಹೋಗಿ ಪೊಲೀಸರಲ್ಲಿ ದೂರು ಸಲ್ಲಿಸಿದಳು. ಹರಿಯಾಣ ಬಿಜೆಪಿಯ ಪಕ್ಷದ ಅಧ್ಯಕ್ಷ ಸುಭಾಷ್ ಬರಾಲಾನ ಮಗನಾದ ವಿಕಾಸ್ ಬರಾಲಾ ಮತ್ತು ಅವನ ಗೆಳೆಯ ಆಶೀಶ್ ಕುಮಾರ್ ಇಬ್ಬರೂ ಕಾನೂನು ವಿದ್ಯಾರ್ಥಿಗಳು. ಆರೋಪಿಗಳ ಆರೋಪವನ್ನು "ಬೆನ್ನಟ್ಟಿ ಬಂದ ಅಪರಾಧ"ವೆಂದು ದಾಖಲಿಸಿಕೊಂಡು ಪೊಲೀಸರು ಅವನ ಮೇಲಿನ ಅಪರಾಧವನ್ನು ಕೈಬಿಟ್ಟರು. ಬಿಜೆಪಿಯ ಕಾರ್ಯಕರ್ತರು ಪೊಲೀಸ್ ಠಾಣೆಗೆ ಹೋಗಿ ದುಂಡಾವರ್ತಿ ಮಾಡಿದ್ದು ಇದಕ್ಕೆ ಕಾರಣವಾಗಿರಬಹುದು. ಇಷ್ಟಾದರೂ ಪಟ್ಟುಬಿಡದೆ ಹೋರಾಟ ನಡೆಸಿದ ವರ್ಣಿಕಾ ಪ್ರಕರಣ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸುದ್ದಿಯಾಯಿತು. ಪಕ್ಷ, ಪ್ರತಿ ಪಕ್ಷಗಳ ಒತ್ತಾಯದ ಮೇರೆಗೆ ವಿಕಾಸ್ ಬರಾಲಾ ಮತ್ತು ಆಶಿಶ್ ಕುಮಾರನನ್ನು 'ಅಪಹರಣ'ದ ಆಪಾದನೆಯ ಮೇಲೆ ಈಗ ಬಂಧಿಸಲಾಗಿದೆ.

ಈ ಪ್ರಕರಣದಲ್ಲಿ ಗಮನಿಸಬೇಕಾದ ಸಂಗತಿಯೇನೆಂದರೆ ಸಂತ್ರಸ್ತೆ ಮತ್ತು ಆರೋಪಿಯಿಬ್ಬರೂ ಅನುಕೂಲಸ್ಥ ಕುಟುಂಬದಿಂದ ಬಂದವರಾಗಿದ್ದು, ಹಲವಾರು ಸವಲತ್ತುಗಳನ್ನುಳ್ಳವರು. ಐ.ಎ.ಎಸ್ ಅಧಿಕಾರಿಯ ಮಗಳಾದ ವರ್ಣಿಕಾ ಕುಂಡುಗಿರುವ ಧೈರ್ಯ, ಸಾಮರ್ಥ್ಯದ ಜೊತೆಗೆ ತಂದೆಯ ಬೆಂಬಲವೂ ಸಿಕ್ಕಿದೆ. ಅವಳ ಮಾತಿನಲ್ಲೇ ಹೇಳುವುದಾದರೆ, "ನಾನು ಕಾರಿನಲ್ಲಿ ಪ್ರಯಾಣಿಸುತ್ತಿದ್ದೆ. ನನಗೆ ಸವಲತ್ತಿನ ಜೀವನವಿದೆ. ಅದೂ ಪಟ್ಟಣದಲ್ಲಿರುವೆ. ಈ ಜಾಗದಲ್ಲೇ ಇಂತಹ ಕೃತ್ಯಗಳು ನಡೆಯಬಹುದಾದರೆ, ಇನ್ನು ಚಿಕ್ಕ ಪಟ್ಟಣಗಳಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿ ಇರುವ ಮಹಿಳೆಯರಿಗೆ ಯಾವುದೇ ಭರವಸೆಯಿಲ್ಲ." ಅವಳಿಗೆ ಮತ್ತು ಅವಳ ತಂದೆಗೆ ಎಷ್ಟೇ ಬೆದರಿಕೆಗಳು ಬಂದಿದ್ದರೂ ಹಿಮ್ಮೆಟ್ಟದೆ, ತಾನು ಕಡೆಯವರೆಗೂ ಹೋರಾಡುವ ಛಲವನ್ನು ವ್ಯಕ್ತಪಡಿಸುತ್ತಿರುವ ವರ್ಣಿಕಾ " ನನ್ನ ಹೋರಾಟ ಒಬ್ಬ ವ್ಯಕ್ತಿಯ ವಿರುದ್ಧವಲ್ಲ. ಇಲ್ಲಿನ ಎಲ್ಲಾ ವಿಕಾಸ್ ಬರಾಲಾರಂತಹ ಪುರುಷರ ವಿರುದ್ಧ. ಈ ನನ್ನ ಹೋರಾಟದಿಂದ ಮಹಿಳೆಯರು ಹೆಚ್ಚು ಧೈರ್ಯ ಮತ್ತು ಆತ್ಮವಿಶ್ವಾಸ ಹೊಂದುವಂತಾಗಲಿ," ಎನ್ನುತ್ತಾಳೆ. ಅವಳ ಧೈರ್ಯವನ್ನು ಮೆಚ್ಚಿ ದೇಶಾದ್ಯಂತ ಮಹಿಳೆಯರ ಬೆಂಬಲ ಮತ್ತು ಪ್ರಶಂಸೆಯ ಮಹಾಪೂರವೇ ಹರಿದುಬಂದಿದೆ.

'ಬೇಟಿ ಬಚಾವೋ, ಬೇಟಿ ಪಢಾವೋ" ಎಂದು ಹೆಣ್ಣುಮಕ್ಕಳ ಬಗ್ಗೆ ತಮ್ಮ ಕಳಕಳಿ ವ್ಯಕ್ತಪಡಿಸುವ ಭಾರತೀಯ ಜನತಾ ಪಕ್ಷ ಈ ಪ್ರಕರಣಕ್ಕೆ ಪ್ರತಿಕ್ರಿಯಿಸಿದ ರೀತಿ ಹಾಸ್ಯಾಸ್ಪದವಾಗಿತ್ತು. ಆರೋಪಿಯನ್ನು ಬೆಂಬಲಿಸಲು ಪಕ್ಷದ ಕಾರ್ಯಕರ್ತರು ಪೊಲೀಸ್ ಠಾಣೆಗೆ ಹೋಗಿದ್ದಲ್ಲದೆ, "ಅವಳು ಅವಿವಾಹಿತೆ, ನೈತಿಕ ಮೌಲ್ಯಗಳಿಲ್ಲದವಳು" ಎಂದು ಅವಳ ಮೇಲೆ ಗೂಬೆ ಕೂರಿಸುವ ಪ್ರಯತ್ನ ಮಾಡಿದರು. ಅಪರಾಧ ಸಾಬೀತಾಗದಿರಲಿ ಎಂದು ಸಿಸಿಟಿವಿ ಕ್ಯಾಮರಾಗಳು ದಿಢೀರನೆ ಕೆಟ್ಟುಹೋಗಿವೆ. ಬಿಜೆಪಿಯ ಉಪಾಧ್ಯಕ್ಷ "ಇಂತಹ ಘಟನೆಗಳು ಸರ್ವೇಸಾಮಾನ್ಯ. ರಾತ್ರಿ ಅವೇಳೆ ಹೊತ್ತಿನಲ್ಲಿ ಓಡಾಡುವ ಹೆಂಗಸರಿಗೆ ಇಂತಹ ಸಂದರ್ಭಗಳು ಉಂಟಾಗಬಹುದು. ಆದ್ದರಿಂದ ಹೆಣ್ಣುಮಕ್ಕಳ ತಾಯ್ತಂದೆಯರು ತಮ್ಮ ಮಕ್ಕಳು ಸಂಜೆ ಮತ್ತು ರಾತ್ರಿಯ ವೇಳೆಯಲ್ಲಿ ಬೀದಿಯಲ್ಲಿ ಓಡಾಡದಂತೆ ನೋಡಿಕೊಳ್ಳಬೇಕು" ಎಂದು ಉಪದೇಶವನ್ನೂ ಮಾಡಿದ್ದಾಯಿತು.

ಸ್ವಾತಂತ್ರ್ಯಾನಂತರದ ಎಪ್ಪತ್ತು ವರ್ಷಗಳ ನಂತರವೂ ಹೆಣ್ಣಿನ ಸಾರ್ವಜನಿಕ ಸ್ಪೇಸನ್ನು ಕುಗ್ಗಿಸುತ್ತಲೇ ಹೊರಟಿರುವ ನಮ್ಮ ಸಮಾಜ ಮತ್ತು ಅದನ್ನು ಬೆಂಬಲಿಸುವ ಸರ್ಕಾರದ ಧೋರಣೆಯು ಸಂಕುಚಿತವಾಗುತ್ತಿದೆ. ಮಹಿಳೆಯರಿಗೆ ರಾತ್ರಿ ಪಾಳಿ ಕೆಲಸ ನಿಷಿದ್ಧ ಮಾಡಬೇಕೆ, ಎಂಬ ಚಿಂತನೆಗಳು ನಡೆಯುತ್ತಿವೆ. ಇಂದಿನ ಕಾರ್ಪೊರೇಟೀಕರಣದ ಜಗತ್ತಿನಲ್ಲಿ ಇಂತಹ ಚಿಂತನೆಗಳು ವಾಸ್ತವವೂ ಅಲ್ಲ, ಒಳ್ಳೆಯದೂ ಅಲ್ಲ. ಅವು ಮಹಿಳೆಯರ ಸಂಕೋಲೆಯನ್ನು ಇನ್ನೂ ಬಿಗಿಗೊಳಿಸುತ್ತವೆ. ನಿರ್ಭಯಾ ಪ್ರಕರಣದ ನಂತರ ಮಹಿಳೆಯರ ನಡವಳಿಕೆಗಳ ಬಗ್ಗೆ ಅತಿರೇಕದ ಪ್ರತಿಕ್ರಿಯೆಯನ್ನು ಪ್ರತಿಭಟಿಸಿ ಮಹಿಳಾ ಸಂಘಟನೆಗಳು ದೇಶದ ಹಲವಾರು ಭಾಗಗಳಲ್ಲಿ ಮತ್ತು ಕರ್ನಾಟಕದಲ್ಲೂ ಮಧ್ಯರಾತ್ರಿಯಲ್ಲಿ ಪ್ರತಿಭಟನೆ ಹೊರಟು 'ನಮಗೆ ಮಧ್ಯರಾತ್ರಿಯಲ್ಲಿ ನಡೆಯುವ ಸ್ವಾತಂತ್ರ್ಯ ಬೇಕು' ಎಂದು ಘೋಷಿಸಿವೆ. ಇಂತಹ ಪರಿಸರ ನಿರ್ಮಾಣವಾಗ ಬೇಕಾದರೆ ಇಡೀ ಸಮಾಜದ ಎಲ್ಲ ಅಂಗಗಳ ಭಾಗವಹಿಸುವಿಕೆ ಮುಖ್ಯ. ಅಷ್ಟೇ ಅಲ್ಲ 'ಸಂಸ್ಕೃತಿ' ಎಂಬುದರ ವ್ಯಾಖ್ಯಾನವೂ ಬದಲಾಗಬೇಕು. ದಿನನಿತ್ಯ ನಡೆಯುತ್ತಿರುವ ಮಹಿಳಾ ದೌರ್ಜನ್ಯದ ಪ್ರಕರಣಗಳ ನಡುವೆಯೂ ಹೆಣ್ಣು ಸ್ವತಂತ್ರವಾಗಿ ತಲೆಯೆತ್ತಿ ನಿಲ್ಲುತ್ತಾ, ಪಿತೃಪ್ರಾಧಾನ್ಯತೆಯ ಕಟ್ಟಡದ ಒಂದೊಂದೇ ಇಟ್ಟಿಗೆಯನ್ನು ಕೆಡವುತ್ತಿರುವ ಈ ಸಂದರ್ಭದಲ್ಲಿ ಹೆಣ್ಣಿಗೆ 'ಸುರಕ್ಷೆ ಮತ್ತು ಸ್ವಾತಂತ್ರ್ಯ' ಎರಡೂ ಮೂಲಭೂತ ಹಕ್ಕಾಗಬೇಕು. ಹೊಸ ಮಾನವೀಯ ಸಂಸ್ಕೃತಿಯ ಆವಿರ್ಭಾವವಾಗಬೇಕು.

*(ಈ ತಿಂಗಳು ೩ನೇ ಪುಟದಿಂದ)*

ಕಾಂಗ್ರೆಸ್ಸಿನಲ್ಲಿ. ವಿಚಿತ್ರ ಎಂದರೆ ಇಷ್ಟೆಲ್ಲ ಅವಾಂತರ ಎಬ್ಬಿಸಿದರೂ ಭಾಜಪಗೆ ನಿರೀಕ್ಷಿತ ಫಲ ದೊರಕದೇ ಹೋಯಿತು. ಅದೂ ಕೂಡ ಕಾಂಗ್ರೆಸ್ ಶಾಸಕರ ಪೆದ್ದುತನದಿಂದ, ಇಬ್ಬರು ಶಾಸಕರು ಋಣಮುಕ್ತರಾಗಲು ಭಾಜಪ ಏಜಂಟರಿಗೆ ತಮ್ಮ ಮತ ಪತ್ರಗಳನ್ನು ತೋರಿಸಿದ್ದು ಸಿಸಿಟಿವಿಯಲ್ಲಿ ದಾಖಲಾಗಿದ್ದುದರಿಂದ. ಚುನಾವಣಾ ಆಯೋಗದ ಮುಂದೆ ವಾದ ಪ್ರತಿವಾದಗಳು ಮಂಡನೆಯಾಗಿ ತಡರಾತ್ರಿ ವೇಳೆಗೆ ಫಲಿತಾಂಶ ಪ್ರಕಟಗೊಂಡು ಕಾಂಗ್ರೆಸ್ ಜಯ ಗಳಿಸಿದಾಗ ಮತಗಳು ತಿರಸ್ಕೃತವಾದ್ದೇ ಭಾಜಪಗೆ ಮುಳುವಾಯಿತು. ಈ ಇಡೀ ಪ್ರಕರಣದ ತಿರುವು ಚುನಾವಣಾ ರಾಜಕೀಯ ಎಷ್ಟು ಹೊಲಸು ಎಂಬುದನ್ನು, ಹಣದ ಆಮಿಷ ಎಂಥದ್ದು ಎಂಬುದನ್ನು ತೋರಿಸುತ್ತದೆ.

✶ ✶ ✶

ಉತ್ತರ ಪ್ರದೇಶ ಭಾರತದ ಅತಿ ದೊಡ್ಡ ರಾಜ್ಯ. ಅದು ಸದಾ ಸುದ್ದಿಯಲ್ಲಿರುತ್ತದೆ ನಾನಾಕಾರಣಗಳಿಗಾಗಿ. ಅತಿ ಹೆಚ್ಚು ಪ್ರಧಾನಿಗಳನ್ನು ಒದಗಿಸಿರುವುದಷ್ಟೇ ಅಲ್ಲ, ಅಷ್ಟೇ ಹೆಚ್ಚು ದುರಂತಗಳನ್ನು ನೀಡಿರುವ ರಾಜ್ಯ. ಯಾವುದೇ ಸರಕಾರ ಬರಲಿ ಅದು ಮುಲಾಯಮ್ ಸಿಂಗ್ ಎಸ್.ಪಿ., ಕಾಂಗ್ರೆಸ್, ಭಾಜಪ ಅಥವಾ ಮಾಯಾವತಿಯ ಬಿಎಸ್‌ಪಿ ಆಗಿರಲಿ ಹಗರಣಗಳಿಲ್ಲದೆ ಇರುವುದಿಲ್ಲ. ಎಷ್ಟೇ ಆಗಲಿ ಅದು ರಾಮಜನ್ಮಭೂಮಿ ತಾನೆ. ಈಗ ಈ ರಾಜ್ಯ ಮೋದಿ ಆಯ್ದ ಯೋಗಿ ಆದಿತ್ಯನಾಥ ಎಂಬ 'ಸಂನ್ಯಾಸಿ'ಯ ಆಡಳಿತದಲ್ಲಿದೆ. ಬಾಬ್ರಿ ಮಸೀದಿ ಧ್ವಂಸಕ್ಕೆ ಅಂತರರಾಷ್ಟ್ರೀಯವಾಗಿ ಸುದ್ದಿ ಮಾಡಿದ ಈ ರಾಜ್ಯ ಈಗ ಅರವತ್ತಕ್ಕೂ ಹೆಚ್ಚು ಮಕ್ಕಳನ್ನು ಆಹುತಿ ತೆಗೆದುಕೊಂಡು ಪ್ರಚಾರದಲ್ಲಿದೆ. ಸಕಾಲದಲ್ಲಿ ಆಮ್ಲಜನಕದ ಸರಬರಾಜಾಗದೆ ಸರಕಾರಿ ಆಸ್ಪತ್ರೆಯಲ್ಲಿ ಮಕ್ಕಳು ಅಸು ನೀಗಿವೆ. ಯೋಗಿ ಸರಕಾರ ಈ ದುರಂತವನ್ನು ಮುಚ್ಚಿಹಾಕಲು ನೋಡುತ್ತಿದೆ, ಸರಕಾರದ ಹೊಣೆಗಾರಿಕೆಯಿಂದ ಜಾರಿಕೊಳ್ಳಲು ತವಕಿಸುತ್ತಿದೆ. ಸರಕಾರದ ಪ್ರಕಾರ ಮಕ್ಕಳು ಮರಣಿಸಿದ್ದು ಮಿದುಳು ಜ್ವರದಿಂದ, ಆಮ್ಲಜನಕದ ಕೊರತೆಯಿಂದ ಅಲ್ಲ. ಆದರೆ ಆಸ್ಪತ್ರೆಗಳ ಮೂಲಗಳ ಪ್ರಕಾರ ದುರಂತ ಸಂಭವಿಸಿದ್ದು ಆಮ್ಲಜನಕದ ಕೊರತೆಯಿಂದಲೇ. ಸರಕಾರವೇನೋ ತನಿಖೆಗೆ ಆದೇಶ ನೀಡಿದೆ. ಆದರೆ ಹೋದ ಮಕ್ಕಳು ತಿರುಗಿಬಾರವು. ಈ ದುರಂತ ಸಂಭವಿಸಿದ್ದು ಕೂಡ ಆದಿತ್ಯನಾಥನ ಕ್ಷೇತ್ರ ಗೋರಖಪುರದಲ್ಲೇ. ದೇಶದಲ್ಲಿ ಇಂಥ ದುರಂತಗಳು ಸಂಭವಿಸುತ್ತಲೇ ಇರುತ್ತವೆ ಸರಕಾರಗಳ ಅಲಕ್ಷ್ಯದಿಂದಾಗಿ, ಅವೆಲ್ಲ ಹಾಗೆಯೇ ಮುಚ್ಚಿಹೋಗುತ್ತವೆ. ಹೇಗೂ ಸಾಕಷ್ಟು ಜನಸಂಖ್ಯೆ ಇದೆಯಲ್ಲ ಅನ್ನುತ್ತಾರೆನೊ !

✶ ✶ ✶

ಮುಂದಿನ ವರ್ಷ ಮೇ ತಿಂಗಳಲ್ಲಿ ರಾಜ್ಯ ವಿಧಾನ ಸಭೆಗೆ ಕರ್ನಾಟಕದಲ್ಲಿ ಚುನಾವಣೆ ನಡೆಯಲ್ಲಿ ಕಾಂಗ್ರೆಸ್ ಮುಕ್ತದೇಶವನ್ನಾಗಿಸುವುದಕ್ಕೆ ಪಣತೊಟ್ಟಿರುವ ಭಾಜಪ ಈಗಿನಿಂದಲೇ ಅಧಿಕಾರ ಗ್ರಹಣಕ್ಕೆ ರಣತಂತ್ರ ರೂಪಿಸುತ್ತಿದೆ. ಚುನಾವಣೆಯ ಕಾರುಬಾರುಗಳಲ್ಲಿ ನಿಷ್ಣಾತ ಎನಿಸಿಕೊಂಡಿರುವ ಭಾಜಪ ಅಧ್ಯಕ್ಷ ಅಮಿತ್ ಷಾ ಈಚೆಗೆ ರಾಜಧಾನಿ ಬೆಂಗಳೂರಿಗೆ ಎರಡು ದಿನ ಭೇಟಿ ನೀಡಿ ಕಾರ್ಯಕರ್ತರಿಗೆ, ನಾಯಕರಿಗೆ ಕ್ಲಾಸು ತೆಗೆದುಕೊಂಡಿದ್ದಾರೆ. ಅಂದರೆ ಅರ್ಥಾತ್ ತರಾಟೆಗೆ ತೆಗೆದುಕೊಂಡಿದ್ದಾರೆ. ಅಧಿಕಾರದಲ್ಲಿದ್ದ ಮುಖ್ಯಮಂತ್ರಿ ಪರಪ್ಪನ ಅಗ್ರಹಾರದಲ್ಲಿದ್ದು ಬಂದಿದ್ದರೂ ಮುಂದಿನ ಮುಖ್ಯಮಂತ್ರಿ ಯಡಿಯೂರಪ್ಪ ಎಂದು ಷಾ ಪ್ರಕಟಿಸಿದ್ದೂ ಆಗಿದೆ. ಅಂತೂ ಭಾಜಪದ ಕಣ್ಣು ಈಗ ಕರ್ನಾಟಕದ ಮೇಲಿದೆ. ರಾಜ್ಯದಲ್ಲಿರುವ ಮೂರೂ ಪಕ್ಷಗಳು ಅಂದರೆ, ಕಾಂಗ್ರೆಸ್, ಭಾಜಪ, ಜೆಡಿಎಸ್‌ಗಳು ಭರದಿಂದ ಸಿದ್ಧತೆಗೆ ಮುಂದಾಗಿವೆ. ಚುನಾವಣೆ ಫಲಿತಾಂಶ ಬಂದ ಮೇಲೇ ಬಂಡವಾಳ ಬಯಲಾಗುವುದು. ಯಾವ ಪಕ್ಷಕ್ಕೂ ಬಹುಮತ ಬಾರದೆ ಅತಂತ್ರ ಸ್ಥಿತಿಯೂ ಉಂಟಾಗಬಹುದು. ಯಾರ ಬೇಳೆ ಬೇಯುತ್ತದೆ ಕಾದುನೋಡೋಣ.

ಈ ಮಧ್ಯೆ ಸ್ಯಾಂಡಲ್‌ವುಡ್‌ನ ನಾಯಕನಟ ಉಪೇಂದ್ರ ಹೊಸ ರಾಜಕೀಯ ಪಕ್ಷ ಪ್ರಾರಂಭಿಸಲು ಮುಂದಾಗಿದ್ದಾರೆ. ಕರ್ನಾಟಕವು ತಮಿಳುನಾಡು ಅಲ್ಲ ಎನ್ನುವುದನ್ನು ಅವರಿಗೆ ನೆನಪುಮಾಡಿಕೊಡಬೇಕು. ಟಿವಿ ಚಾನೆಲ್‌ಗಳಲ್ಲಿ ಕಾಣಿಸಿಕೊಂಡಿರುವ ಈತ ಗೊಂದಲದಲ್ಲಿರುವುದು ಗೊತ್ತಾಗುತ್ತಿದೆ. ಪಕ್ಷದ ಹೆಸರೇನೇ ಇರಲಿ ಹಣದ ಬಲವಿಲ್ಲದೆ ಪಾರ್ಟಿ ಕಟ್ಟುತ್ತೇನೆ, ಹೋರಾಟ ನಡೆಸುತ್ತೇನೆ, ಭ್ರಷ್ಟಾಚಾರದ ವಿರುದ್ಧ ಎನ್ನುವುದೆಲ್ಲ ಸಿನಿಮಾ ಡಯಲಾಗ್ ಹೊಡೆದಂತೆ ಇದೆ. ಪಕ್ಷದ ಸ್ಥಾಪನೆ ಇನ್ನೂ ಭ್ರೂಣಾವಸ್ಥೆಯಲ್ಲೆ ಇದೆ. ರಾಜಕಾರಣ ಎನ್ನುವುದು ಸಿನಿಮಾ ತಯಾರಿಸಿದಂತೆ ಅಲ್ಲ ಎನ್ನುವುದು ಬೆಳ್ಳಿತೆರೆಯ ಉಪೇಂದ್ರನಿಗೆ ಅರಿವಾದರೆ ಒಳ್ಳೆಯದು.

✶ ✶ ✶

"ನಮ್ಮ ಟೆಲಿವಿಷನ್ ಚಾನೆಲ್‌ಗಳಲ್ಲಿ ನಡೆಯುವ ಚರ್ಚಾಗೋಷ್ಠಿಗಳ ಉಪಯುಕ್ತತೆ ಬಗ್ಗೆ ಪರಾಮರ್ಶೆ ನಡೆಸಿ, ಪ್ರತಿದಿನ ಸಂಜೆ ಟೆಲಿವಿಷನ್ ಚಾನೆಲ್‌ಗಳಲ್ಲಿ ನಡೆಯುವ ಚರ್ಚೆಗಳಲ್ಲಿ ಭಾಗವಹಿಸುವ ತೀವ್ರ ರಾಷ್ಟ್ರೀಯತೆಯ ನಕಲಿ ಶ್ಯಾಮ ಕಮಾಂಡೋಗಳು ದೇಶದ ನಿಜವಾದ ಇಲ್ಲವೆ ಕಾಲ್ಪನಿಕ, ವಿದೇಶೀ ಅಥವಾ ಸ್ವದೇಶಿ ವೈರಿಯನ್ನು ಮಾತಿನಲ್ಲಿಯೇ ಸಂಹರಿಸುತ್ತಿರುತ್ತಾರೆ. ಗಾಳಿ ಬಂದಾಗ ತೂರಿಕೊಳ್ಳುವಂತೆ ಸಂದರ್ಭಕ್ಕೆ ತಕ್ಕಂತೆ ವೈರಿಗಳ ವಿರುದ್ಧ ಕೋಪತಾಪಗಳನ್ನು ಪ್ರದರ್ಶಿಸುತ್ತಲೇ ಇರುತ್ತಾರೆ."

*(ಅಂಕಣದಿಂದ ಆಯ್ದದ್ದು.)*

✶ ✶ ✶

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಆವರಣದಲ್ಲಿ ಕಳೆದ ತಿಂಗಳು ಡಾ॥ ಅಂಬೇಡ್ಕರ್‌ರನ್ನು ಕುರಿತ ಬೃಹತ್ ಸಮ್ಮೇಳನ, ವಿಚಾರಗೋಷ್ಠಿ, ಮುಂತಾದವನ್ನು ಕರ್ನಾಟಕ ಸರ್ಕಾರವು ಅದ್ದೂರಿಯಾಗಿ ನಡೆಸಿತು. ವಿದೇಶಗಳಿಂದ ಸಹ ಹತ್ತಾರು ವಿದ್ವಾಂಸರನ್ನು ಕರೆಸಿ ಉಪನ್ಯಾಸಗಳನ್ನು ಏರ್ಪಾಟು ಮಾಡಲಾಗಿತ್ತು. ಇಡೀ ಕಾರ್ಯಕ್ರಮದ ಫಲಿತಾಂಶವೇನೆಂದು ಸರ್ಕಾರವು ಇನ್ನೂ ತೀರ್ಮಾನಿಸಿರುವಂತೆ ಕಂಡುಬಂದಿಲ್ಲ. ಗೋಷ್ಠಿಗಳ ಉಪನ್ಯಾಸಗಳನ್ನೆಲ್ಲಾ ಒಂದು ಪುಸ್ತಕದ ರೂಪದಲ್ಲಿ ಹೊರತರುವುದು ಅವಶ್ಯಕ. ಅಲ್ಲದೆ, ಸರ್ಕಾರದ ನೀತಿಗಳ ಮರುಪರಿಶೀಲನೆ, ಪಾಲನೆ ಮತ್ತು ವಿಸ್ತರಣೆ ಬಗೆಗೂ ಗಂಭೀರವಾದ ಚಿಂತನೆ ಮತ್ತು ಕ್ರಿಯೆ ಬೇಕಾಗಿದೆ. ಮೂರು ದಿನಗಳ ಗೋಷ್ಠಿಗಳ ಪೈಕಿ ಒಂದರಲ್ಲಿ ಭಾಗವಹಿಸಿದ್ದ ಮಾಜಿ ಕೇಂದ್ರ ಸಚಿವ ಮಣಿಶಂಕರ ಅಯ್ಯರ್ ಹಾಗೂ ಅವರಂಥ ಇತರ ಸಂಸತ್ ಪಟುಗಳಿಗೆ ವಿಂಡ್ಸರ್ ಮೇನರ್‌ನಲ್ಲಿ ವಸತಿ–ಊಟ ಸೌಕರ್ಯ ಕಲ್ಪಿಸಲಾಗಿತ್ತು. ವಿದೇಶಗಳಿಂದ ಆಹ್ವಾನಿಸಲಾಗಿದ್ದ ವಿದ್ವಾಂಸರು ಅಶೋಕ ಹೋಟೆಲಿನಲ್ಲಿ ತಂಗಿದ್ದರು. ಸ್ಥಳೀಯ ವಿದ್ವಾಂಸರನೇಕರು 'ಲ ಮೆರಿದ್ಯೆನ್' ಹೋಟೆಲಿನಲ್ಲಿ ಉಳಿದುಕೊಂಡಿದ್ದರೆಂದು ಹೇಳಲಾಗಿದೆ. ಎಷ್ಟು ಕೋಟಿ ರೂಪಾಯಿಗಳು ವ್ಯಯವಾಯಿತೋ ಅದಕ್ಕೆ ತಕ್ಕುದಾದ ಪ್ರಯೋಜನವೂ ಬೇಕು. ಆ ನಿಟ್ಟಿನಲ್ಲಿ ಸರ್ಕಾರ ಸರಿಯಾದ ಹಾದಿಯಲ್ಲಿ ಹೆಜ್ಜೆ ಹಾಕಬೇಕು. ಮಣಿಶಂಕರ ಅಯ್ಯರ್ ದೆಹಲಿಯ ಸೆಂಟ್ ಸ್ಟೀಫನ್ಸ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ್ದರಂತೆ. ಕಾಲೇಜಿನಲ್ಲಿ ಹಿರಿಯ ವಿದ್ಯಾರ್ಥಿಗಳ ಸಮಾವೇಶಗಳು ಆಗಾಗ್ಗೆ ಜರುಗುತ್ತಿರುತ್ತವೆ. ಮೂರು ವರ್ಷಗಳ ಹಿಂದಿನ ಸಮಾವೇಶಕ್ಕೆ ಈ ಅಯ್ಯರ್ ಮಹಾನುಭಾವ ದಯಮಾಡಿಸಿದ್ದರು. ವಿದ್ಯಾರ್ಥಿಗಳು ತಮ್ಮ ಅನಿಸಿಕೆಗಳನ್ನು ಬರೆಯಲು ಒಂದು ರಿಜಿಸ್ಟರ್ ಇಟ್ಟಿರುತ್ತಾರಂತೆ, ಸಾಲುಗಟ್ಟಿ ವಿದ್ಯಾರ್ಥಿಗಳು ತಮ್ಮ ಮನದಾಳದ ಮಾತುಗಳನ್ನು ಅದರಲ್ಲಿ ದಾಖಲಿಸುತ್ತಾರಂತೆ. ಆಗಿನ್ನೂ ಅಯ್ಯರ್ ಕೇಂದ್ರ ಸಚಿವ. ಅವರು ಬರೆದರಂತೆ: "ಈಗ ನಾನು ಏನಾಗಿದ್ದೇನೋ ಅದಕ್ಕೆಲ್ಲಾ ನನ್ನ ಈ ಕಾಲೇಜು ಕಾರಣವೆಂದು ಹೇಳಲು ಹೆಮ್ಮೆ ಎನಿಸುತ್ತದೆ." ಸಾಲಿನಲ್ಲಿ ಅವರ ನಂತರ ಬಂದ ಒಬ್ಬ ವಿದ್ಯಾರ್ಥಿ ಬರೆದನಂತೆ : "ಅಯ್ಯಾ ಅಯ್ಯರ್, ನೀನು ಮಾಡುವ ಕೆಟ್ಟ ಕೆಲಸಗಳಿಗೆಲ್ಲಾ, ಪಾಪ, ನಮ್ಮ ಕಾಲೇಜನ್ನೇಕೆ ಬಯ್ಯುತ್ತೀಯೆ?" ಎಂದು. ಅದನ್ನು ಅಯ್ಯರ್ ನೋಡಿರಲಾರರು, ಆದರೆ ಪತ್ರಿಕೆಗಳಲ್ಲಿ ವರ್ತಮಾನವಾಯಿತು. ಅದರಷ್ಟೇ ಮೂರ್ಖತನದ ಮಾತುಗಳನ್ನು ಅಯ್ಯರ್ ಮೊನ್ನೆ ನಡೆದ ಅಂಬೇಡ್ಕರ್ ಸಮಾವೇಶದಲ್ಲಿ ನುಡಿದುದಾಗಿ ತಿಳಿದುಬಂದಿದೆ. ಆತನ ಬಾಲಿಶತನವೋ, ಸೋನಿಯಾ ಗಾಂಧಿಗೆ ಸಲ್ಲಿಸುವ ಕೈಂಕರ್ಯವೋ ಅಥವಾ ಗಿಣಿಶಕುನದಂತಹ ಭವಿಷ್ಯ ವಾಣಿಗಳಲ್ಲಿ ಭರವಸೆಯೋ, ಅಂತೂ ಆತ ಹೇಳಿದರಂತೆ: "೧೯೪೬ರಲ್ಲಿ ಭಾರತವಿನ್ನೂ ಸ್ವತಂತ್ರವಾಗಿರಲಿಲ್ಲ. ಆದರೆ ಸ್ವಾತಂತ್ರ್ಯದ ದಿನ ಹತ್ತಿರ ಬರುತ್ತಿತ್ತು. ದೂರದರ್ಶಿ ಅಂಬೇಡ್ಕರ್ ಅವರು ಆಗಲೇ ಮುಂಬರಲಿದ್ದ ಭಾರತದ ಸಂವಿಧಾನದಲ್ಲಿ ಏನೆಲ್ಲಾ ಅಡಕಗೊಳ್ಳಬೇಕೆಂದು ಬಯಸಿದ್ದರೋ ಅವನ್ನು ನಮೂದಿಸಿ ಸರ್ಕಾರಕ್ಕೆ ಒಂದು ಜ್ಞಾಪನಪತ್ರ ಕೊಟ್ಟಿದ್ದರು. ಉದ್ದಿಮೆ, ಜೀವವಿಮೆ, ಬ್ಯಾಂಕ್ ಮುಂತಾದುವೆಲ್ಲಾ ಸಾರ್ವಜನಿಕ ಕ್ಷೇತ್ರದಲ್ಲಿರಬೇಕು, ದಲಿತರಿಗೆ ಸಮಾನಾವಕಾಶಗಳು ದೊರೆಯುವಂತಾಗಲು ಸೂಕ್ತ ಕ್ರಮಗಳನ್ನು ಸಂವಿಧಾನದಲ್ಲಿ ಸೇರಿಸಬೇಕು. ಮೂಲಭೂತ ಹಕ್ಕುಗಳನ್ನು ಎಲ್ಲ ಪ್ರಜೆಗಳಿಗೂ ಕೊಡಮಾಡಬೇಕು. ಕೃಷಿಯು; ಸಹಕಾರಿ ವಲಯದಲ್ಲಿ ಇರಬೇಕು. ಇತ್ಯಾದಿ ಅಭಿಪ್ರಾಯಗಳು ಆ ಜ್ಞಾಪನಾಪತ್ರದಲ್ಲಿ ವ್ಯಕ್ತವಾಗಿದ್ದವು." ಈ ವಿಷಯ ಎಲ್ಲರಿಗೂ

ತಿಳಿದಿದೆ ಇಲ್ಲವೇ ತಿಳಿಯಬೇಕು, ಆದ್ದರಿಂದ ಅದನ್ನು ಪ್ರಸ್ತಾಪಿಸಿದ್ದು ಸ್ವಾಗತಾರ್ಹ. ಆದರೆ ಮುಂದುವರೆದು ಅಯ್ಯರ್ ಹೇಳಿದರು : "ಅದೇನು ಕಾಕತಾಳೀಯವೋ ತಿಳಿಯದು, ಆದರೆ ಇಂದು ಯಾರ ನೇತೃತ್ವದಲ್ಲಿ ಕಾಂಗ್ರೆಸ್ ಪಕ್ಷವು ಅಂಬೇಡ್ಕರ್ ಅವರ ಆಶಯಗಳನ್ನು ಪೂರೈಸಲು ಮುನ್ನಡೆಯುತ್ತದೆಯೋ ಆ ವ್ಯಕ್ತಿಯು ಅದೇ ೧೯೪೬ರಲ್ಲಿ ಇಟಲಿಯ ಒಂದು ಗರ್ಭದಲ್ಲಿ ಬೆಳೆಯುತ್ತಿದ್ದರು. ಇದು ಚರಿತ್ರಾರ್ಹವಾದ ಸಂಗತಿ." ಅಯ್ಯರ್ ಹೇಳಿದ್ದು ಬಹುಶಃ ಸೋನಿಯಾ ಗಾಂಧಿಯವರ ಕಿವಿಗೆ ಬೀಳಲಿಲ್ಲ. ಆದರೆ ಈ ಸ್ಟೀಫನ್ಸ್ ಕಾಲೇಜಿನ ಪ್ರತಿಭಾವಂತ ತೀರಾ ಅಸಂಗತವಾದ ಮತ್ತು ಕೀಳುಮಟ್ಟದ ಭಾಷಣ ಮಾಡಿದನೆಂಬುದರಲ್ಲಿ ಸಂಶಯವಿರಲಾರದು. "ಅಂಬೇಡ್ಕರ್ ಅವರ ಆಶಯಗಳನ್ನು ಸೋನಿಯಾ ಗಾಂಧಿ ಪೂರೈಸುತ್ತಾರೆ" ಎಂಬುದು ಅಯ್ಯರ್ ಸಿದ್ಧಾಂತ. ಅಂಬೇಡ್ಕರ್ ಅವರ ಆಶಯಗಳಿಗಿಂತಲೂ ಅಯ್ಯರ್‌ಗೆ ಸೋನಿಯಾ ಅವರನ್ನು ಹೊಗಳುವುದು ಹೆಚ್ಚು ಪ್ರಮುಖವಾಗಿ ಕಂಡಿತು. ಇಂತಹ ಮುತ್ಸದ್ದಿಗಳಿಂದ ಅಂಬೇಡ್ಕರ್ ಅವರಿಗಾಗಲಿ, ಸೋನಿಯಾ ಅವರಿಗಾಗಲಿ, ನಮ್ಮ ದೇಶಕ್ಕಾಗಲಿ ಉಳಿಗಾಲವಿಲ್ಲ ಮತ್ತು ನಿರೀಕ್ಷಿತ ಆಶಯಗಳು ಈಡೇರುವುದಿಲ್ಲ. ಅಂಥವರನ್ನು ಕಾಂಗ್ರೆಸ್ ದೂರಕ್ಕೆ ಅಟ್ಟಬೇಕು. ಅಧಿಕಾರ ಸ್ಥಾನಗಳಲ್ಲಿ ಕುಳ್ಳಿರಿಸಬಾರದು.

* * *

ಕರ್ನಾಟಕ ಸರ್ಕಾರವು ಒಂದು ಅಚಾತುರ್ಯವನ್ನೆಸಗಿದೆ. ಅದರಲ್ಲೇನೂ ಹೊಸದಿಲ್ಲ. ಏಕೆಂದರೆ, ಅಚಾತುರ್ಯ ಮತ್ತು ಭಾನಸತ್ವ ಅದರ ಸ್ವಭಾವಗಳು. ಕೆಲವು ತಿಂಗಳುಗಳ ಹಿಂದೆ ಸರ್ವೋಚ್ಚ ನ್ಯಾಯಾಲಯವು ಎಲ್ಲ ರಾಜ್ಯ ಸರ್ಕಾರಗಳಿಗೆ ಮತ್ತು ಉಚ್ಚ ನ್ಯಾಯಾಲಯಗಳಿಗೆ ಒಂದು ಪ್ರಸ್ತಾವವನ್ನು ಕಳಿಸಿ ಅದನ್ನು ಕುರಿತಂತೆ ಅಭಿಪ್ರಾಯಗಳನ್ನು ಒಂದು ಅಫಿಡವಿಟ್ ಮೂಲಕ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಬೇಕೆಂದು ತಿಳಿಸಿತ್ತು. ಕರ್ನಾಟಕ ಸರ್ಕಾರ ಅದನ್ನೀಗ ಮಾಡಿದೆ. ರಾಜ್ಯಗಳಲ್ಲಿ ಜಿಲ್ಲಾ ನ್ಯಾಯಾಧೀಶರು ಮತ್ತು ತತ್ಸಮಾನವಾದ ನ್ಯಾಯಾಲಯ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಪರೀಕ್ಷಿಸಿ ನೇಮಕ ಮಾಡಲು ಕೇಂದ್ರೀಯ ಆಯ್ಕೆ ಮಂಡಲಿಗೆ ಜವಾಬ್ದಾರಿಯನ್ನು ವರ್ಗಾಯಿಸಬೇಕು ಎಂದು ಪ್ರಸ್ತಾವವು ಸೂಚಿಸಿತ್ತು. ಅದಕ್ಕೆ ರಾಷ್ಟ್ರಮಟ್ಟದ ಪರೀಕ್ಷೆಯನ್ನು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಲ್ಲಿ ನಡೆಸ ಲಾಗುತ್ತದೆ. ಈ ಪ್ರಸ್ತಾವಕ್ಕೆ ಕರ್ನಾಟಕ ಸರ್ಕಾರವು ಒಪ್ಪಿಗೆ ನೀಡಿ, ಜುಲೈ ೨೭ರಂದು ಅಫಿಡವಿಟ್ ಸಲ್ಲಿಸಿದೆಯೆಂದು ವರದಿಯಾಗಿದೆ. ಅದಕ್ಕೆ ಒಂದು ಷರತ್ತನ್ನು ಸೇರಿಸಿದೆ. ಅದೇನೆಂದರೆ ಅಭ್ಯರ್ಥಿಗಳಿಗೆ ಕನ್ನಡದ ಜ್ಞಾನ ಇರಬೇಕು, ಎಂದು. ಸದ್ಯಕ್ಕೆ ಜಿಲ್ಲಾ ನ್ಯಾಯಾಧೀಶರ ಆಯ್ಕೆಗೆ ಇದು ಅನ್ವಯವಾಗಲಿ, ಇತರ ಸಿವಿಲ್ ನ್ಯಾಯಮೂರ್ತಿಗಳನ್ನು ನಂತರ ಇದರ ಪರಿಧಿಗೆ ತರಬಹುದೆಂದು ರಾಜ್ಯ ಸರ್ಕಾರ ಹೇಳಿದೆ. ಇದು ತೀರಾ ಪ್ರಶ್ನಾರ್ಹವಾದ ತೀರ್ಮಾನ ಮತ್ತು ಅದನ್ನು ಒಪ್ಪಲು ಸಾಧ್ಯವಿಲ್ಲ; ಆದ್ದರಿಂದ ಸರ್ಕಾರವು ತನ್ನ ಹೇಳಿಕೆಯನ್ನು ಹಿಂಪಡೆದು ರಾಜ್ಯದ ಸ್ವಾಯತ್ತ ಹಕ್ಕನ್ನು ಪೋಷಿಸಬೇಕು, ಭಾರತವು ಅನೇಕ ರಾಜ್ಯಗಳ ಗಣರಾಜ್ಯವೇ ವಿನಾ ಒಂದು ಕೇಂದ್ರ ಸರ್ಕಾರವಿರುವ ಏಕಚಕ್ರಾಧಿಪತ್ಯವಲ್ಲ ಎಂಬುದನ್ನು ಕಾರ್ಯತಃ ಘೋಷಿಸಬೇಕು. ಸ್ವಾತಂತ್ರ್ಯ ದಿನಾಚರಣೆಯಂದು ಮುಖ್ಯಮಂತ್ರಿಗಳು "ರಾಜ್ಯದಲ್ಲಿ ರಾಜ್ಯ ಭಾಷೆಯೇ ಸಾರ್ವಭೌಮ" ಎಂದು ಹೇಳಿದ್ದಾರೆ. "ರಾಜ್ಯದಲ್ಲಿ ರಾಜ್ಯಭಾಷಿಕರಿಗೆ ಆದ್ಯತೆ" ಎಂದು ಸಹ ಅವರು ಭಾವಿಸಬೇಕು ಮತ್ತು ಅನುಷ್ಠಾನಕ್ಕೆ ತರಬೇಕು. ಸರ್ವೋಚ್ಚ ನ್ಯಾಯಾಲಯದ ಉಸ್ತುವಾರಿಯಲ್ಲಿ ಕೇಂದ್ರೀಕೃತ ಪರೀಕ್ಷೆ ನಡೆದರೆ ಹಿಂದಿ ಮತ್ತು ಹಿಂದಿ ಭಾಷಿಕರು ಮೇಲುಗೈ ಸಾಧಿಸುವುದು ಶತಸ್ಸಿದ್ಧ. ಅನೇಕ ಕೇಂದ್ರೀಕೃತ ಪರೀಕ್ಷೆಗಳಲ್ಲಿ ಇದು ಸಾಬೀತಾಗಿದೆ. ಕನ್ನಡ ಭಾಷೆಯ ಮಂದಿ ಅಲ್ಲಿಯೂ ಇಲ್ಲ, ಇಲ್ಲಿಯೂ ಇಲ್ಲ ಎಂಬ ಪೇಚಾಟಕ್ಕೆ ಸಿಲುಕುತ್ತಾರೆ. ಅಷ್ಟಕ್ಕೂ ರಾಜ್ಯದಲ್ಲಿ ನಡೆಯುತ್ತಿರುವ ಪರೀಕ್ಷೆಗಳಿಂದ ತೊಂದರೆ ಏನಾಗಿದೆ? ಸರ್ವೋಚ್ಚ ನ್ಯಾಯಾಲಯದ ಉಸ್ತುವಾರಿ ಏಕೆ ಬೇಕಾಗಿದೆ? ಎರಡನೆಯದಾಗಿ, ಬೇರೆ ರಾಜ್ಯಗಳವರು ನಮ್ಮಲ್ಲೇಕೆ ಜಿಲ್ಲಾ ನ್ಯಾಯಾಧೀಶರಾಗಬೇಕು ಹಾಗೂ ಕನ್ನಡದ ಮಂದಿ ಷಿಲಾಂಗ್‌ನಲ್ಲೋ ಜಬ್ಬಲ್‌ಪುರದಲ್ಲೋ ಏಕೆ ನ್ಯಾಯಾಧೀಶರಾಗಬೇಕು? ನಮ್ಮ ರಾಜ್ಯದ ಮತ್ತು ರಾಜ್ಯದ ಜನರ ಹಕ್ಕು ಮತ್ತು ಅವಕಾಶಗಳನ್ನು ಖಂಡಿತ ಮೊಟಕುಗೊಳಿಸಕೂಡದು. "ಕನ್ನಡ ಬಲ್ಲವರಾಗಿರಬೇಕು" ಎಂಬ ಷರತ್ತನ್ನೇನೋ ಹಾಕಿದ್ದಾರೆ. ಆದರೆ ಅದು ಅಪ್ರಯೋಜಕ. ಕನ್ನಡ "ಕಲಿತು" ಬಂದಿರುವ ಐಎಎಸ್ ಮತ್ತು ಐಪಿಎಸ್ ಅಧಿಕಾರಿಗಳನ್ನೋ, ಬ್ಯಾಂಕುಗಳ ಅಧಿಕಾರಿಗಳನ್ನೋ ನೋಡಿದರೆ ಅವರೆಷ್ಟು ಕನ್ನಡ ಬಲ್ಲವರೆಂದು ತಿಳಿಯುತ್ತದೆ. ಎಂಥದೋ ಅ ಆ ಇ ಈ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಬರುವ ನ್ಯಾಯಾಧೀಶ ತನ್ನ ಭಾಷೆಯನ್ನು ಜಿಲ್ಲಾ ನ್ಯಾಯಾಲಯಗಳಲ್ಲಿ ಹೇರುತ್ತಾನೆ. ನ್ಯಾಯಾಧೀಶರ "ಸನ್ನಡತೆ" ಪ್ರಸಿದ್ಧವಾಗಿದೆ. ಅವರಿಗೆ ಎದುರುತ್ತರ ನೀಡಲು ವಕೀಲರು ಅಂಜುತ್ತಾರೆ. ನಮ್ಮ ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ವಕೀಲರನ್ನು ಹೇಗೆ ಹಂಗಿಸುತ್ತಾರೆ ಎಂದು ವಕೀಲರ ಸಂಘವು ದೂರಿದೆ; ಅದು ಜಿಲ್ಲೆಗಳಿಗೂ ಹರಡುತ್ತದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಭಾರತವು ಗಣರಾಜ್ಯ, ಅದೊಂದು ಒಕ್ಕೂಟ ಅಥವಾ ಫೆಡರಲ್ ಪ್ರಭುತ್ವ, ಕೇಂದ್ರವು ರಾಜ್ಯ ಸರ್ಕಾರಗಳ ಪ್ರಭುವಲ್ಲ, ಪ್ರಭುವಾಗಲು ನಾವು ಬಿಡಬಾರದು. ಎಲ್ಲವೂ "ದೇಶಕ್ಕೆಲ್ಲಾ ಒಂದೇ ಪರೀಕ್ಷೆ" ಎಂಬ ಸೂತ್ರದಡಿ ಬರಬೇಕೆಂಬುದು ಹಾಸ್ಯಾಸ್ಪದ, ಅಪಾಯಕಾರಿ. ಅದನ್ನು ಆಗಗೊಟ್ಟರೆ ಇನ್ನು ಹತ್ತು ವರ್ಷಗಳಲ್ಲಿ ನಮ್ಮ ರಾಜ್ಯದ ಪ್ರಾಥಮಿಕ ಶಾಲೆಗಳ ಉಪಾಧ್ಯಾಯರ ಆಯ್ಕೆಯು ಕೇಂದ್ರೀಕೃತ ಆಯ್ಕೆ ಪ್ರಕ್ರಿಯೆಯ ಮೂಲಕ ನಡೆದೀತು ! ಮೊದಲು ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿರುವ ಕೆಟ್ಟ ಅಫಿಡವಿಟ್‌ಅನ್ನು ಹಿಂತೆಗೆದುಕೊಳ್ಳಬೇಕಾದ್ದು ರಾಜ್ಯ ಸರ್ಕಾರದ ಕರ್ತವ್ಯ.

* * *

ಭಾರತೀಯ ಜನತಾ ಪಕ್ಷದ ಸಿಂಹನಾಯಕ ಶ್ರೀ ಅಮಿತ್ ಷಾ ಬಂದು ಆರ್ಭಟಿಸಿ ಹೋದರು. ಎರಡು ವಾರದ ನಂತರ ಬಂದು ಪುನಃ ಸಮೀಕ್ಷೆ ನಡೆಸಿ 'ಅಯೋಗ್ಯ'ರನ್ನು ಅಧಿಕಾರ ಸ್ಥಾನಗಳಿಂದ ತೆಗೆದುಹಾಕುವುದಾಗಿ ಎಚ್ಚರಿಗೆ ನೀಡಿಹೋಗಿದ್ದಾರೆ. ಯಾವುದೋ ಖಾಸಗಿ ಪಬ್ಲಿಕ್ ಸ್ಕೂಲ್‌ನ ಮುಖ್ಯೋಪಾಧ್ಯಾಯಿನಿ ಬಳಸುವ ಭಾಷೆ ಅದು. ಭಾಜಪದ ಸದಸ್ಯರು ಆ ಭಾಷೆಯನ್ನು ಮಾನ್ಯ ಮಾಡುವುದಾದರೆ ಹೊರಗಿನವರು ಏನೂ ಹೇಳುವಂತಿಲ್ಲ. ಅದು ಅವರ ಆಂತರಿಕ ಏರ್ಪಾಟು. ಆದರೆ ಅವರ ಭಾಷೆ ಮತ್ತು ಧೋರಣೆ ನಮ್ಮ ರಾಜ್ಯದ ದೃಷ್ಟಿಯಿಂದ ಆರೋಗ್ಯಕರವಲ್ಲ. ರಾಜ್ಯದ ಕಾಂಗ್ರೆಸ್ ಅಧ್ಯಕ್ಷ ಡಾ॥ ಜಿ. ಪರಮೇಶ್ವರ ನೀಡಿರುವ ಒಂದು ಹೇಳಿಕೆಯು ವರದಿಯಾಗಿದೆ: "ನಿಮ್ಮ ಹಿನ್ನೆಲೆ ಏನು ಎಂಬುದು ರಾಜ್ಯದ ಜನರಿಗೆ ಚೆನ್ನಾಗಿ ಗೊತ್ತಿದೆ. ನಿಮ್ಮ ಮೇಲೆ ಸಿಬಿಐ ದಾಖಲಿಸಿದ್ದ ಪ್ರಕರಣಗಳನ್ನು ಕೇಂದ್ರದಲ್ಲಿ ಬಿಜೆಪಿ ಅಧಿಕಾರಕ್ಕೆ ಬಂದ ಕೂಡಲೇ ವಜಾ ಮಾಡಿಸಿಕೊಂಡಿದ್ದೂ ಜನರಿಗೆ ಗೊತ್ತಿದೆ." (ಪ್ರಜಾವಾಣಿ, ೧೬-೦೮-೨೦೧೭). ಸದ್ಯ, ಯಾರಾದರೊಬ್ಬರು ಕಾಂಗ್ರೆಸ್ ನಾಯಕರು ಅದನ್ನು ಕಡೆಗೂ ಹೇಳಿದರಲ್ಲಾ, ಅದೇ ಸಮಾಧಾನ. ಷಾ ಅವರಿಗೆ ಅನ್ವಯವಾಗುವ ಈ ಮಾತು ಬೇರೆ ಹತ್ತಾರು ಮಂದಿಗೂ ಅನ್ವಯವಾಗುತ್ತದೆಯೇನು? ಸಿಬಿಐ ಮತ್ತು ನ್ಯಾಯ ನೀಡುವ ಕೇಂದ್ರಗಳು ಸಿಬಿಐನ ದಾಳಗಳಾಗಿವೆ ಎಂಬ ಸಂಗತಿಯನ್ನು ಅರಿಯಬೇಕಾದ ಸಮಯ ಇಂದು ಬಂದಿದೆಯೇ? ಗುಜರಾತಿನ ಪೊಲೀಸ್ ಅಧಿಕಾರಿ ವಂಝಾರ ಅವರಿಗೂ ಕಾಂಗ್ರೆಸ್ ಅಧ್ಯಕ್ಷರ ಮಾತು ಅನ್ವಯವಾಗುತ್ತದೆಂದು ತೋರುತ್ತದೆಯೆ? ಆ ಸಾಲಿನಲ್ಲಿ ಕಳೆದ ಎರಡು ಮೂರು ವರ್ಷಗಳಲ್ಲಿ ಬೇರೆಷ್ಟೋ ಹೆಸರುಗಳು ಸೇರಿರಬಹುದೇ ಎಂಬ ಅನುಮಾನವು ಅನಿವಾರ್ಯವಾಗಿದೆಯೆಂದು ಭಾವಿಸಬೇಕೆ? ನಮ್ಮ ರಾಜ್ಯದ ಜನತೆ ಈ ಪ್ರಶ್ನೆಗಳಿಗೆ ಸೂಕ್ತ ಉತ್ತರ ಕಂಡುಕೊಳ್ಳಬೇಕು.

* * *

ಮೂಡಬಿದರೆಯ ಆಳ್ವಾಸ್ ಪ್ರೌಢಶಾಲೆಯ ಹತ್ತನೆಯ ತರಗತಿಯಲ್ಲಿ ಓದುತ್ತಿದ್ದ ಹದಿನೈದು ವರ್ಷ ವಯಸ್ಸಿನ ಕಾವ್ಯ ಪೂಜಾರಿ ಸಂಶಯಾಸ್ಪದ ರೀತಿಯಲ್ಲಿ ಸಾವನ್ನಪ್ಪಿದ್ದಾಳೆ. ಸಾವಿನ ನಂತರದ ಬೆಳವಣಿಗೆಗಳು ಈ ಸಾವು ಆತ್ಮಹತ್ಯೆಯೋ ಅಥವಾ ಕೊಲೆಯೋ ಎಂಬ ವಿವಾದಕ್ಕೆ ಎಡೆಕೊಟ್ಟಿವೆ. ಹಿಂದಿನ ದಿನವಷ್ಟೇ ತನ್ನೊಡನೆ ಸಂತೋಷದಿಂದ ಮಾತನಾಡಿದ್ದ ಮಗಳು ಸತ್ತ ವಾರ್ತೆ ತಿಳಿದ ತಕ್ಷಣ ಅರ್ಧ ಗಂಟೆಯಲ್ಲೇ ಆಸ್ಪತ್ರೆಗೆ ಧಾವಿಸಿದರೂ ಮಗಳನ್ನು ಶವಾಗಾರದಲ್ಲಿ ನೋಡಬೇಕಾದ ಕರುಳು ಕೊಯ್ಯುವ ತಾಯ ನೋವು ಹಲವಾರು ಪ್ರಶ್ನೆಗಳನ್ನು ಎತ್ತುತ್ತಿದೆ. ಈ ಯಾವ ಪ್ರಶ್ನೆಗಳಿಗೂ ಸಮಾಧಾನಕರವಾದ ಉತ್ತರವಿಲ್ಲ. ಹಾಸ್ಟೆಲ್‌ನಲ್ಲಿ ಕಾವ್ಯ 'ಆತ್ಮಹತ್ಯೆ' ಮಾಡಿಕೊಂಡರೆ, ಆ ಸುದ್ದಿಯನ್ನು ಪೋಷಕರಿಗೆ ಮುಟ್ಟಿಸಬೇಕಾದವರು ಹಾಸ್ಟೆಲ್ ಸಿಬ್ಬಂದಿ ಹಾಗೂ ಶಾಲಾ ಮುಖ್ಯಸ್ಥರೇ ಹೊರತು ತಾತ್ಕಾಲಿಕವಾಗಿ ಕೆಲಸ ಮಾಡುವ ಆ ಶಾಲೆಯ ದೈಹಿಕ ಶಿಕ್ಷಣದ ಶಿಕ್ಷಕನಲ್ಲ, ಎಂಬುದು

ಯಾರಿಗಾದರೂ ತಿಳಿಯುವ ವಿಷಯ. ಈ ಘಟನೆಯ ವಿರುದ್ಧ ಪ್ರತಿಭಟಿಸುತ್ತಿರುವ ವಿದ್ಯಾರ್ಥಿಗಳು ಮತ್ತು ಮಹಿಳಾ ಸಂಘಟನೆಗಳು ನ್ಯಾಯಕ್ಕಾಗಿ ಒತ್ತಾಯಿಸುತ್ತಿವೆ. ಇಡೀ ರಾಜ್ಯದಲ್ಲಿ ಮಾತ್ರವಲ್ಲದೆ, ದೇಶದ ಹಲವಾರು ಭಾಗಗಳಲ್ಲಿ ಮತ್ತು ದುಬಾಯ್ ಹಾಗೂ ಬಹ್ರೇನ್‌ನಲ್ಲಿನ ವಿದ್ಯಾರ್ಥಿ ಸಂಘಟನೆಗಳು ಈ ಕೃತ್ಯವನ್ನು ಖಂಡಿಸಿವೆ. ರಾಜ್ಯ ಸರ್ಕಾರದ ಉಗ್ರಪ್ಪ ನೇತೃತ್ವದ ಮಹಿಳಾ ದೌರ್ಜನ್ಯ ಸಮಿತಿಯು ತನಿಖೆ ನಡೆಸಿದೆ.

ಈ ಘಟನೆಯ ಬಗ್ಗೆ ಸಾಕಷ್ಟು ಹುಯಿಲೆದ್ದಿರುವಾಗ ಆಳ್ವಾಸ್ ಸಂಸ್ಥೆಯ ಮುಖ್ಯಸ್ಥರಾದ ಮೋಹನ್ ಆಳ್ವಾ ಅವರು ಯಾವುದೇ ಸಂತಾಪ ವ್ಯಕ್ತಪಡಿಸದೆ, ತಾನು 'ಸ್ಥಿತಪ್ರಜ್ಞ' ಮತ್ತು ತನಗೆ ಎಲ್ಲ ಸಂದರ್ಭಗಳನ್ನೂ ಸಮನಾಗಿ ನೋಡುವುದು ಸಾಧ್ಯ ಎಂದು ಹೇಳಿಕೊಳ್ಳುತ್ತಾ ತಮ್ಮ ಸಂಸ್ಥೆಯ ಸಾಧನೆಯ ಬಗ್ಗೆ ತಿಳಿಸಲು ಪತ್ರಿಕಾ ಸಭೆಯನ್ನು ನಡೆಸಿರುವ ವಿಪರ್ಯಾಸ ಯಾರಿಗಾದರೂ ಆಕ್ರೋಶವನ್ನು ಹುಟ್ಟಿಸದೇ ಇರದು. ಅವರ ಶಾಲಾಬಾಲಕಿಯ ಸಾವಿನ ನಂತರ ಅವರು ಕೂಡಲೆ ಮಾಡಬೇಕಾಗಿದ್ದ ಕೆಲಸ ಒಂದು ತನಿಖೆಯನ್ನು ನಡೆಸುವುದಾಗಬೇಕಿತ್ತು. ಅದನ್ನು ಈವರೆವಿಗೂ ಮಾಡಿಲ್ಲ ಮತ್ತು ಮಾಡುವ ಸೂಚನೆಯೂ ಇಲ್ಲ. ಸಾರ್ವಜನಿಕರು ಯಾರೂ ಖುದ್ದು ಆಳ್ವರೇ ಕಾವ್ಯಳ ಸಾವಿಗೆ ಹೊಣೆಯೆಂದು ಆಪಾದಿಸಿರಲಿಲ್ಲ. ಹೀಗಿರುವಾಗ ತಾವು ಮಹಾಸಭ್ಯ ಎಂದು ಘೋಷಿಸಿಕೊಳ್ಳಲು ತಮ್ಮ ಚಾತುರ್ಯವನ್ನು ವ್ಯಯಿಸಬೇಕಾಗಿರಲಿಲ್ಲ. ಕಾವ್ಯಳು ನೇಣುಹಾಕಿಕೊಂಡಿದ್ದಾಳೆಂದು ಅವರಿಗೆ ಸುದ್ದಿ ಮುಟ್ಟಿದಾಗ ಅದು ನಿಜವೇ ಇಲ್ಲವೇ ಎಂದು ಪರಿಶೀಲಿಸುವ ಗೋಜಿಗೂ ಹೋಗದೆ ಬಾಲಕಿಯ ತಾಯಿ ಆಸ್ಪತ್ರೆಗೆ ಬರುವ ಮುನ್ನವೇ ಕಾವ್ಯಳ ಸಾವು ಆತ್ಮಹತ್ಯೆಯಿಂದಾಯಿತು ಎಂಬ 'ಸತ್ಯ'ದ ಪ್ರಚಾರವಾಗಿಹೋಗಿತ್ತು. ಅಷ್ಟು ತರಾತುರಿಯಿಂದ ವೈದ್ಯಕೀಯ ಹೇಳಿಕೆ ಸಿದ್ಧಗೊಳಿಸ ಬೇಕಾಗಿತ್ತೆ? ಅಂದರೆ, ಸಾವು 'ಕೊಲೆ'ಯೋ 'ಆತ್ಮಹತ್ಯೆ'ಯೋ ನಿರ್ಧಾರವಾಗುವುದಕ್ಕೆ ಮುಂಚೆಯೇ ಶಿಕ್ಷಣ ಸಂಸ್ಥೆಯು ವರ್ತಿಸುತ್ತಿರುವ ರೀತಿಯೇ ಸಾರ್ವಜನಿಕರಲ್ಲಿ ಅನುಮಾನ ಹುಟ್ಟಿಸುತ್ತಿದೆ. 'ಕುಂಬಳಕಾಯಿ ಕಳ್ಳ ಹೆಗಲು ಮುಟ್ಟಿಕೊಂಡಂತೆ' ವರ್ತಿಸುತ್ತಿರುವ ಆಳ್ವರನ್ನು ಬೆಂಬಲಿಸಲು ಅವರ ಅಭಿಮಾನಿಗಳ ಒಂದು ಬೃಹತ್ ಸಮಾವೇಶವನ್ನು ತರಾತುರಿಯಲ್ಲಿ ವ್ಯವಸ್ಥೆಗೊಳಿಸಿದ್ದು, ಅದರಲ್ಲಿ ಅಕ್ಷರ ಲೋಕದ ಕೆಲವು ಬುದ್ಧಿಜೀವಿಗಳೂ ಭಾಗ ವಹಿಸಿರುವುದು ಗಾಯಕ್ಕೆ ತುಪ್ಪ ಸುರಿದಂತೆ ಆಗಿದೆ. ಸಭೆಯಲ್ಲಿ ಭಾಗವಹಿಸಿ ಮಾನ್ಯ ಆಳ್ವರಿಗೆ ಅರ್ಹತಾ ಪತ್ರಗಳನ್ನು ನೀಡಿದ ನಮ್ಮ ಬುದ್ಧಿಜೀವಿಗಳಿಗೆ ಆಗ್ಗೆ ಆಗಲೆ ಕಾವ್ಯಳ ಸಾವಿನ ಬಗೆಗೆ ಸಂಪೂರ್ಣ ಮಾಹಿತಿ ದೊರೆತಿದ್ದಿತೆ? ಹಾಗಿದ್ದರೆ ಆ ಮಾಹಿತಿ ಯಾವುದು ಮತ್ತು ಅದು ಸರಿಯಾದ ಮಾಹಿತಿ ಎಂದು ಇವರಿಗೆ ತಿಳಿದಿದ್ದಾದರೂ ಹೇಗೆ?

ಸುದ್ದಿ ಮಾಧ್ಯಮಗಳು ಈ ವಿಷಯವನ್ನು ಎಷ್ಟೇ ಕುಟ್ಟಿ ತೌಡು ಮಾಡಿದರೂ ನಿಜಾಂಶ ಹೊರ ಬರುವುದಕ್ಕೆ ರಾಜಕೀಯ ಸಂಕಲ್ಪ ಬೇಕು. ನಮ್ಮ ರಾಜ್ಯ ಸರ್ಕಾರವು ತೆಪ್ಪಗೆ ಕುಳಿತುಕೊಳ್ಳುವುದು ಸರ್ವಥಾ ಸರಿಯಲ್ಲ. ಸತ್ತಿರುವುದು ನಮ್ಮ ಒಂದು ಹೆಣ್ಣುಮಗು. ಅದು ಏಕೆ ಮತ್ತು ಹೇಗೆ ಆಯಿತು ಎಂಬುದನ್ನು ತನಿಖೆ ಮಾಡಿಸುವ ಪೂರ್ಣ ಜವಾಬ್ದಾರಿ ಸರ್ಕಾರಕ್ಕಿದೆ. ಸದರಿ ಹಾಸ್ಟೆಲ್‌ನಲ್ಲಿ ಇದು ಮೊದಲನೆಯ ಸಾವಲ್ಲವೆಂಬುದು ಸರ್ಕಾರಕ್ಕೂ ತಿಳಿದ ವಿಷಯವೇ ಆಗಿದೆ. ಆದ್ದರಿಂದ ಈವರೆವಿಗೂ ಸಾರ್ವಜನಿಕ ಸುದ್ದಿಯಾಗದೆ ಉಳಿದುಹೋಗಿರುವ, ಆದರೆ ಕಳೆದ ವರ್ಷಗಳಲ್ಲಿ ನಡೆದಿರುವ, ಹಲವಾರು ಬಾಲಕಿಯರ ಸಾವಿಗೂ ಈ ಸಂದರ್ಭದಲ್ಲಿ ನ್ಯಾಯ ಸಿಕ್ಕಲಿ ಎಂದು ಜನತೆಯು ಆಗ್ರಹಿಸುತ್ತದೆ. ●

## ನನ್ನಲ್ಲೊಬ್ಬ

ನನ್ನ ಹಗಲಿನ ತುಂಡೊಂದು
ನಿಮ್ಮ ಬಾಗಿಲತ್ತ ಬಿದ್ದಿರಬಹುದು
ಸ್ವಲ್ಪ ನೋಡಿ।
ನನ್ನ ಪಕ್ಕದಲ್ಲಿ ಅರಳಿದುರಿದ ಕನಸುಗಳು
ನಿಮ್ಮ ಮನೆಯಂಗಳದಿ ವ್ಯಾಪಿಸಿರಬಹುದು
ಕೊಂಚ ನೋಡಿ।
ನನ್ನ ಕಿರುನಗೆಗಳಲ್ಲಿ ಕೆಲವೊಂದು
ದಾರಿ ತಪ್ಪಿ ನಿಮ್ಮ ಹೊಲಗದ್ದೆಯಲ್ಲಿ ಚೆಲ್ಲಿರಬಹುದು
ತುಸು ನೋಡಿ।
ಅರ್ಥಗರ್ಭಿತ ನನ್ನ ನುಡಿಗಳಲ್ಲಿ ಅಲ್ಪವು
ನಿಮ್ಮ ನಿವಾಸದ ಗೋಡೆಗಳಲ್ಲಿ
ಮೊಳೆ ಹೊಡೆದಿರಬಹುದು
ಸ್ವಲ್ಪ ಗಮನಿಸಿ।
ನಾನು ಸುರಿಸಿದ ಕಣ್ಣೀರು,
ರಜ್ಜು-ಗೊಜ್ಜಾಗಿ ನಿಮ್ಮ ಖಾಲಿ ನಿವೇಶನದಲ್ಲಿ
ಹುಗಿದುಕೊಂಡಿರಬಹುದು
ಕೊಂಚ ಕಣ್ಣಾಡಿಸಿ।
ಮಾತನ್ನುದುರಿದ ನನ್ನ ಮೌನಗಳು
ನಿಮ್ಮ ಶಯನ ಕೋಣೆಯಲಿ
ಸರಸ ಸಲ್ಲಾಪದಲ್ಲಿ ಮುಳುಗಿರಬಹುದು
ಕಿಂಚಿತ್ ಅವಧಾನಿಸಿ।
ನನ್ನದೇ ಆದ ನನ್ನ ಏಕಾಂತ
ನಿಮ್ಮೊಡನೆ ಸೇರಿ ಚಪ್ಪಾಳೆ ಹೊಡೆದು
ಕುಣಿದು ಕುಪ್ಪಳಿಸಿರಬಹುದು
ಮೆಲ್ಲಗೆ ಲಕ್ಷ್ಯ ನೀಡಿ।
ನನ್ನಲ್ಲಿ ಬೇರು ಬಿಟ್ಟಿರುವ ಆಸೆಗಳು
ನಿಮ್ಮಲ್ಲಿ ಟೊಂಗೆಯಾಗಿರಬಹುದು
ಚಿಕ್ಕ ಎಚ್ಚರವಹಿಸಿ।
ನನ್ನ ಬೊಂಬೆಗಳಲ್ಲಿ ಹಲವಾರು
ಕನಸಲ್ಲೂ ನಿಮ್ಮೊಡನೆ
ಸಂಭಾಷಿಸಿಕೊಂಡಿರಬಹುದು
ಸ್ವಲ್ಪ ವೀಕ್ಷಿಸಿ।
ನನ್ನ ಗುರುತನ್ನು ನೀವು
ಮರೆತಿರಬಹುದು
ನಿಮ್ಮಲ್ಲಿ ನೀವೇ ದೃಷ್ಟಿಸಿ ನೋಡಿ
ಹೊಚ್ಚ ಹೊಸಬನಾಗಿ ಅಲಗುತ್ತಿರುವವನು



**ಡಾ॥ ವಿ. ಪುಗಳೇಂದಿ**
ವಿವೇಕ್ ಮ್ಯಾನ್ಶನ್, ನಂ. ೪೬೭, ನಾಗಭೂಷಣ ಲೇಔಟ್
ವಿಜಯ ವಿಠ್ಠಲ ನಗರ, ಸಿರುಗುಪ್ಪ – ೫೮೩ ೧೨೧




✉ 'ಸಹಜೀವಿಗಳ ಸಂಕಟಕ್ಕೆ ಸ್ಪಂದಿಸುವ ನಿಲುವು ನಮ್ಮದಾಗಲಿ...' ಎನ್ನುವ ಲೇಖನ ಸಮಯೋಚಿತದಿಂದ ಕೂಡಿದೆ. ವರ್ತಮಾನದ ಬದುಕಿನಲ್ಲಿ ಏನೆಲ್ಲ ನಡೆಯುತ್ತದೆ ಎನ್ನುವುದಕ್ಕೆ ಈ ಲೇಖನ ತಿಳುವಳಿಕೆ ಮೂಡಿಸುತ್ತದೆ. ಲೇಖಕ ಮಹಾದೇವ ಬಸರಕೋಡ ಅವರು ಬಹಳ ಸೂಕ್ಷ್ಮವಾಗಿ ಅರಿತುಕೊಂಡು ಬರವಣಿಗೆ ಮೂಲಕ ಹರಿಯಬಿಟ್ಟಿರುವುದು ಸೂಕ್ತವಾಗಿದೆ.

ಬದಲಾಗುತ್ತಿರುವ ಜೀವನಶೈಲಿಯಲ್ಲಿ ಎಲ್ಲವನ್ನೂ ಹಣದ ಅಳತೆಗೋಲಿನಿಂದ ಅಳೆಯುವ ನಾವುಗಳು ವಿಚಿತ್ರ ಪ್ರವೃತ್ತಿಯನ್ನು ಅನುಸರಿಸುತ್ತಿದ್ದೇವೆ ಎಂಬ ಅನುಮಾನ ಕಾಡುತ್ತಿದೆ; ಆಚಾರ-ವಿಚಾರ, ನಂಬಿಕೆ ವಿಮರ್ಶೆಗೆ ಒಳಪಡಿಸುವಂತಾಗಿದೆ. ಮಾನವೀಯ ನೆಲೆ ಅಲುಗಾಡುತ್ತಲಿದೆ. ಸಮಾಜ ಏನು ಮಾಡಿದೆ ಎನ್ನುವುದಕ್ಕಿಂತ, ಸಮಾಜಕ್ಕೆ ನಾವು ಏನು ಮಾಡಿದ್ದೇವೆ ಎಂಬ ಮರ್ಮವನ್ನು ಅರ್ಥಮಾಡಿಕೊಳ್ಳುವುದು ತುರ್ತು ಅಗತ್ಯವಾಗಿದೆ. ಒಟ್ಟಿನಲ್ಲಿ ಬಸರಕೋಡ ಅವರ ಲೇಖನ ಸಮಾಜಕ್ಕೆ ಅಳತೆ ಮಾಡಿತೋರಿಸಿದಂತಿದೆ.

*ಕಲಬುರಗಿ* ***ಸಂಗಮನಾಥ ರೇವತಗಾಂವ***

✉ ಆಗಸ್ಟ್ ೨೦೧೭ರ ಜಿ. ರಾಮಕೃಷ್ಣರ ಭಗವದ್ಗೀತೆ: ಒಂದು ಅವಲೋಕನ ೧೧, 'ವಿಭೂತಿ ಮತ್ತು ವಿಶ್ವರೂಪ ದರ್ಶನ' ಎಂಬ ಲೇಖನ ಜಿ. ಆರ್. ಅವರ ಅನನ್ಯ ವೈಚಾರಿಕತೆಗೆ ಹಿಡಿದ ಒಂದು ರನ್ನಗನ್ನಡಿಯಂತಿದೆ. ಆದಿಶಂಕರರಿಂದ ಹಿಡಿದು ಆಧುನಿಕರಾದ ಡಿವಿಜಿಯವರವರೆಗೆ ವಿದ್ವಜ್ಜನ ವಂದಿತ ಭಗವದ್ಗೀತೆಯ ಬಗ್ಗೆ 'ತಿಣಿಕಿದನು ಫಣಿರಾಯ' ಎಂಬಂತೆ, ಅನೇಕಾನೇಕ ಟೀಕಾಕಾರರು /ವ್ಯಾಖ್ಯಾನಕಾರರು ಬಂದು ಹೋಗಿದ್ದಾರೆ. ಆದರೆ ಪ್ರಸ್ತುತ ಜಿ. ಆರ್. ಅವರಂತೆ ಶ್ರೀಸಾಮಾನ್ಯನ ನೆಲೆಯಲ್ಲಿ ನಿಂತು ಗೀತಾವಲೋಕನ ಮಾಡುತ್ತಿರುವವರು ವಿರಳಾತಿ ವಿರಳ ಎಂದರೆ ಉತ್ಪ್ರೇಕ್ಷೆಯಲ್ಲ. ಸಾಮ್ಯವಾದದ ಬೆಳಕಿನಲ್ಲಿ ಇವರು ಸಾಮಾನ್ಯನ ಪರವಾಗಿ ಗೀತೆಯ ವಿಶ್ವರೂಪ ದರ್ಶನ ಸಂದರ್ಭವನ್ನು ವೈಚಾರಿಕವಾಗಿ ವಿಶ್ಲೇಷಿಸುತ್ತಾರೆ; ಪ್ರಶ್ನಿಸುತ್ತಾರೆ; ಅದರ ನಿಗೂಢತೆಯ ರಹಸ್ಯವನ್ನು ಅನಾವರಣ ಮಾಡುತ್ತಾರೆ; ಧರ್ಮದ ಹೆಸರಿನ ಶೋಷಣೆಯನ್ನು ಬಯಲುಗೊಳಿಸುತ್ತಾರೆ.

ನಿಜ, ಎಲ್ಲವನ್ನೂ ಸೃಷ್ಟಿಸಿದ ಭಗವಾನ್ ಪಾಪಗಳನ್ನೇಕೆ ಸೃಷ್ಟಿಸಿದನೆಂಬ ಮರುಪ್ರಶ್ನೆಯನ್ನು ಗೀತೆ ಎತ್ತುವುದಿಲ್ಲ; ಹಾಗೇ ಬೈಬಲ್ಲಿನ ದೇವರು ಸಹ ಆಡಂ ಮತ್ತು ಈವ್ ಅವರನ್ನು ಸೃಷ್ಟಿಸಿದ ಏಸು ಹೋಗಬಾರದ ತೋಟವನ್ನೇಕೆ ಸೃಷ್ಟಿಸಿದ? ಅದರಲ್ಲಿ ತಿನ್ನಬಾರದ ಹಣ್ಣನ್ನೇಕೆ ಬಿಡಿಸಿದ? ಅಲ್ಲಿಗೆ ಸರ್ಪವನ್ನು ಏಕೆ ಕಳುಹಿಸಿದ? ಎಂದು ಕೇಳಿದರೆ ಉತ್ತರ ತೀರ ಸರಳ. ಇಷ್ಟೆಲ್ಲವನ್ನೂ ಸೃಷ್ಟಿಸಿ ಬರೆದವರು ಯಾರು? ಯಾರೆಂದರೆ ಅವರೂ ಮನುಷ್ಯ ಮಾತ್ರರೇ. ಇದರ ತಾತ್ಪರ್ಯ ಈ ದೇವರು, ಧರ್ಮ, ಶಾಸ್ತ್ರ ಇತ್ಯಾದಿ ಎಲ್ಲವೂ ನಮ್ಮ ಸೃಷ್ಟಿಯೇ ತಾನೆ? ಹಾಗಾದರೆ ನಾವು ದೇವರನ್ನು ಯಾಕೆ ಸೃಷ್ಟಿಸಿಕೊಂಡೆವು ಎಂದರೆ ನಮ್ಮ ಅನುಕೂಲಕ್ಕಾಗಿಯೇ. ಶಿವರಾಮ ಕಾರಂತರು ನಿರ್ವಚಿಸಿದಂತೆ ನಮ್ಮ ಅಳತೆಯ




ದೇವರನ್ನು ನಾವೇ ಸೃಷ್ಟಿಸಿಕೊಂಡೆವು. ಈಗ ಗೀತೆ ಕೂಡ ಹೇಗೆ ಅನುಕೂಲಕರವಾಗಿದೆ ಎಂಬುದನ್ನು ಪರಿಶೀಲಿಸಬಹುದು. ಶ್ರೀಸಾಮಾನ್ಯನ ಪ್ರತಿನಿಧಿಯೇ ಅರ್ಜುನನಿಗೆ ಊಳಿಗಮಾನ್ಯ ಯಾ ಕಾರ್ಪೊರೇಟ್ ಕಂಪನಿಯ ಪ್ರತಿನಿಧಿಯಾದ ಭಗವಾನ್ ಹೇಳಿದ ಮಾತು ನೋಡಿ : 'ನಿನ್ನ ಕೆಲಸವನ್ನು ನೀನು ಮಾಡು, ಆದರೆ ಫಲಾಫಲಗಳನ್ನು ನನಗೆ ಬಿಡು' ಎಂದಲ್ಲವೆ? ಆದುದರಿಂದ ಇದು ಜನತಂತ್ರ ವ್ಯವಸ್ಥೆಯಲ್ಲಿ ಅಸಂಬದ್ಧವಲ್ಲವೇ ಎಂಬುದನ್ನೂ, ಇದನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದರೆ ಅಲ್ಲಗಳೆಯಬಹುದೆಂಬುದನ್ನೂ ಜಿ. ಆರ್. ತಮ್ಮ ಅವಲೋಕನದಲ್ಲಿ ಅನೇಕ ಪರಿಯಲ್ಲಿ ಮಂಡಿಸುತ್ತಿದ್ದಾರೆ.

ಪ್ರಸ್ತುತ ಈ ಬಗೆಯ ಪ್ರಶ್ನೆಗಳು ನಮ್ಮನ್ನು ಕಾಡದಿದ್ದರೆ ವಿಶ್ವರೂಪ ದರ್ಶನ ಮಾಡಿದ ಅರ್ಜುನ ಯುದ್ಧಕ್ಕೆ ಸಜ್ಜಾದಂತೆ ನಾವೂ ಸಹ ಅಣ್ವಸ್ತ್ರ ಪ್ರಯೋಗಕ್ಕೆ ಸಜ್ಜಾಗುತ್ತೇವೆ. ಆದ್ದರಿಂದ ಗೀತೆಯ ಸಂದೇಶ ಮಾನವ ಕಲ್ಯಾಣವನ್ನು ಬಯಸುವುದಿಲ್ಲ. ಯುದ್ಧೋನ್ಮಾದವನ್ನು ಸೃಷ್ಟಿಸುತ್ತಿರುವ ಸಂದರ್ಭದಲ್ಲಿ ಜಿ. ಆರ್. ಅವರ ಗೀತಾವಲೋಕನದ ಸ್ಪಷ್ಟ ನಿಲುವು ಇದು. ಹೀಗೆ ಭಗವದ್ಗೀತೆಯಲ್ಲಿ ಇರುವ ಜೀವವಿರೋಧೀ ಅಪ್ರಜಾತಾಂತ್ರಿಕತೆಯನ್ನು ವೈಚಾರಿಕ ಒರೆಗಲ್ಲಿಗೆ ಒಡ್ಡುವ ಜಿ. ಆರ್. ಅಭಿನಂದನಾರ್ಹರು.

*ಬೆಂಗಳೂರು* ***ಪ್ರೊ॥ ಶಿವರಾಮಯ್ಯ***

✉ 'ಹೊಸತು' ಕನ್ನಡ ಮಾಸಪತ್ರಿಕೆಯು ಉತ್ತಮವಾದ ವಿಷಯಗಳೊಂದಿಗೆ ನಮ್ಮೆಲ್ಲರ ಮನಮುಟ್ಟುವಲ್ಲಿ ಯಶಸ್ವಿಯಾಗಿದೆ. ಪ್ರತಿ ಸಂಚಿಕೆಗೂ ನಾವು ಕಾತರಿಸಿ ಕಾಯುವಂತಹ ಮಹತ್ವವನ್ನು ಕಾಯ್ದಿರಿಸಿಕೊಂಡಿದೆ. ಇದಕ್ಕೆಲ್ಲ ಮುಖ್ಯ ಕಾರಣವೆಂದರೆ ಆ ಪತ್ರಿಕೆಯಲ್ಲಿನ ವಿಷಯ, ವಸ್ತುಗಳು. ಇಂತಹ ಉತ್ತಮ ವಿಷಯ, ಸಾಹಿತ್ಯ, ಅಕ್ಷರ ಜೋಡಣೆಯ ಮುಖಾಂತರ ಜನಮಾನಸದಲ್ಲಿ ಉಳಿಯುವ ಕೆಲಸ ಮಾಡುತ್ತಿರುವ ತಮಗೆ ಧನ್ಯವಾದಗಳು. ತಮ್ಮ ಈ ಪತ್ರಿಕಾ ಪ್ರಕಟಣೆಯು ನಿರಂತರವಾಗಿ ಯಶಸ್ಸಿನಿಂದ ಸಾಗಲಿ ಎನ್ನುವ ಸದಾಶಯಗಳೊಂದಿಗೆ ತಮಗೆ ಶುಭ ಹಾರೈಸುತ್ತಿದ್ದೇವೆ.

*ಬೆಂಗಳೂರು* ***ಎಸ್. ಜಿ. ಸುಶೀಲಮ್ಮ***

## ಗಣಿ ಪಾಳೇಗಾರಿಕೆಯ ಆಳ, ಅಗಲ

✉ ಚಿನ್ನ, ಕಬ್ಬಿಣ, ಮ್ಯಾಂಗನೀಸ್‌ನಂತಹ ಲೋಹಗಳಲ್ಲದೆ ತೈಲ, ಕಲ್ಲಿದ್ದಲು, ಕಲ್ಲು, ಮರಳು ಮತ್ತು ಪಾತಾಳದ ನೀರನ್ನು ತೆಗೆಯುವುದು ಇವೆಲ್ಲವೂ ಗಣಿಗಾರಿಕೆಯೇ. ಕಲ್ಲು ಮಣ್ಣು, ನೀರಿನ ವ್ಯವಹಾರದ ಬಗ್ಗೆ ಸಾಮಾನ್ಯ ಜನರಿಗೆ ಅಷ್ಟೊಂದು ಗಮನ ಇದ್ದಂತಿಲ್ಲ. ಇಂತಹ ಸಂಪತ್ತು ಯಥೇಚ್ಛವಾಗಿ ಇದೆ, ಬಳಸದಿದ್ದರೆ ವ್ಯರ್ಥ, ಬಳಸಲು ಬಂಡವಾಳ ಬೇಕು, ಯಾರಾದರೂ ಬಳಸಿದರೆ ಅದು ಅಭಿವೃದ್ಧಿ ಕಾರ್ಯ ಎಂಬ ತಿಳುವಳಿಕೆ ಜನರಲ್ಲಿದೆ. ಆದುದರಿಂದ ದೂರದ ಬೆಟ್ಟ ಗುಡ್ಡಗಳ, ನದಿಗಳ ಕಡೆಗೆ ಅವರ ಗಮನ ಕಡಿಮೆ.

ಊರಿಗೆ ರಸ್ತೆ ಮಾಡಿಸಲೆಂದು ಕಲ್ಲು ಕಡಿಯಲು ಊರವರಿಂದ ಅನುಮತಿ ಪಡೆದು ಊರೇ ನಡುಗುವಂತಹ ಗಣಿಗಾರಿಕೆ ಮಾಡಿ ಬಲಿತವರಿರುವ ಅನೇಕ ಊರುಗಳು ನಮ್ಮ ಸುತ್ತ ಇವೆ. ಗಣಿಗಾರಿಕೆ ಮಾಡುವವರು ಗುತ್ತಿಗೆ ಪಡೆಯುವಾಗ ಸಲ್ಲಿಸುವ ಶುಲ್ಕ ಅವರಿಗೆ ಬರುವ ಆದಾಯದ ಚಿಕ್ಕಾಸು, ಅಷ್ಟೆ. ಸ್ವಲ್ಪ ವೃತ್ತಿಪರವಾಗಿ ಗಣಿಗಾರಿಕೆ ಮಾಡುವ ಕಂಪೆನಿಗಳು ತಾವು ಪೇಪರ್‌ನಲ್ಲಿ ತೋರಿಸುವ ಲಾಭದ ಶೇಕಡ ಮೂವತ್ತರಷ್ಟು ಭಾಗವನ್ನು ಕೇಂದ್ರ ಸರಕಾರಕ್ಕೆ ಆದಾಯ ತೆರಿಗೆ ರೂಪದಲ್ಲಿ ಕಟ್ಟುತ್ತವೆ. ಗಣಿಗಾರಿಕೆಯಲ್ಲಿ ರಾಜ್ಯ ಸರಕಾರಗಳಿಗಿಂತ ಕೇಂದ್ರ

ಸರಕಾರಕ್ಕೆ ಹೆಚ್ಚಿನ ಆದಾಯ ಇರುವುದರಿಂದ ಕೇಂದ್ರವು ಸದಾ ಗಣಿಗಾರಿಕೆಯ ಪರ ಇರುತ್ತದೆ.

ಲೀಸ್ ಪಡೆಯದೆ ಕದ್ದು ಗಣಿಗಾರಿಕೆ ಮಾಡುವುದು ಅಥವಾ ಹೆಚ್ಚು ಪ್ರದೇಶದಲ್ಲಿ, ಹೆಚ್ಚು ಪ್ರಮಾಣದಲ್ಲಿ ಗಣಿಗಾರಿಕೆ ಮಾಡುವುದು ಅಕ್ರಮ ಗಣಿಗಾರಿಕೆ. ಸಕ್ರಮ ಗಣಿಗಾರಿಕೆಯೂ ಪೂರ್ಣ ಸಕ್ರಮ ಅಲ್ಲ. ಗುತ್ತಿಗೆ ದೊರಕಿಸಿಕೊಳ್ಳಲು ಅಡ್ಡ ದಾರಿ ಹಿಡಿಯುವುದು, ಪರಿಸರ ಸಂರಕ್ಷಣೆ, ಕಾರ್ಮಿಕರ ಹಿತರಕ್ಷಣೆಯ ಕಾನೂನುಗಳನ್ನು ಮುರಿಯುವುದು ಸಾಮಾನ್ಯ.

ಕಲ್ಲು, ಮರಳು ಮತ್ತು ಇತ್ತೀಚೆಗೆ ನೀರು ಗಣಿಗಾರಿಕೆ ಮಾಡಿ ಸಾಗಿಸುವ ದಂಧೆಗಳು ಮತ್ತು 'ಜುಗಾರಿ ಕ್ರಾಸ್'ಗಳು ಊರೂರುಗಳಲ್ಲಿ ಭಯಾನಕ ವಾಗಿ ಬೆಳೆಯುತ್ತಿವೆ. ದೇಶದಲ್ಲಿ ಸಾಕಷ್ಟು ಅಧಿಕಾರಿಗಳು, ಹೋರಾಟಗಾರರು ಗಣಿಗಳಿಗೆ ಬಲಿಯಾಗಿದ್ದಾರೆ. ಗಣಿಗಾರಿಕೆ ನಡೆಯುವ ಹಳ್ಳಿಗಳ ಪಂಚಾಯತ್ ಸದಸ್ಯರು, ಅಧಿಕಾರಿಗಳೂ ಫಲಾನುಭವಿಗಳಾಗಿ ಸಹಕರಿಸುತ್ತಾರೆ. ಈಗ ಕೆಲವು ಕಡೆಗಳಲ್ಲಿ ಜನರೂ ಪಾಲು ಕೇಳುತ್ತಿರುವುದರಿಂದ ಅಕ್ಕ ಪಕ್ಕದ ಮನೆಗಳಿಗೂ ಇಂತಿಷ್ಟು ಎಂದು ದುಡ್ಡು ಹಂಚುವ ವ್ಯವಸ್ಥೆಯೂ ಇದೆಯಂತೆ. ದೇವಸ್ಥಾನಗಳ ಜೀರ್ಣೋದ್ಧಾರ ಮತ್ತು ಕಾಣಿಕೆ ಗಳಿಂದ ದೇವರುಗಳೂ ಗಣಿ ಫಲಾನುಭವಿ ಗಳಾಗಿದ್ದಾರೆ.

ಇದು ಹಳ್ಳಿ ಮಟ್ಟದ ಗಣಿಗಳ ಸಂಗತಿಯಾದರೆ ಮೇಲ್ಮಟ್ಟದಲ್ಲೂ ಸರಕಾರಗಳನ್ನೇ ಅಲ್ಲಾಡಿಸುವಷ್ಟು ಬಲಾಢ್ಯ ಗಣಿ ಮಾಫಿಯಾಗಳಿವೆ. ಕರ್ನಾಟಕಕ್ಕೂ ಇದರ ಅನುಭವವಾಗಿದೆ. ಕರ್ನಾಟಕವು ಅತ್ಯಂತ ಕೆಟ್ಟ ರೀತಿಯ ಗಣಿಗಾರಿಕೆ ಮತ್ತು ಗಣಿ ರಾಜಕಾರಣಕ್ಕೆ ಮಾದರಿಯಾಗಿದೆ. ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರುಗಳಲ್ಲಿ ಅಕ್ರಮ ವಾಗಿ, ಅವೈಜ್ಞಾನಿಕವಾಗಿ ನಡೆದ ಗಣಿಗಾರಿಕೆ ಯಿಂದಾದ ನಾಶವನ್ನು ಸರಿಪಡಿಸಲು ಸರಕಾರವು ಮೀಸಲಿಟ್ಟ ಪರಿಹಾರ ಮತ್ತು ಪುನರ್ವಸತಿ ಹಣ ಖರ್ಚಾಗದೆ ಉಳಿದಿದೆ. ಈ ಹಣವನ್ನೂ ಸ್ವಾಹಾ ಮಾಡಲು ಗಣಿ ರಾಜಕಾರಣಿಗಳ ಕುಟುಂಬಗಳ ಫೌಂಡೇಶನ್‌ಗಳು, ಸ್ವಯಂಸೇವಾ ಸಂಸ್ಥೆಗಳು ಬಾಯಿತೆರೆದು ಕಾದುಕುಳಿತಿವೆ.

*ಬೆಂಗಳೂರು* **ಜನಾರ್ದನ ಕೆಸರಗದ್ದೆ**

✉ ಆಗಸ್ಟ್ ತಿಂಗಳ ಸ್ವಾತಂತ್ರ್ಯೋತ್ಸವದ ವಿಶೇಷ ಸಂಚಿಕೆ ಅನೇಕ ಉಪಯುಕ್ತ, ಸಮಯೋಚಿತ ಲೇಖನಗಳನ್ನೊಳಗೊಂಡಿದೆ. ಈ ತಿಂಗಳ ಸ್ವಾತಂತ್ರ್ಯೋತ್ಸವದ ಸಂಭ್ರಮಾಚರಣೆಯ ವೇಳೆಗೆ ನಮ್ಮ ದೇಶ ಸ್ವತಂತ್ರ ದೇಶವೆಂದು ಪರಿಗಣಿಸಲಾಗಿ ಏಳು ದಶಕಗಳ ಅವಧಿಯನ್ನು ಪೂರೈಸುತ್ತಿದೆ. ಏಳು ದಶಕಗಳ ಹಿಂದೆ ನಮ್ಮ ದೇಶದ ಪ್ರಥಮ ಪ್ರಧಾನ ಮಂತ್ರಿ ಪಂಡಿತ್ ಜವಾಹರಲಾಲ ನೆಹರೂ ಅವರು ತಮ್ಮ Trust with Destiny ಎಂಬ ಭಾಷಣದಲ್ಲಿ ಸ್ವತಂತ್ರ ಭಾರತದ ಭವ್ಯ ಸಮಾಜದ ಬಗ್ಗೆ ಅತ್ಯಂತ ಉತ್ಸಾಹದಿಂದ ತಮ್ಮ ಕನಸುಗಳನ್ನು ದೇಶದ ಜನತೆಯೊಂದಿಗೆ ಹಂಚಿಕೊಂಡಿದ್ದರು. ಈ ಏಳು ದಶಕಗಳ ಅವಧಿಯಲ್ಲಿ ದೇಶ ಏನು ಪ್ರಗತಿಯನ್ನು ಕಂಡಿಲ್ಲವೆಂದು ಹೇಳಲಾಗದು. ದೇಶಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭಕ್ಕೆ ಹೋಲಿಸಿದರೆ ಸಾಕ್ಷರತೆ ಪ್ರಾಥಮಿಕ ಆರೋಗ್ಯ, ಶಿಕ್ಷಣ, ಕೃಷಿ, ಉತ್ಪಾದನೆ ಮತ್ತು ಸೇವಾ ಕ್ಷೇತ್ರಗಳಲ್ಲಿ ಬೆಳವಣಿಗೆಯನ್ನು ಕಾಣಬಹುದು. ಆದರೆ ಕಾಲ ಉರುಳಿದಂತೆ ದೇಶದ ಜನಸಂಖ್ಯೆಯಲ್ಲಿ ಏರಿಕೆಯಾಗಿ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳು ಸಂಕೀರ್ಣವಾಗುತ್ತಿವೆ. ಸ್ವತಂತ್ರ ಭಾರತದ ಇತಿಹಾಸದಲ್ಲಿ ಅನೇಕ ರಾಜಕೀಯ ಪಕ್ಷಗಳು ಮತ್ತು ಸಮ್ಮಿಶ್ರ ಸರಕಾರಗಳು ಆಡಳಿತ ನಡೆಸಿವೆ. ಹನ್ನೆರಡು ಪಂಚವಾರ್ಷಿಕ ಯೋಜನೆಗಳು ಅನುಷ್ಠಾನಗೊಂಡಿವೆ. ಇತ್ತೀಚಿನ ಒಂದು ವರದಿಯ ಪ್ರಕಾರ, ದೇಶದ ಶೇಕಡ ೧೧ರಷ್ಟು ಭಾಗದ ಶ್ರೀಮಂತ ವರ್ಗ ದೇಶದ ಸಂಪನ್ಮೂಲಗಳನ್ನು ಬಳಸಿಕೊಳ್ಳುತ್ತಿದೆ. ಶ್ರೀಮಂತರ ಮತ್ತು ಬಡವರ ನಡುವಿನ ಆರ್ಥಿಕ ಅಸಮಾನತೆ ಹೆಚ್ಚುತ್ತಿದೆ. ದೇಶದ ಜನಸಂಖ್ಯೆಯ ಶೇಕಡ ೪೦ರಷ್ಟು ಜನರು ಬಡತನರೇಖೆಯ ಕೆಳಗಿದ್ದಾರೆ. ಪ್ರತಿಭಾವಂತ ವಿದ್ಯಾರ್ಥಿಗಳು ಅವಕಾಶ ವಂಚಿತರಾಗಿ, ಆರ್ಥಿಕ ಚೈತನ್ಯವಿಲ್ಲದೆ, ವಿದ್ಯಾಭ್ಯಾಸ ಮುಂದುವರಿಸಲು ಸಾಧ್ಯವಾಗದೆ ಹತಾಶರಾಗಿದ್ದಾರೆ.

ಭಾರತೀಯ ಸಮಾಜ, ಇಂದು ಜಾತಿ ವ್ಯವಸ್ಥೆ, ಮತಧಾರ್ಮಿಕ ಗೊಂದಲಗಳು, ಮೂಲಭೂತ ವಾದಿ ಮತಧಾರ್ಮಿಕ ಸಂಘಟನೆಗಳ, ಶಕ್ತಿಗಳ, ವ್ಯಾಪಕವಾದ ಚಟುವಟಿಕೆಗಳಿಂದಾಗಿ, ವಿಘಟನೆಯ ಹಾದಿಯತ್ತ ಸಾಗುತ್ತಿರುವ ಲಕ್ಷಣಗಳು ಗೋಚರಿ ಸುತ್ತಿವೆ. ಆಡಳಿತ ನಡೆಸಿದ ಬಹುತೇಕ ರಾಜಕೀಯ ಪಕ್ಷಗಳ ನಾಯಕರು ಕೋಟ್ಯಂತರ ರೂ.ಗಳ ಭ್ರಷ್ಟಾಚಾರದ ಹಗರಣಗಳಲ್ಲಿ ಭಾಗಿಯಾಗಿದ್ದಾರೆ.

ಡಾ॥ ಜಿ. ರಾಮಕೃಷ್ಣ ಅವರ ಭಗವದ್ಗೀತೆಯ ಕುರಿತ ಲೇಖನಮಾಲೆ ಸ್ವಾರಸ್ಯಕರ ಚರ್ಚೆಯನ್ನು ಮುಂದುವರಿಸಿದೆ. ರಾಮಚಂದ್ರ ಗುಹ ಅವರ ಲೇಖನ, ನೆಹರೂ ಮತ್ತು ವಲ್ಲಭಭಾಯಿ ಪಟೇಲ್ ಅವರಿಬ್ಬರೂ ಮಹಾತ್ಮ ಗಾಂಧಿಯವರ ತತ್ವ ಆದರ್ಶಗಳನ್ನು ಅನುಸರಿಸಿ, ಭಿನ್ನಾಭಿಪ್ರಾಯ ಗಳಿದ್ದರೂ ಅವರವರ ಜವಾಬ್ದಾರಿಗಳನ್ನು ನಿರ್ವಹಿಸಿದ ಸಂಗತಿಯನ್ನು ಪ್ರಸ್ತಾಪಿಸಿದ್ದಾರೆ. ಅವರೀರ್ವರಲ್ಲಿ ಮೇಲು–ಕೀಳು ಎಂದು ಪರಿಗಣಿಸುವುದು ಸರಿಯಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇತ್ತೀಚೆಗೆ ಭಾರತೀಯ ಜನತಾ ಪಕ್ಷ ರಾಜಕೀಯ ಉದ್ದೇಶದಿಂದ ವಲ್ಲಭಭಾಯಿ ಪಟೇಲರಿಗೆ ಹೆಚ್ಚು ಪ್ರಚಾರ ನೀಡುತ್ತಿರುವುದನ್ನು ಕಾಣಬಹುದು.

ಡಾ॥ ಎನ್. ಗಾಯತ್ರಿಯವರು, ಕರ್ನಾಟಕದ ಜಲಿಯನ್‌ವಾಲಾ ಬಾಗ್ ಎಂದು ಖ್ಯಾತಿ ಗಳಿಸಿರುವ ವಿದುರಾಶ್ವತ್ಥ ಗ್ರಾಮದ ಸ್ವಾತಂತ್ರ್ಯ ಹೋರಾಟದ ಅಧ್ಯಾಯ ಮತ್ತು ಹೋರಾಟದಲ್ಲಿ ಮಡಿದ ಗ್ರಾಮಸ್ಥರ ಪರಿಚಯ ನೀಡಿರುವುದು ಸಂದರ್ಭೋಚಿತವಾಗಿದೆ. ಶತಾಯುಷಿ, ಸ್ವಾತಂತ್ರ್ಯ ಹೋರಾಟಗಾರ ಶ್ರೀಯುತ ಹೆಚ್. ಎಸ್. ದೊರೆಸ್ವಾಮಿಯವರ ಬಗ್ಗೆ ಪರಂಜ್ಯೋತಿಯವರ ಲೇಖನ ಸಮಯೋಚಿತವಾಗಿದೆ. ಈ ಇಳಿವಯಸ್ಸಿನಲ್ಲೂ, ಶ್ರೀಯುತರು ಸಾರ್ವಜನಿಕ ಹಿತಾಸಕ್ತಿ ಹೋರಾಟಗಳಲ್ಲಿ ಭಾಗವಹಿಸುತ್ತಿರುವುದು, ಯುವಕರಿಗೆ ಸ್ಫೂರ್ತಿದಾಯಕ.

*ಬೆಂಗಳೂರು* **ಶಂಕರನಾರಾಯಣ**

✉ ಆಗಸ್ಟ್ ೨೦೧೭ರ 'ಹೊಸತು' ಮಾಸಪತ್ರಿಕೆ ಸ್ವಾತಂತ್ರ್ಯೋತ್ಸವದ ವಿಶೇಷ ಸಂಚಿಕೆಯಾಗಿ ಮೂಡಿಬಂದಿರುವುದು ಸ್ವಾಗತಾರ್ಹ. ಮುಖಪುಟ ದಲ್ಲಿ ಕರ್ನಾಟಕದ 'ಜಲಿಯನ್‌ವಾಲಾ ಬಾಗ್' ಎಂದು ಹೆಸರು ಗಳಿಸಿರುವ ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲೂಕಿನ ವಿದುರಾಶ್ವತ್ಥ ಗ್ರಾಮದ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಿ ಗುಂಡೇಟಿನಿಂದ ಮರಣಹೊಂದಿದ ಸ್ವಾತಂತ್ರ್ಯ ಹೋರಾಟಗಾರರ "ಸ್ಮಾರಕ ನಿರ್ಮಾಣ"ದ ದೃಶ್ಯಚಿತ್ರಗಳು ಆಕರ್ಷಕ ವಾಗಿವೆ. ಅಂಡಮಾನ್ ಜೈಲುಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರನ್ನು ಬಂಧಿಸಿಟ್ಟು ಪ್ರಾಣಾಂತಿಕ ಹಿಂಸೆಗೆ ಗುರಿಪಡಿಸಿ, ದುಡಿಸಿಕೊಂಡ ಬ್ರಿಟಿಷರ ವಿರುದ್ಧ ಭಾರತೀಯರು ಪ್ರತಿಭಟನೆ ಮಾಡಿದಾಗ ಹಿಂಸೆಗೆ ಗುರಿಯಾಗಿರುವುದು ಮನಕಲಕಿದೆ. ಬ್ರಿಟಿಷ್ ಸೈನ್ಯವನ್ನು ಎದುರಿಸಿದ ಮುಧೋಳು ತಾಲೂಕಿನ ಹಲಗಲಿ ಬೇಡರ ಸಾಹಸ, ಧೈರ್ಯ, ಶೌರ್ಯ, ಕೆಚ್ಚು ಲಾವಣಿ ಹಾಡುಗಳು ಮತ್ತು ಶಿವಪುರ ಹತ್ಯಾಕಾಂಡ ಕುರಿತು ಲಾವಣಿಗಳು ಪ್ರೇರಣೆ, ಚೇತನ ನೀಡುವಂಥವು.

ಪತ್ರಿಕೆಯ ಲೇಖನಗಳು ಅರ್ಥಗರ್ಭಿತವಾಗಿದ್ದು ಜನರಿಗೆ ಅರಿವು ಮೂಡಿಸಿವೆ. ಕಾವ್ಯಲೋಕ, ಹೊಸ ಓದು, ಬಹುಮುಖ ಪ್ರತಿಭೆಗಳು, ಮಹತ್ವದ ಗ್ರಂಥ ಮತ್ತು ಜಾಹಿರಾತು ಪ್ರಕಟಣೆ ಮುಂತಾದ ಮಾಹಿತಿ ಜ್ಞಾನಾರ್ಜನೆಯ 'ದಾರಿದೀಪವಾಗಿ ಬೆಳಕು ನೀಡಿ' ಶ್ರೇಯಸ್ಸು ಯಶಸ್ಸಾಗಿವೆ.

*ಚೌಡಾಪುರ* **ಮರಿದೇವರ ಸಿದ್ದಪ್ಪ ಮೇಷ್ಟ್ರು**

## ತಿದ್ದುಪಡಿ

ಆಗಸ್ಟ್ ೨೦೧೭ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ತಾನ್‌ಸೇನ್' ಕತೆಯನ್ನು ಹಿಂದಿ ಭಾಷೆಯಿಂದ ಅನುವಾದ ಮಾಡಿದ್ದಾರೆ. ಇದರ ಮೂಲ ಕತೆಗಾರ ಶ್ರೀ ಜಯಶಂಕರ ಪ್ರಸಾದ್.



# ರಂಗ ಕಲಾವಿದ ಏಣಗಿ ಬಾಳಪ್ಪ

ನಾಡಿನ ಹೆಸರಾಂತ ಕಲಾವಿದ, ಸಂಗೀತಗಾರ, ಏಣಗಿ ಬಾಳಪ್ಪ ನಿಧನರಾಗಿದ್ದಾರೆ. ಬದುಕಿನ ನೂರು ವರ್ಷಗಳವರೆಗೂ ಕಲಾಸೇವೆ ಮಾಡಿದ ಬಾಳಪ್ಪನವರು ತಮ್ಮ ನೂರಾಮೂರನೇ ವಯಸ್ಸಿಗೆ ವಯೋಸಹಜ ಅನಾರೋಗ್ಯದಿಂದ ತೆರೆಯ ಮರೆಗೆ ಸರಿದರು. ೧೯೧೪ರಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಏಣಗಿ ಗ್ರಾಮದಲ್ಲಿ ಕೃಷಿಕ ಕುಟುಂಬದಲ್ಲಿ ಜನಿಸಿದ ಬಾಳಪ್ಪನವರು ಬಾಲ ನಟರಾಗಿಯೇ ನಟನೆ, ಹಾಡುಗಾರಿಕೆ ಆರಂಭಿಸಿದವರು. ಆ ಕಾಲದ ವಿವಿಧ ಕಂಪನಿಗಳಲ್ಲಿ ಕಲಾವಿದರಾಗಿ, ಹಾಡುಗಾರರಾಗಿ ಕೆಲಸ ಮಾಡಿದ ಬಾಳಪ್ಪನವರು ತಮ್ಮದೇ ಆದ ಕಲಾವೈಭವ ನಾಟ್ಯ ಸಂಘ ಕಟ್ಟಿದರು. ಪೌರಾಣಿಕ, ಸಾಮಾಜಿಕ ನಾಟಕಗಳನ್ನು ಮಾಡಿಸಿದರೂ ದೇಶದ ಸ್ವತಂತ್ರ ಚಳುವಳಿ, ಕರ್ನಾಟಕ ಏಕೀಕರಣ ಚಳುವಳಿಗೆ ಒಬ್ಬ ಕಲಾವಿದನಾಗಿ ತಮ್ಮದೇ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಬೆಳಗಾವಿ, ಧಾರವಾಡ, ವಿಜಾಪುರ ಪ್ರದೇಶದಲ್ಲಿ ಬಾಳಪ್ಪನವರ ಸಂಘ ನಾಟಕ ಮಾಡಿಸುವಾಗ ಬ್ರಿಟಿಷರ ವಿರುದ್ಧ ಹೋರಾಟ ಮಾಡುತ್ತಿದ್ದ ಚಳುವಳಿಗಾರರಿಗೆ ರಕ್ಷಣೆ ಕೊಡುವ ಕೆಲಸವನ್ನು ಬಾಳಪ್ಪ ಮಾಡುತ್ತಿದ್ದರು. ಭೂಗತರಾದ ಸ್ವಾತಂತ್ರ್ಯ ಹೋರಾಟಗಾರರನ್ನು ಪೊಲೀಸರು ಬೆನ್ನತ್ತಿದಾಗ ಹೋರಾಟಗಾರರಿಗೆ ಬಣ್ಣಹಚ್ಚಿ, ವೇಷ ತೊಡಿಸಿ ಕೂರಿಸಿದ ಘಟನೆಗಳಿವೆ. ಪೌರಾಣಿಕ ನಾಟಕ ನಡೆದ ಸಂದರ್ಭದಲ್ಲಿಯೂ ಪಾತ್ರಗಳು ಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟ ಕುರಿತು ಮಾತನಾಡಿದ ಸನ್ನಿವೇಶಗಳಿವೆ.

೧೯೮೩ರಲ್ಲಿ ಕಲಾವೈಭವ ನಾಟ್ಯ ಸಂಘವನ್ನು ಸ್ಥಗಿತಗೊಳಿಸಿದರೂ ಅವರ ಪುತ್ರ, ಆಧುನಿಕ ರಂಗಭೂಮಿಯ ನಿರ್ದೇಶಕ, ಕರ್ನಾಟಕದ ಅಪರೂಪದ ಕಲಾವಿದ ಏಣಗಿ ನಟರಾಜ ಜೊತೆಗೂಡಿ ಹವ್ಯಾಸಿ ಕಲಾವಿದರನ್ನು ಸೇರಿಸಿ ನಾಟಕಗಳನ್ನು ಮಾಡಿದರು. ನಿಧನಕ್ಕೆ ಮುಂಚೆ ಮೂರ್‍ನಾಲ್ಕು ವರ್ಷದವರೆಗೂ ಹಾಡು ಹೇಳಿದ ಬಾಳಪ್ಪ ರಂಗಗೀತೆ, ಜಾನಪದ ಗೀತೆಗಳ ಕಣಜ. ನೆನಪಿನ ಖಜಾನೆಯಿಂದಲೇ ನೂರಾರು ಹಾಡುಗಳನ್ನು ಹಾಡುವ ಶಕ್ತಿ ಬಾಳಪ್ಪನವರಿಗಿತ್ತು.

ಯುವಕನಾಗಿದ್ದಾಗ ಬಾಳಪ್ಪನವರು ಸ್ತ್ರೀಪಾತ್ರಗಳಲ್ಲಿ ನಟಿಸಿ, ಹಾಡಿ ಪ್ರೇಕ್ಷಕರಿಗೆ ಆ ಪಾತ್ರಧಾರಿ ಗಂಡಸು ಎಂದು ಹೇಳಿದರೆ ನಂಬಲಾಗದಿದ್ದ ಘಟನೆಗಳಿವೆ. ಕನ್ನಡ ರಂಗಭೂಮಿ, ಚಿತ್ರರಂಗದ ಬಹುತೇಕ ಕಲಾವಿದರಿಗೆ ಸ್ಫೂರ್ತಿಯಾಗಿದ್ದ ಏಣಗಿ ಬಾಳಪ್ಪನವರು ಕನ್ನಡನಾಡಿನ ಅಪರೂಪದ ಕಲಾವಿದ.

ಮಗ ನಟರಾಜ ಕಣ್ಣಮುಂದೆಯೇ ಅನಾರೋಗ್ಯದಿಂದ ನಿಧನರಾದಾಗ ಬಾಳಪ್ಪ ಆಘಾತಕ್ಕೊಳಗಾದರು. ಆದರೂ ಆ ನೋವನ್ನು ಮರೆಯಲು ಸದಾ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಬದುಕಿನ ಶತವರ್ಷ ಪೂರೈಸಿದರು. ಸದಾ ನಗುಮುಖಿ; ತುಳುಕುತ್ತಿದ್ದ ಶತವರ್ಷಗಳ ಅನುಭವವನ್ನು ಮುಂದಿನ ಪೀಳಿಗೆಗೆ ದಾಟಿಸುವ ತೀವ್ರವಾದ ತುಡಿತ. ಚಿಕ್ಕವರೇ ಮಾತನಾಡಿಸಿದರೂ ಅದೇ ಪ್ರೀತಿ, ಉತ್ಸಾಹ. ಬೆಳಗಾವಿ–ಧಾರವಾಡ ನಡುವಿನ ಗ್ರಾಮೀಣ ಪ್ರದೇಶದ ಕನ್ನಡ, ನೋಡುತ್ತಿದ್ದರೆ ನೋಡುತ್ತಿರಬೇಕು ಎನ್ನಿಸುವ ವ್ಯಕ್ತಿತ್ವ, ಮಾತು ಕೇಳುತ್ತಿದ್ದರೆ ಅವರು ಅದೇ ರೀತಿ, ಅದೇ ಶೈಲಿಯಲ್ಲಿ ಮಾತನಾಡುತ್ತಿರಬೇಕು ಎನ್ನುವ ಪ್ರೀತಿ ತುಂಬಿದ ಮಾತುಗಳು. ಈಗ ಮಾತು ನಿಲ್ಲಿಸಿದ್ದಾರೆ ಬಾಳಜ್ಜ. ಶತಮಾನದ ಕೊಂಡಿ ಕಳಚಿದೆ. ಸಾರ್ಥಕ ಬದುಕು ನಡೆಸಿ ಒಂದು ವಿಶಿಷ್ಟ ಮಾದರಿಯನ್ನು ಕೊಟ್ಟುಹೋದ ಬಾಳಪ್ಪಜ್ಜನಿಗೆ 'ಹೊಸತು' ಬಳಗದ ನಮನಗಳು.

– ಸಂ.








## ಭಗವದ್ಗೀತೆ : ಒಂದು ಅವಲೋಕನ

# ೧೨. ಭಕ್ತನೂ ಸ್ಥಿತಪ್ರಜ್ಞನೇ

**ಗೀತೆಯನ್ನು ಕೇವಲ ಸಾಮಾಜಿಕ ನೆಲೆಯಲ್ಲಿ ನೋಡಬೇಕಾಗಿಲ್ಲ. ವೈಯ್ಯಕ್ತಿಕ ನೆಲೆಯಲ್ಲಿ ವ್ಯಕ್ತಿಯು ತನ್ನನ್ನು ತಾನು ಮಾರ್ಪಡಿಸಿಕೊಳ್ಳಲು ಮತ್ತು ಸಮಚಿತ್ತದಿಂದಿರಲು ಗೀತೆಯು ಸೂಚನೆ ನೀಡುತ್ತದೆ. ಸಮಾಜದಲ್ಲಿ ವ್ಯಕ್ತಿಯ ಸ್ಥಾನವು ಬದಲಾಗುವಂಥದಲ್ಲವೆಂಬುದು ಗೀತೆಯ ನಿಷ್ಕರ್ಷೆ. ಆದರೆ ನಿಗದಿತ ಸ್ಥಾನದಲ್ಲಿಯೂ ವ್ಯಕ್ತಿಯು ತೃಪ್ತನಾಗಿರಬೇಕು ಎಂಬುದು ಅದರ ಘೋಷಿತ ಆಶಯ. ಅಘೋಷಿತ ಆಶಯವು ಅಸ್ತಿತ್ವದಲ್ಲಿರುವ ಸಾಮಾಜಿಕ ಅಸಮಾನತೆಯ ಸಂಬಂಧಗಳನ್ನು ಗಟ್ಟಿಗೊಳಿಸಬೇಕೇ ವಿನಾ ನುಚ್ಚುನೂರು ಮಾಡಹೋಗಬಾರದು, ಎಂದು. ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞ ಮತ್ತು ಹನ್ನೆರಡನೆಯ ಅಧ್ಯಾಯದ ಭಕ್ತ, ಇಬ್ಬರೂ ಒಂದೇ ರೀತಿಯ ವ್ಯಕ್ತಿತ್ವ ಬೆಳೆಸಿಕೊಂಡಿರುವವರು. ಹಾಗೆ ವ್ಯಕ್ತಿತ್ವವನ್ನು ಏಕೆ ಮತ್ತು ಹೇಗೆ ಬೆಳೆಸಿಕೊಳ್ಳಬೇಕೆಂಬುದಕ್ಕೆ ಗೀತೆಯು ಅಷ್ಟೇನೂ ವಿವರವಾದ ಸೂಚನೆಗಳನ್ನು ನೀಡುವುದಿಲ್ಲ ; ಆದರೆ ಅಂತಹ ವ್ಯಕ್ತಿತ್ವ ಬೆಳೆಸಿಕೊಂಡವರ ಹರ್ಷ, ಸಮಾಧಾನ ಚಿತ್ತ, ಸಮತ್ವದ ಭಾವನೆ, ಸುಭಗವಾದುವೆಂದು ಗೀತೆಯು ಪ್ರತಿಪಾದಿಸುತ್ತದೆ.**

**ಜಿ. ರಾಮಕೃಷ್ಣ**

ನನ್ನನ್ನು ಆರಾಧಿಸು, ನನ್ನಲ್ಲಿ ಮಗ್ನನಾಗು, ನನ್ನನ್ನು ಸೇರಿಕೊ, ಇತ್ಯಾದಿ ಆದೇಶಗಳು ಗೀತೆಯಲ್ಲಿ ಪದೇಪದೇ ನೀಡಲಾಗಿರುವುದನ್ನು ಗಮನಿಸಿದ್ದೇವೆ. ಈ 'ನಾನು' ಯಾರೆಂಬುದು ಸ್ಪಷ್ಟವಾಗಿದೆ. ಅದು ಸ್ವತಃ ಶ್ರೀ ಭಗವಾನ್ ಅಲ್ಲದೆ ಬೇರಾರೂ ಅಲ್ಲ, ಬೇರಾವುದೂ ಅಲ್ಲ. ಹೀಗೆ ಸಾಕಾರನಾದ ಭಗವಾನನಲ್ಲಿ ಶ್ರದ್ಧೆ ಇಲ್ಲದವರು ಏನು ಮಾಡಬಹುದೆಂಬುದು ಒಂದು ಪ್ರಶ್ನೆ. ಹೋಗಲಿ, ಭಗವಾನನು ನಿರಾಕಾರನೆಂದಾದರೆ ಅವನನ್ನು ಅಥವಾ ಅದನ್ನು ಒಲಿಸಿಕೊಳ್ಳುವುದೆಂತು ? ಹೀಗೆ ಎರಡು ಪ್ರಕಾರಗಳಲ್ಲಿ ಒಲಿಸಿಕೊಳ್ಳುವುದು ಸಾಧ್ಯವೆಂದಾದರೆ, ಅವೆರಡರಲ್ಲಿ ಯಾವುದು ಶ್ರೇಷ್ಠ ? ಜಿಜ್ಞಾಸುವಾದ ಅರ್ಜುನನ ಈ ಪ್ರಶ್ನೆಯು ವಿಶ್ವರೂಪ ದರ್ಶನದ ನಂತರದಲ್ಲಿ ಉದ್ಭವಿಸಿದೆ. ಒಟ್ಟಿನಲ್ಲಿ 'ದೇವರು' ಎಂಬ ಒಂದು ಕಲ್ಪನೆಯನ್ನು ಮಾನ್ಯ ಮಾಡಿಯೇ ಗೀತಾರ್ಥವು ಮುಂದುವರಿಯಬಲ್ಲದು. ಆ ಹೆಸರಿಲ್ಲದಿದ್ದರೂ 'ಶ್ರೀ ಭಗವಾನ್' ಎಂಬ ಹೆಸರನ್ನು ಅಂಗೀಕರಿಸಬೇಕು. ಇಲ್ಲವಾದಲ್ಲಿ ಚರ್ಚೆಯು ಮುಂದುವರಿಯಲಾರದು. ಏಕೆ ಅಂಗೀಕರಿಸಬೇಕೆಂಬ ಪ್ರಶ್ನೆಯನ್ನು ಗೀತೆಯು ಎತ್ತುವುದಿಲ್ಲ. ತತ್ತ್ವಶಾಸ್ತ್ರದಲ್ಲಿ ಅಂತಹ ಪ್ರಶ್ನೆಗೆ ಅವಕಾಶವಿದೆ, ಮತಧರ್ಮದ ವ್ಯಾಪ್ತಿಯಲ್ಲಿ ಅದು ಅಸಂಭವ. ಆದ್ದರಿಂದ ಆ ರೀತಿಯ ಸಂದೇಹ ವ್ಯಕ್ತಪಡಿಸುವವರನ್ನು ಮತ್ತು ಪ್ರಶ್ನೆ ಎತ್ತುವವರನ್ನು ಗೀತೆಯು ಮುಕ್ತವಾಗಿ ದೂಷಿಸುತ್ತದೆ. ಅದನ್ನು ಹದಿನಾರನೆಯ ಅಧ್ಯಾಯದಲ್ಲಿ ನಾವು ಕಾಣುತ್ತೇವೆ.

ಪ್ರಸ್ತುತ, ೧೨ನೆಯ ಅಧ್ಯಾಯದ ವಿಶದೀಕರಣವು ಕೇವಲ ಸಾಕಾರ ಮತ್ತು ನಿರಾಕಾರಗಳ ನಡುವೆ ಯಾವುದನ್ನು ಆಯ್ಕೆ ಮಾಡಿಕೊಳ್ಳುವುದು ಶ್ರೇಷ್ಠ ಎಂಬುದಾಗಿಯೇ ಹೊರತು ಎರಡನ್ನೂ ನಿರಾಕರಿಸಿದರೆ ಏನಾಗುತ್ತದೆ ಎಂಬುದಲ್ಲ. ವಿಶ್ವರೂಪ ದರ್ಶನ ಮಾಡಿಸಿದ ಭಗವಾನನ ಉಪಾಸನೆ ಮಾಡುವುದು ಒಂದು ಹಾದಿ; ಉಪಾಧಿರಹಿತವಾದ (ಅಥವಾ 'ಅ-ಕ್ಷರ'ವಾದ) ಮತ್ತು ಇಂದ್ರಿಯ ಗೋಚರವಲ್ಲದ ಪರಮವಸ್ತುವನ್ನು ಕೇಂದ್ರೀಕರಿಸಿ ಉಪಾಸನೆ ಮಾಡುವುದು ಇನ್ನೊಂದು ಹಾದಿ. ಅವುಗಳಲ್ಲಿ ಯಾವುದು ಉತ್ತಮವೆಂಬುದನ್ನು ಅರ್ಜುನ ತಿಳಿಯಲಿಚ್ಛಿಸುತ್ತಾನೆ. 'ಅ-ಕ್ಷರ' (ಅಂದರೆ, ನಶಿಸಿಹೋಗದಿರುವುದು) ಮತ್ತು 'ಅ-ವ್ಯಕ್ತ'ವಾದುದರ ಉಪಾಸನೆಯೊಂದಿದ್ದರೆ ಅದರ ಕ್ರಮವೇನೆಂಬುದು ಗೀತೆಯ ವ್ಯಾಪ್ತಿಗೆ ಹೊರತಾದ್ದು. ಅಥವಾ, ಅರ್ಜುನನು ಜನಸಾಮಾನ್ಯರ ಪ್ರತಿನಿಧಿಯಾದ್ದರಿಂದ ಅವನು ಸಾಕಾರವಾದ ಭಗವಾನನನ್ನು ತಣಿಸಿ ಸುಖಿಸಬೇಕೆಂಬ ಆದೇಶವನ್ನು ನೀಡಲಾಗಿದೆಯೋ ಏನೋ ! ಅಂತೂ ಭಗವಾನನ ಸಂದೇಶವು ಸರಳವಾಗಿದೆ : "ನನ್ನಲ್ಲಿ ಶ್ರದ್ಧೆ ಇರಿಸಿ ನನ್ನ ಧ್ಯಾನ ಮಾಡುವವರೇ ಅತ್ಯುತ್ತಮ ಯೋಗಿಗಳು" (೧೨.೨ : ... ಶ್ರದ್ಧಯಾ ಪರಯಾ ಉಪೇತಾಃ ತೇ ಮೇ ಯುಕ್ತತಮಾ ಮತಾಃ ॥). ಅಲ್ಲದೆ, ಅ-ಕ್ಷರ ಮತ್ತು ಅ-ವ್ಯಕ್ತವಾದುದನ್ನು ಉಪಾಸನೆ ಮಾಡಿದರೂ ಹಾಗೆ ಮಾಡುವವರು ಸೇರಿಕೊಳ್ಳುವುದು ಮತ್ತೆ ಆ ಭಗವಾನನನ್ನೇ. ಅದಕ್ಕಾಗಿ ಅವರು ಎಲ್ಲ ಇಂದ್ರಿಯಗಳ ನಿಗ್ರಹ ಮಾಡಿ ಏಕಾಗ್ರತೆಯಿಂದ ಧ್ಯಾನ ಮಾಡುತ್ತಾ ಜಗತ್ತಿನ ಸರ್ವಸ್ವಕ್ಕೂ ಹಿತ ಬಯಸುತ್ತಿರಬೇಕು (೧೨.೪ : ಸಂನಿಯಮ್ಯ ಇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ। ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥). ಇಷ್ಟು ಶ್ರಮವನ್ನು ಏಕಾದರೂ ತೆಗೆದುಕೊಳ್ಳಬೇಕು, ಅವನನ್ನು ಭಜಿಸಿ ಸುಲಭವಾಗಿ ಪಾರಾಗಬಹುದಲ್ಲ ! ಗೀತೆಯು ಸಹ ಅಂತಹ ಭಾವವನ್ನು ಪ್ರಕಟಿಸಿದೆ. ಅ-ವ್ಯಕ್ತದ ಉಪಾಸನೆಯು ಕ್ಲೇಶಕರವಾದ್ದು, ಫಲ ದೊರೆಯುವುದೂ ಕಷ್ಟ, ಎನ್ನುತ್ತದೆ ಗೀತೆ (೧೨.೫ : ಕ್ಲೇಶಃ ಅಧಿಕತರಃ ತೇಷಾಂ ...ಅವ್ಯಕ್ತಾ ಹಿ ಗತಿರ್ದುಃಖಂ...). ಗುರುತರವಾದ ಅಂತಹ ಅಭ್ಯಾಸಕ್ಕೆ ಈಡು ಮಾಡಿಕೊಳ್ಳುವ ಬದಲು ಸುಮ್ಮನೆ ಭಗವಾನನ ಧ್ಯಾನ ಮಾಡಿದರಾಗದೆ? ಹಾಗೆ ಮಾಡುವವರಿಗೆ ಭಗವಾನನು ಸಹಾಯಹಸ್ತ ನೀಡಿ ಮುಕ್ತಿಯ ಹಾದಿ ತೋರುತ್ತಾನೆ ! (೧೨.೭ : ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।). ಈ ಪ್ರಪಂಚವು ಕ್ಲೇಶಕರ, ಘೋರ, ಅದರಿಂದ ಹೇಗಾದರೂ ಪಾರಾಗಿಬಿಡಬೇಕು, ಎಂಬ ಆಕಾಂಕ್ಷೆಯು ಕೇವಲ ಗೀತೆಯಲ್ಲಿ ಪ್ರತಿಫಲಿತವಾಗಿಲ್ಲ; ಏಕೋ ಏನೋ, ಅದು ಇಡೀ ಭಾರತೀಯ ಸಂಸ್ಕೃತಿಯ ಅವಿಚ್ಛಿನ್ನ ಭಾಗವೆಂಬಂತೆ ಪದೇಪದೇ ಒತ್ತುಕೊಟ್ಟು ಬೇಸರವಾಗುವಷ್ಟು ಹೇಳುವುದನ್ನು ಕಾಣುತ್ತೇವೆ. "ಸಂಸಾರ ಸಾಗರಂ ಘೋರಂ ಅನಂತಂ ಕ್ಲೇಶಭಾಜನಂ" ಎಂಬುದು ಒಂದು ರೀತಿಯ ಪಲ್ಲವಿಯಾಗಿ ಹೋಗಿದೆ. ದಾಸರ ಪದಗಳಲ್ಲಿ ಅದು ಸಾಂದ್ರವಾಗಿ ಚಿತ್ರಿತವಾಗಿದೆ. "ನಾನಾ ಯೋನಿಗಳಲ್ಲಿ ಜನಿಸಿ ಬಂದಿದ್ದೇನೆ, ಇನ್ನು ಸಾಕುಮಾಡೋ ಭಗವಂತ" ಎಂಬ ಅಳಲು ಬಹಳ ಸಾಂದ್ರವಾಗಿದೆ. ಇಲ್ಲಿರದೆ ಇನ್ನೆಲ್ಲಿಗಾದರೂ ಏಕೆ ಶೀಘ್ರವಾಗಿ ಹೋಗಿಬಿಡಬೇಕು ? ಇಲ್ಲೇ ಜೀವನವನ್ನು ಸಹ್ಯ ಮಾಡಿಕೊಳ್ಳಬಹುದಲ್ಲವೆ ? ನಾವಿರುವ ಪ್ರಪಂಚ ಮತ್ತು ಪರಿಸರ ನಿತ್ಯಗೋಚರ; ಎಲ್ಲೋ ಹೋಗಿಬಿಡಬೇಕೆನ್ನುತ್ತಾರಲ್ಲ, ಅದೇನು ಮತ್ತು ಎಲ್ಲಿದೆ ಎಂದು ಕಂಡವರಾರು ? ಭಗವಾನನಲ್ಲಿ ಶ್ರದ್ಧೆ ಇರಿಸಿದರೆ ನಾವೆಯಲ್ಲಿ ಕೂತು ಬೇರೆ ಶಾಂತ ಮತ್ತು ಸುಖದಾಯಕ ದಡವನ್ನು ಸಲೀಸಾಗಿ ಸೇರಿಬಿಡುತ್ತಾರಂತೆ ! ಸೇರಿದ ಮೇಲೆ ಅಲ್ಲಿ ಮಾಡುವುದೇನು ? ಅದೇ ಭಗವಾನನ ಪರಿಚಾರಿಕೆ ! ಸಾಯುಜ್ಯ-ಸಾಮೀಪ್ಯ ಮುಂತಾಗಿ ಅದನ್ನು ಶ್ಲಾಘಿಸಲಾಗಿದೆ. ರಾಮಾನುಜ ದರ್ಶನದಲ್ಲಿ ಅದನ್ನು 'ಪ್ರಪತ್ತಿ' ಎನ್ನಲಾಗಿದೆ. ಅಂದರೆ, ಸಂಪೂರ್ಣವಾಗಿ ಶರಣಾಗುವುದು ಮತ್ತು ಅತ್ಯಂತ ದೈನ್ಯದಿಂದ ಸೇವೆ ಮಾಡಿಕೊಂಡು ಸ್ವತಂತ್ರವಾಗಿರುವುದು. ಇದೇ ಸ್ವಾರಸ್ಯ : ಇಲ್ಲಾದರೆ ಸೇವೆಯು ಸ್ವಾತಂತ್ರ್ಯ ನೀಡುವುದಿಲ್ಲ; ಅಲ್ಲಾದರೆ ಸೇವೆಯೇ ಸ್ವಾತಂತ್ರ್ಯ. ಅದೇ ಮುಕ್ತಿ ಮತ್ತು ಭುಕ್ತಿ. ಹಿಂದಿನ ಕಾಲದಲ್ಲಿ ಕೇರಳದಲ್ಲಿ ರಾಜನಾಗಿದ್ದ ಕುಲಶೇಖರ ಆಳ್ವಾರ್ ಎಂಬುವನು ತನ್ನ "ಮುಕುಂದಮಾಲೆ"ಯಲ್ಲಿ ಇದನ್ನು ಆರ್ದ್ರತೆಯಿಂದ ಹೇಳಿಕೊಂಡಿದ್ದಾನೆ :

"ನನ್ನ ಜನ್ಮದ ಫಲ ಬೇರೇನೂ ಬೇಡ, ನಿನ್ನ ಅನುಗ್ರಹವು ಇಷ್ಟಾದರೆ ಸಾಕು; ನಿನ್ನ ಭೃತ್ಯನ ಭೃತ್ಯನ ಪರಿಚಾರಕನ ಭೃತ್ಯನ ಭೃತ್ಯನ ಆಳು ನಾನು ಎಂಬ ಸ್ಥಾನ ಕರುಣಿಸಪ್ಪಾ ದೇವ" (ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ। ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ॥). ಅಲ್ಲೆಲ್ಲೋ ಭಗವಾನನ ಭೃತ್ಯನಾಗಿ ಅವನ ನೆನಪಿಗೆ ಬರಬೇಕಾದರೆ ನಾವಿಲ್ಲಿ ಯಾರದ್ದೋ ಭೃತ್ಯರಾಗಿ ಗೊಣಗದೆ ಸೇವೆ ಸಲ್ಲಿಸ ಬೇಕೆಂಬುದನ್ನು ವಿಚಕ್ಷಣೆಯಿಂದ ಸೂಚಿಸಲಾಗು ತ್ತಿದೆಯೋ ಎಂಬ ಅನುಮಾನವು ಅನಿವಾರ್ಯ. "ಇರುವುದನ್ನು ಬಿಟ್ಟು ಇಲ್ಲದುದರ ವಾಂಛೆ" ಎಂದರೆ ಇರುವುದನ್ನು ಸಂತಸದಿಂದ ಸಹಿಸಬೇಕು ಎಂಬ ನಿರೀಕ್ಷೆಯೇನು ? "ಬಡವಾ, ನೀ ಮಡಗಿದ್ದಂಗಿರು" ಎಂದರೆ ಇದೇ ಇರಬಹುದೆ ? ಗೀತೆಯ ಪರಮತತ್ವ ಗಳಲ್ಲಿ ಇದಕ್ಕೆ ಪ್ರಮುಖ ಸ್ಥಾನವಿದೆ, ಏಕೆಂದರೆ ಅದು ಹತ್ತಾರು ಬಾರಿ "ಸ್ವ-ಧರ್ಮ" ಎಂದು ವರ್ಣವಿಭಜನೆ ಯನ್ನು ಘೋಷಿಸಿದೆ, ಶ್ಲಾಘಿಸಿದೆ ಮತ್ತು ಆದೇಶಿಸಿದೆ.

ಭಗವಾನನು ಹೇಳುತ್ತಾನೆ : "ನನ್ನಲ್ಲೇ ಮನಸ್ಸನ್ನು ಕೇಂದ್ರೀಕರಿಸು (ಅಥವಾ, ಒತ್ತೆ ಇಡು), ನಿನ್ನ ಬುದ್ಧಿ ಯನ್ನೆಲ್ಲಾ ನನ್ನಲ್ಲಿ ಮಡಿಪಾಗಿಡು; ನನ್ನಲ್ಲೇ ನೀನು ಆವಾಸ ಪಡೆಯುತ್ತೀಯೆ" (೧೨.೮ : ಮಯ್ಯೇವ ಮನ ಆಧಸ್ವ ಮಯಿ ಬುದ್ಧಿಂ ನಿವೇಶಯ। ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ॥). ಯಾವುದನ್ನು 'ಮುಕ್ತಿ' ಎನ್ನಲಾಗುತ್ತದೋ ಅದು ಕಾರ್ಯ ಅಥವಾ ಉದ್ದೇಶ; ಯಾವ ಕಾರಣದಿಂದ ಈ ಕಾರ್ಯವು ನೆರವೇರುತ್ತದೆಂಬುದಕ್ಕೆ ತರ್ಕಬದ್ಧವಾದ ವಿವರಣೆ ಇಲ್ಲಿಲ್ಲ. ಬುದ್ಧನಾದರೆ ದುಃಖಕ್ಕೆ ಕಾರಣವಿದೆ, ಅದನ್ನು ತಿಳಿ, ಆ ಕಾರಣವನ್ನು ಇಲ್ಲವಾಗಿಸು, ಆಗ ನಿರೀಕ್ಷಿತ ಕಾರ್ಯವಾದ ದುಃಖ ನಿವಾರಣೆ ಯಾಗುತ್ತದೆ, ಎಂಬ ಸೂತ್ರವನ್ನು ಮುಂದಿಡುತ್ತಾನೆ; ಯಾರಲ್ಲೋ ಶ್ರದ್ಧೆಯಿಟ್ಟು ಭಜಿಸುತ್ತಿರು ಎನ್ನುವುದಿಲ್ಲ. ಅವನದು "ಪ್ರತೀತ್ಯ ಸಮುತ್ಪಾದ" ಎಂಬ ಗಟ್ಟಿಯಾದ ಸೂತ್ರವಿದೆ. ನಾವು ಆಶಿಸುವ ಪರಿಣಾಮಕ್ಕೆ ಹಾದಿ ಯಾವುದೆಂದು ಅವನು ಸೂತ್ರೀಕರಿಸುತ್ತಾನೆ, ಅವನಿಗೆ "ಸ್ವ-ಧರ್ಮ" ಎಂಬ ಕುಹಕದ ಗೊಡವೆಯಿಲ್ಲ. "ನಿನ್ನನ್ನು ಸತತವಾಗಿ ಭಜಿಸುವುದರಿಂದ ಮುಕ್ತಿ ಹೇಗೆ ದೊರೆಯುತ್ತದೆ ?" ಎಂಬ ಪ್ರಶ್ನೆಯನ್ನು ಗೀತೆಯು ಎಲ್ಲೂ ಎತ್ತಿಲ್ಲ, ಎದುರಿಸಿಲ್ಲ. ಅಂದರೆ, ಕಾರ್ಯ-ಕಾರಣ ಭಾವದ ಪ್ರಸ್ತಾಪವೆಲ್ಲೂ ಬರುವುದಿಲ್ಲ. ಹಾಗೆ ಪ್ರಸ್ತಾಪ ಬರದಂತೆ ನಿಭಾಯಿಸುವುದು ಗೀತೆಯ ಮರ್ಮ ಎನ್ನಬಹುದೆ ? ಗೀತೆಗೆ ವಿವಿಧ ಆಯಾಮ ಗಳಲ್ಲಿ ವ್ಯಾಖ್ಯಾನ ನೀಡುವ ಪರಂಪರೆ ನಮ್ಮಲ್ಲಿದೆ. ಅವುಗಳ ಪಕ್ಕದಲ್ಲಿ ಈ ರೀತಿಯ ವ್ಯಾಖ್ಯಾನವನ್ನಿಟ್ಟರೆ ಹೇಗೆಂಬುದನ್ನು ಗೀತೆಯ ಅಧ್ಯಯನ ಮಾಡುವಾಗ ಆಲೋಚಿಸುವುದು ಆರೋಗ್ಯಕರವಲ್ಲವೆ ? ಸಾಮಾಜಿಕ ಮತ್ತು ಸಾಮುದಾಯಿಕ ನೆಲೆಯ ನೀತಿಶಾಸ್ತ್ರವು ಗೀತೆಯ ಪರಿಧಿಯಲ್ಲಿ ಅಷ್ಟಾಗಿ ಬಂದಿಲ್ಲ, ಆದರೆ ಅದರತ್ತ ಗೀತೆಯ ವ್ಯಾಪ್ತಿಯನ್ನು ವಿಸ್ತರಿಸುವುದು ಸ್ವಾಗತಾರ್ಹವಾಗಬೇಕು. ಶೋಚನೀಯ ಸಂಗತಿ ಎಂದರೆ ಆ ನಿಟ್ಟಿನಲ್ಲಿ ನಿರಾಶೆಯು ಕಾದಿರುತ್ತದೆಂಬುದು.

ಭಗವಾನನಲ್ಲಿ ಅಚಲವಾಗಿ ಚಿತ್ತವನ್ನು ಸ್ಥಾಪಿಸಲು ಆಗದಿದ್ದರೆ ಬೇರಾವುದಾದರೂ ಆಲಂಬನದಲ್ಲಿ ಅದನ್ನು ಸ್ಥಿರಗೊಳಿಸಿದರೂ ಆದೀತೆಂದು ಗೀತೆಯು ಹೇಳುತ್ತದೆ. ಅದು ಬಹುಮಟ್ಟಿಗೆ ಪತಂಜಲಿಯು ನಿರೂಪಿಸುವ ಯೋಗಮಾರ್ಗ (೯ : ...ಅಭ್ಯಾಸ ಯೋಗೇನ ತತೋ ಮಾಂ ಇಚ್ಛ ಆಪ್ತುಂ). ಅದು ಕೂಡ ಕ್ಲಿಷ್ಟವೆನಿಸಿದರೆ ಭಗವಾನನಿಗೆ ಪ್ರಿಯವಾಗುವ ಕರ್ಮದಲ್ಲಿ ನಿರತರಾದರೂ ಸಾಕಂತೆ (೧೦ : ಅಭ್ಯಾಸೇಽಪಿ ಅಸಮರ್ಥೋಽಸಿ ಮತ್ಕರ್ಮಪರಮೋ ಭವ। ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಂ ಅವಾಪ್ಸ್ಯಸಿ॥). ಅಂತಹ ಕರ್ಮ ಯಾವುದು ? ದಾನ-ಧರ್ಮಗಳೇ, ಸಮಾಜಸೇವೆಯೇ ? ಅದಾವುದೂ ಅಲ್ಲ. ಕೆಲವು ಮತಧರ್ಮಗಳು ಅಂತಹ ಕೆಲಸಗಳನ್ನು ನಿಯಮಿಸಿವೆ, ಆದರೆ ಗೀತೆಯು ವಿಧಿಸುವ ಕರ್ಮ ಅದಲ್ಲ. ಒಂಭತ್ತನೆಯ ಅಧ್ಯಾಯದಲ್ಲಿ ಅದನ್ನು ಹೇಳಿ ಆಗಿದೆ : "ನನ್ನ ಕೀರ್ತಿಯನ್ನು ಹಾಡು, ನನ್ನಲ್ಲಿ ದೃಢವಾಗಿ ನೆಲೆಸುವ ವ್ರತವನ್ನು ಆತುಕೊ, ಭಕ್ತಿಯಿಂದ ನನಗೆ ನಮಸ್ಕರಿಸು" (೯.೧೪ : ಸತತಂ ಕೀರ್ತಯಂತೋ ಮಾಂ...). ಅದೂ ಆಗದಿದ್ದರೆ ಭಗವಾನನು ಮುಂಚೆಯೇ ಹೇಳಿದ್ದ ಕರ್ಮಫಲ ತ್ಯಾಗವೇ ಮದ್ದು (೯.೧೧). ಎಷ್ಟು ಆಯ್ಕೆಗಳನ್ನು ನೀಡಿದರೂ "ನಿನ್ನ ಅಸ್ತಿತ್ವದ ಸನ್ನಿವೇಶವನ್ನು ಬದಲಿಸು" ಎಂಬುದಂತೂ ಇಲ್ಲ. ಏಕೆಂದರೆ, ಆಶಯವು ಸ್ವಂತಕ್ಕೆ ಮುಕ್ತಿ ಸಾಧಿಸಿಕೊಳ್ಳುವುದೇ ವಿನಾ ಸಮೂಹದ ಅಸ್ತಿತ್ವವನ್ನು ಹೆಚ್ಚು ಸಹ್ಯವಾಗಿಸುವುದಲ್ಲ. ಬದಲಾಗಿ, ವ್ಯಕ್ತಿಯು ಆಯ್ದುಕೊಳ್ಳಬಹುದಾದ ಪರ್ಯಾಯಗಳ ಶ್ರೇಣೀಕರಣವನ್ನು ಮಾಡಲಾಗಿದೆ : ಜ್ಞಾನವು ಪತಂಜಲಿಯು ನಿಯಮಿಸುವ ಇಂದ್ರಿಯನಿಗ್ರಹದ ಅಭ್ಯಾಸಕ್ಕಿಂತಲೂ ಉತ್ತಮ, ಧ್ಯಾನವು ಜ್ಞಾನಕ್ಕಿಂತಲೂ ಉತ್ತಮ, ಕರ್ಮಫಲತ್ಯಾಗವು ಧ್ಯಾನಕ್ಕಿಂತಲೂ ಒಂದು ಮೆಟ್ಟಿಲು ಮೇಲೆ, ಮತ್ತು ಶಾಂತಚಿತ್ತವು ಸರ್ವೋತ್ತಮ (೧೨.೧೨).

ಈ ಸಂದರ್ಭದಲ್ಲಿ ಗೀತೆಯು ಮತ್ತೆ ಸ್ಥಿತಪ್ರಜ್ಞನ ಲಕ್ಷಣಗಳಿಗೆ ಸಮಾನವಾದ ಕೆಲವು ಚಹರೆಗಳನ್ನು ಹೇಳಿ, ಅವನ್ನು ರೂಢಿಸಿಕೊಂಡವರು ಭಗವಾನನಿಗೆ ಅತ್ಯಂತ ಪ್ರಿಯರು ಎನ್ನುತ್ತದೆ. ಆ ಲಕ್ಷಣಗಳು ನಿಜಕ್ಕೂ ಮೌಲ್ಯಯುತವಾದವು ಮತ್ತು ಅನುಕರಣೀಯವಾದವು: ಯಾರನ್ನೂ ಮತ್ತು ಯಾವುದನ್ನೂ ದ್ವೇಷಿಸದಿರುವುದು (ಅದ್ವೇಷ್ಟಾ ಸರ್ವಭೂತಾನಾಂ), ಸ್ನೇಹ ಬೆಳೆಸಿ ಕೊಳ್ಳುವುದು, ಕಾರುಣ್ಯಮೂರ್ತಿಯಾಗಿರುವುದು, ಮಮಕಾರ-ಅಹಂಕಾರ ಇಲ್ಲದಿರುವುದು, ಸುಖ-ದುಃಖ ಗಳನ್ನು ಸಮಾನವಾಗಿ ಸ್ವೀಕರಿಸುವುದು, ಕ್ಷಮಾಗುಣ ಹೊಂದಿರುವುದು, ಇತ್ಯಾದಿ (೧೨.೧೩). ಭಾರತೀಯ ಸಂಸ್ಕೃತಿಯ ಬಗ್ಗೆ ಅತಿಶಯವಾಗಿ ಮಾತನಾಡುವ ಸಂಸ್ಥೆಗಳು ಮತ್ತು ರಾಜಕೀಯ ಪಕ್ಷಗಳು ಗೀತೆಯ ಈ ಮಾತನ್ನು ಅಂತರ್ಗತ ಮಾಡಿಕೊಂಡರೆ ನಮ್ಮ ದೇಶವು ಎಷ್ಟು ಸುಂದರವಾಗಿರಲು ಸಾಧ್ಯ ಎನಿಸದಿರದು. ಭಗವಾನನಿಗೆ ತನ್ನ ಭಕ್ತರಲ್ಲಿ ಬೇರಾವ ಗುಣಗಳು ರುಚಿಸುತ್ತವೆಂಬ ದೀರ್ಘ ಪಟ್ಟಿಯೇ ಇದೆ (೧೨.೧೪-೨೦). ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲು ಅವಕಾಶವಿದೆ : ಸದಾ ತೃಪ್ತನಾಗಿರುವುದು, ದೃಢವಾದ ನಿರ್ಧಾರಗಳನ್ನು ಹೊಂದಿರುವುದು, ಭಯ-ಉದ್ವೇಗ-ಮತ್ಸರ ಇಲ್ಲದಿರುವುದು, ಪಕ್ಷಪಾತಿ ಯಾಗದಿರುವುದು, ಶತ್ರು-ಮಿತ್ರರನ್ನು ಸಮಾನವಾಗಿ ಕಾಣುವುದು, ನಿಂದೆ ಮತ್ತು ಸ್ತುತಿಗಳಿಗೆ ವಿಮುಖ ವಾಗುವುದು, ಕುವೆಂಪು ಅವರು ಹೇಳುವ ಅರ್ಥದಲ್ಲಿ ಅನಿಕೇತನಾಗಿರುವುದು (ಮನೆಯಿಲ್ಲದವನಾಗಿರುವುದು ಎಂದರೆ ಯಾವುದಕ್ಕೂ ಸ್ಥಿರವಾಗಿ ಅಂಟಿಕೊಳ್ಳದಿರುವುದು ಅಥವಾ ಸ್ಥಾವರವಾಗದಿರುವುದು ಎಂಬ ಭಾವ. "ನಿಯತವಾದ ನಿವಾಸ ಇಲ್ಲದಿರುವುದು" ಎಂದು ಶಂಕರನ ಭಾಷ್ಯದಲ್ಲಿ ಇದನ್ನು ವಿವರಿಸಲಾಗಿದೆ : ನಿಕೇತಃ ಆಶ್ರಯಃ ನಿವಾಸೋ ನಿಯತೋ ನ ವಿದ್ಯತೇ ಯಸ್ಯ ಸಃ ಅನಿಕೇತಃ॥ ಬುದ್ಧನ ಸಂಘವನ್ನು ಸೇರಿಕೊಂಡ ಭಿಕ್ಖುಗಳ ಬಗ್ಗೆ ಹೇಳುವಾಗ ವಿನಯ ಪಿಟಕದಲ್ಲಿ ಬರುವ ಮಾತಿದು : ಅಗಾರಸ್ಮಾ ಅನಗಾರಿಯಂ ಪಬ್ಬಜ್ಜಿ; ಮನೆಯುಳ್ಳವನು ಮನೆಯಿಲ್ಲದವನಾದ; ಅಂತಹ ದೀಕ್ಷೆ ತೆಗೆದುಕೊಂಡ ಎಂದರ್ಥ), ಸ್ಥಿರಮತಿ ಯಾಗಿರುವುದು, ಇತ್ಯಾದಿ. ಇಷ್ಟೂ ಗುಣಗಳು ಒಬ್ಬ ವ್ಯಕ್ತಿಯಲ್ಲಿ ಮೇಳೈಸಿದರೆ ಆ ವ್ಯಕ್ತಿ ಹೇಗಿರಬಹುದು ಎಂದು ಕಲ್ಪಿಸಿಕೊಳ್ಳುವುದೇ ಉಲ್ಲಾಸದಾಯಕವಾದ್ದು. ಸ್ಥಿತಪ್ರಜ್ಞರಲ್ಲಿ ಸ್ಥಿತಪ್ರಜ್ಞನಾಗಿಬಿಡಬಹುದು ಆ ವ್ಯಕ್ತಿ. ಅಂತಹ ವ್ಯಕ್ತಿತ್ವದ ಪರಿಪ್ರೇಕ್ಷ್ಯವನ್ನು ನೀಡುವ ಗೀತೆಯು "ಸ್ವ-ಧರ್ಮ"ವೆಂಬ ವರ್ಣಧರ್ಮವನ್ನು ಅಷ್ಟೊಂದು ತೀವ್ರವಾಗಿ ಪ್ರತಿಪಾದಿಸುವುದು ಖಂಡಿತಕ್ಕೂ ವಿಪರ್ಯಾಸವೆನಿಸುತ್ತದೆ. ಭವಭೂತಿಯ ಮಾತೊಂದನ್ನು ಬಳಸಿ ಹೇಳಬಹುದಾದರೆ ಗೀತೆಯು ಕೆಲ ವಿಷಯಗಳಲ್ಲಿ ಕುಸುಮಹೃದಯ ಉಳ್ಳದ್ದು, ಇನ್ನು ಕೆಲವು ವಿಷಯಗಳಲ್ಲಿ (ಸ್ವ-ಧರ್ಮ, ವರ್ಣವಿಭಜನೆಯ ಸಮರ್ಥನೆ, ಧರ್ಮರಕ್ಷಕನಾಗಿ ಭಗವಂತನೇ ಅವತರಿಸುವುದು, ಇತ್ಯಾದಿ) ಕಠೋರವಾದ ಆಯುಧದಂತೆ ಕೆಲಸ ಮಾಡುತ್ತದೆ.

ಭಕ್ತಿ-ಧ್ಯಾನಗಳಿಂದ ಪರಮಾತ್ಮನನ್ನು ಸಂಪ್ರೀತ ಗೊಳಿಸಿ ಮುಕ್ತಿಯನ್ನು ಪಡೆಯುವ ವಿಚಾರವನ್ನು ಮಂಡಿಸಿದ ನಂತರ ಮುಂದಿನ, ಅಂದರೆ ಹದಿಮೂರನೆಯ, ಅಧ್ಯಾಯದಲ್ಲಿ ಬೇರೊಂದು ಅಮೂರ್ತ ತತ್ವವನ್ನು ಪ್ರತಿಪಾದಿಸಲು ಗೀತೆಯ ಕರ್ತೃವು ಮುಂದಾಗುತ್ತಾನೆ. ಲೋಕಾಯತರು ದೇಹಾತ್ಮವಾದಿಗಳು; ಅಂದರೆ, ಶರೀರವಲ್ಲದೆ ಆತ್ಮವೆಂಬ ಪರಿಕಲ್ಪನೆಯ ಹೊರೆ ಅನಗತ್ಯವೆಂಬುದು ಅವರ ಅಭಿಮತ. ಪುನರ್ಜನ್ಮ, ಮುಕ್ತಿ, ಕರ್ಮಫಲಕ್ಕೆ ಭಾಜನವಾಗುವುದು, ಮುಂತಾದ ವಿಚಾರಗಳನ್ನು ಚರ್ಚಿಸಬೇಕಾದರೆ ಅವೆಲ್ಲಾ ಯಾರಿಗೆ ಎಂಬ ಪ್ರಶ್ನೆಯು ಅಪ್ರಕೃತವಲ್ಲ. ಅದಕ್ಕೆ ಸಮಾಧಾನಕರವೆಂದು ತೋರುವ ಉತ್ತರ ಹೇಳಲು ಆತ್ಮವನ್ನು ಕಲ್ಪಿಸಿಕೊಳ್ಳುವುದುಂಟು. ಛಾಂದೋಗ್ಯ ಉಪನಿಷತ್ತಿನ ಒಂದು ಪ್ರಸಂಗದಂತೆ ಉದ್ದಾಲಕನನ್ನು ಒಮ್ಮೆ ಕೇಳಲಾಯಿತು : "ಅಯ್ಯಾ ಗೌತಮ, ನೀನು ಆತ್ಮನೆಂದು ಯಾವುದನ್ನು ಆರಾಧಿಸುತ್ತೀಯೆ ?" ಕೇಳಿದವನು ಅಶ್ವಪತಿ ಕೈಕೇಯ. ಉದ್ದಾಲಕ ಹೇಳಿದ : "ಎಲೈ ರಾಜನೆ, ಪೃಥ್ವಿಯನ್ನು

ನಾನು ಹಾಗೆ ಬಗೆಯುತ್ತೇನೆ." ಒಂದರ್ಥದಲ್ಲಿ ಇದು ಭೌತವಾದದ ನಿಲುವಿನ ವಿವರಣೆ. ಪೃಥ್ವಿಯೆಂದರೆ ಪಂಚಭೂತಗಳ ಸಂಘಾತ. ಅಮೂರ್ತವಾದ ಆತ್ಮನ್ ಎಂಬ ಪ್ರತ್ಯೇಕ ಕಲ್ಪನೆ ಅನಗತ್ಯವೆಂಬುದು ಉದ್ದಾಲಕನ ನಿಲುವೆಂದಾಯಿತು. ಗೀತೆಯು ಅದನ್ನು ಸ್ವೀಕರಿಸ ಲಾರದು, ಏಕೆಂದರೆ ಲೋಕಾಯತರು ಹೇಳುವಂತೆ ಲೋಕಾಂತರವೊಂದು ಇಲ್ಲವೆಂದು ಅದು ಬಗೆಯುವುದಿಲ್ಲ. "ಉಪನಿಷತ್ತುಗಳು ತಾಯಿಹಸುಗಳು ಮತ್ತು ಆ ಹಸುಗಳಿಂದ ಕರೆಯಲ್ಪಟ್ಟದ್ದು ಗೀತಾಮೃತ" (ಸರ್ವೋಪನಿಷದೋ ಗಾವಃ ...ದುಗ್ಧಂ ಗೀತಾಮೃತಂ ಮಹತ್) ಎಂಬ ಮಾತಿದ್ದರೂ ಗೀತೆಗೆ ಉಪನಿಷತ್ತುಗಳ ಎಲ್ಲ ಹೇಳಿಕೆಗಳೂ ಮಾನ್ಯವಲ್ಲವೆಂಬುದು ಸ್ಪಷ್ಟವಾಗಿದೆ. ಗೀತೆಯ ಪ್ರಕಾರ ಶರೀರ ಮತ್ತು ಆತ್ಮ ಪ್ರತ್ಯೇಕವೇ ಹೌದು; ಶರೀರವು ಹೊಲ, ಆತ್ಮವು ಆ ಹೊಲವನ್ನು ತಿಳಿಯುವ ಯಜಮಾನ. ಹದಿಮೂರನೆಯ ಅಧ್ಯಾಯವು ಆರಂಭವಾಗುವುದು ಆ ಹೇಳಿಕೆಯಿಂದ (೧೩.೧ : ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿ ಧೀಯತೇ। ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥) "ಕ್ಷಯಿಸಿಹೋಗುವುದು ಕ್ಷೇತ್ರ" ಎಂಬ ವಿವರಣೆಯನ್ನು ಶಂಕರಭಾಷ್ಯವು ನೀಡಿದೆ (ಕ್ಷತತ್ರಾಣಾತ್ ಕ್ಷಯಾತ್ ಕ್ಷರಣಾತ್ ...ಕ್ಷೇತ್ರಂ). ಮುಂದುವರಿದು ಭಾಷ್ಯವು ಹೇಳುತ್ತದೆ, "ದೇಹಕ್ಕೆ ಚೈತನ್ಯಧರ್ಮವಿಲ್ಲ ಮತ್ತು ಚೇತನಕ್ಕೆ ದೇಹಧರ್ಮವಿಲ್ಲ" ಎಂದು. ಒಂದು ಕಂಬವನ್ನು ಪುರುಷಾಕಾರವೆಂದು ನಾವು ತಪ್ಪಾಗಿ ತಿಳಿಯುವು ದರಿಂದ ಕಂಬವು ಮನುಷ್ಯನಾಗಿಬಿಡುವುದಿಲ್ಲ, ಮತ್ತು ನಿಜವಾದ ಪುರುಷನು ಕಂಬವೂ ಆಗುವುದಿಲ್ಲ (ಯಥಾ ಸ್ಥಾಣೌ ಪುರುಷ ನಿಶ್ಚಯೋ ನ ಚ ಏತಾವತಾ ಪುರುಷಧರ್ಮಃ ಭವತಿ ಸ್ಥಾಣುಧರ್ಮೋ ವಾ ಪುರುಷಸ್ಯ ತಥಾ ನ ಚೈತನ್ಯಧರ್ಮೋ ದೇಹಸ್ಯ ದೇಹಧರ್ಮೋ ವಾ ಚೈತನ್ಯಸ್ಯ).

ಒಟ್ಟಿನಲ್ಲಿ ದೇಹಾತ್ಮವಾದವನ್ನು ನಿರಾಕರಿಸಿ ಗೀತೆಯು ಆತ್ಮನ್ ಮತ್ತು ಆತ್ಮಜ್ಞಾನವನ್ನು ವಿವರಿಸ ಹೊರಡುತ್ತದೆ. ಅದೂ ಸಹ ಹೊಸದೇನಲ್ಲ. ಏಕೆಂದರೆ ಕೆಲವು ಉಪನಿಷತ್ತುಗಳಲ್ಲಿ ಅದರ ಜಿಜ್ಞಾಸೆ ನಡೆದಿದೆ. ಶಂಕರಭಾಷ್ಯವು ಈ ಸಂದರ್ಭದಲ್ಲಿ ದ್ವೈತದ ವಿರುದ್ಧ ಅದ್ವೈತದ ಸ್ಥಾಪನೆಗಾಗಿ ದೀರ್ಘವಾದ ಚರ್ಚೆಯನ್ನು ನಡೆಸಿದೆ. ದ್ವೈತವೆಂದರೆ ಇಲ್ಲಿ ಮಧ್ವಮತವಲ್ಲ, ಏಕೆಂದರೆ ಶಂಕರ ಮತ್ತು ಮಧ್ವರ ನಡುವೆ ನಾಲ್ಕು ಶತಮಾನಗಳ ಅಂತರವಿದೆ. ಪ್ರಕೃತಿ ಮತ್ತು ಪುರುಷ ಎಂದು ಎರಡು ತತ್ತ್ವಗಳನ್ನು ಸಾಧಿಸುವ ಸಾಂಖ್ಯದರ್ಶನವೂ ಒಂದು ದ್ವೈತ ತತ್ವವೇ ಆಗಿದೆ. ಅದನ್ನು ಶಂಕರಭಾಷ್ಯವು ನಿರಾಕರಿಸುತ್ತದೆ. ಅದರ ವಿವರಗಳಿಗೆ ನಾವೀಗ ಪ್ರವೇಶಿಸುವುದು ಅನಗತ್ಯ. ಗೀತೆಯ ಪ್ರಮುಖ ಪ್ರತಿಪಾದನೆ ಏನೆಂದರೆ ಭಗವಾನನು ಎಲ್ಲ ಕ್ಷೇತ್ರಗಳಲ್ಲೂ ಇರುವ ಏಕೈಕ ಕ್ಷೇತ್ರಜ್ಞ. ಕ್ಷೇತ್ರ ಅಥವಾ ಶರೀರ ಹಲವಿವೆ, ಆದರೆ ಅವನ್ನೆಲ್ಲಾ ಒಳಗೊಳ್ಳುವ ಕ್ಷೇತ್ರಜ್ಞ ಮಾತ್ರ ಒಬ್ಬನೇ. ಅದರ ಜ್ಞಾನವೇ ಪರಮಜ್ಞಾನ (೧೩.೨ : ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ। ಕ್ಷೇತ್ರಕ್ಷೇತ್ರಜ್ಞಯೋಃ ಜ್ಞಾನಂ




ಯತ್ ತತ್ ಜ್ಞಾನಂ ಮತಂ ಮಮ ॥). ಕ್ಷೇತ್ರ ಅಥವಾ ಶರೀರ ಹೇಗಿದೆ, ಅದರಲ್ಲುಂಟಾಗುವ ಬದಲಾವಣೆಗಳು ಯಾವುವು, ಯಾವ ಕಾರಣದಿಂದ ಎಂತಹ ಪರಿಣಾಮ ಉಂಟಾಗುತ್ತದೆ, ಕ್ಷೇತ್ರಜ್ಞನು ಯಾರು, ಎಂಬುದನ್ನೆಲ್ಲಾ ತಿಳಿಸಿಕೊಡುವುದಾಗಿ ಭಗವಾನ್ ಮುಂದುವರಿಯುತ್ತಾನೆ (೧೩.೩). ತಾನು ಹೇಳ ಹೊರಟಿರುವುದು ಈಗಾಗಲೆ ವೇದ-ವೇದಾಂತಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆಯಾದರೂ ಅದನ್ನು ಪುನರುಚ್ಚರಿಸಿ ಶಿಷ್ಯನಿಗೆ ಅರುಹಲಿದ್ದಾನೆ ಪರಮಗುರು (೧೩.೪ : ... ಬ್ರಹ್ಮಸೂತ್ರ ಪದೈಶ್ಚೈವ ಹೇತುಮದ್ಭಿಃ ವಿನಿಶ್ಚಿತೈಃ). ವೇದಗಳು ಮತ್ತು ಉಪನಿಷತ್ತುಗಳಲ್ಲದೆ 'ಬ್ರಹ್ಮಸೂತ್ರ'ಗಳಲ್ಲೂ ಅದನ್ನು ಹೇಳಲಾಗಿದೆ ಎಂಬುದನ್ನು ಶಂಕರನು "ಬ್ರಹ್ಮನ್ ಸೂಚಕ ವಾಕ್ಯಗಳಿಂದ" (ಬ್ರಹ್ಮಣಃ ಸೂಚಕಾನಿ ವಾಕ್ಯಾನಿ ಬ್ರಹ್ಮಸೂತ್ರಾಣಿ) ಎಂದು ವ್ಯಾಖ್ಯಾನಿಸಿರುವುದುಂಟು. ಅದೇ ಹೆಸರಿನ ಗ್ರಂಥವೊಂದು ಪ್ರಸಿದ್ಧವಿದ್ದು ಅದಕ್ಕೆ ಎಲ್ಲ ಆಚಾರ್ಯರೂ ಭಾಷ್ಯಗಳನ್ನು ಬರೆದಿದ್ದಾರೆ. ಆ ಗ್ರಂಥವು ಉಪನಿಷತ್ತುಗಳ ಆಯ್ದ ಭಾಗಗಳಿಗೆ ನಿಷ್ಕೃಷ್ಟವೆನ್ನಲಾದ ಅರ್ಥಗಳನ್ನು ಹೇಳಿ ಎಲ್ಲವನ್ನೂ "ಸಮನ್ವಯ"ಗೊಳಿಸುತ್ತದೆ. ಗೀತೆಯ ಕಾಲವನ್ನು ನಿರ್ಣಯ ಮಾಡುವಾಗ ಸಾಮಾನ್ಯವಾಗಿ ಬಾದರಾಯಣನ ಬ್ರಹ್ಮಸೂತ್ರಗಳೆಂಬ ಗ್ರಂಥದ ನಂತರದ್ದು ಗೀತೆ ಎಂದು ಕೆಲವರು ಹೇಳುವುದುಂಟು. ಆದರೆ ಸಂಪ್ರದಾಯ ಶರಣರು ಅದನ್ನೊಪ್ಪುವುದಿಲ್ಲ. ಅವರಲ್ಲಿ ಕೆಲವರ ಶ್ರದ್ಧೆ ಎಷ್ಟು ಅಗಾಧವೆಂದರೆ "ಗೀತೆಯು ಏಳು ಸಾವಿರ ವರ್ಷಗಳಷ್ಟು ಪುರಾತನವಾದ್ದು" ಎಂದುಬಿಡುತ್ತಾರೆ. ಸಾಮಾನ್ಯವಾಗಿ ಗೀತೆಯು ಕ್ರಿ.ಶ. ಮೂರನೆಯ ಶತಮಾನದ ಆಸುಪಾಸಿನಲ್ಲಿ (ಅಂದರೆ, ಗುಪ್ತರ ಕಾಲದ ಆರಂಭದ ವರ್ಷಗಳಲ್ಲಿ) ರಚಿತವಾದ ಗ್ರಂಥವೆಂದು ಭಾವಿಸ ಲಾಗುತ್ತದೆ. ಬೌದ್ಧ ಗ್ರಂಥಗಳು ಆ ಕಾಲಕ್ಕೆ ವಿಪುಲವಾಗಿ ಹೊರಬಂದಿದ್ದುದು ತಿಳಿದ ವಿಷಯ.

ಶರೀರವನ್ನು ಅದರ ಭಾಗಗಳಿಂದ ಗುರುತಿಸಿ ಹೇಳುವುದೆಂದರೆ ಅನಿವಾರ್ಯವಾಗಿ ಅದರ ಭೌತಿಕ ಲಕ್ಷಣವನ್ನು ನಿರೂಪಿಸಬೇಕು. ಗೀತೆಯು ಅದಕ್ಕಾಗಿ ಸಾಂಖ್ಯದರ್ಶನದ ವಿಶ್ಲೇಷಣೆಯನ್ನು ಬಹುಮಟ್ಟಿಗೆ ಯಥಾವತ್ತಾಗಿ ಆಧರಿಸಿ ನಿರೂಪಣೆ ಮಾಡುತ್ತದೆ. ಮೂಲತಃ ಸಾಂಖ್ಯವು ಲೋಕಾಯತದಂತೆ ಭೌತವಾದಿ ದರ್ಶನವೇ. ಪ್ರಕೃತಿಯ ವಿಕಾಸದಲ್ಲಿ ಭೌತವಸ್ತುಗಳು ಮತ್ತು ಬುದ್ಧಿ ಅಸ್ತಿತ್ವಕ್ಕೆ ಬರುತ್ತವೆಂಬುದು ಅದರ ಸ್ಥೂಲ ಗ್ರಹಿಕೆ, "ತಾನು ಬಹುವಾಗಿ ಮಾರ್ಪಡ ಬೇಕು" ಎಂದು ಪ್ರಕೃತಿಯು ಇಚ್ಛಿಸಿತು (ತದೈಕ್ಷತ ಬಹು ಸ್ಯಾಂ ಪ್ರಜಾಯೇಯ) ಎಂಬ ಪ್ರಸಂಗವು ಛಾಂದೋಗ್ಯ ಉಪನಿಷತ್ತಿನಲ್ಲಿ ಬರುತ್ತದೆ. ಅದು ಸಾಂಖ್ಯ ತತ್ವದ ನಿರೂಪಣೆಯೇ ಹೌದು. ಅದು ಭೌತವಾದಿ ನಿರೂಪಣೆಯಾದ್ದರಿಂದ "ಶುದ್ಧ" ವೇದಾಂತಿಗಳು ಅದನ್ನು ತಿರುಚಿ ಅದರ ಮೂಲಾರ್ಥವನ್ನು ಬದಲಿಸಿಕೊಂಡರು. ಬ್ರಹ್ಮಸೂತ್ರದಲ್ಲಿ ಮೊದಲ ಖಂಡನೆಯು ಸಾಂಖ್ಯಕ್ಕೆ ಮೀಸಲಾಗಿದೆ (೧.೧.೫ : ಈಕ್ಷತೇಃ ನ ಅಶಬ್ದಂ). ಏಕೆಂದರೆ ಸಾಂಖ್ಯವು ವೇದವೇದಾಂತಗಳಲ್ಲಿರುವ ಬೇರೆ ಭಾಗ ಗಳನ್ನು ಪರಿಗಣಿಸಿಲ್ಲವೆಂಬುದು ಅವರ ಆಪಾದನೆ. ಬಾದರಾಯಣನ ಸಮನ್ವಯದ ಪ್ರಯತ್ನವು ಉಪನಿಷತ್ತುಗಳ ಮೂಲಾರ್ಥವನ್ನು ಮೂಗಿನ ನೇರಕ್ಕೆ ಒಗ್ಗಿಸಿಕೊಳ್ಳುವುದಾಗಿಬಿಟ್ಟಿದೆ. ತಮಾಷೆಯೆಂದರೆ ನಂತರದ ಶತಮಾನಗಳಲ್ಲಿ ಸಾಂಖ್ಯದ ನಿಲುವು ಗಳನ್ನು ಸಹ ತಿರುಚಿ ಅದನ್ನು ಆಸ್ತಿಕ ದರ್ಶನವೆಂದು ಸಾರಿ ಸಂಭ್ರಮಿಸಲಾಯಿತು. ಅದನ್ನೆಲ್ಲಾ ಇಲ್ಲಿ ದೀರ್ಘವಾಗಿ ವಿವರಿಸುವ ಅಗತ್ಯವಿಲ್ಲ. ಸಾಂಖ್ಯದಲ್ಲಿ ಒಟ್ಟು ೨೪ ತತ್ತ್ವಗಳನ್ನು ಗುರುತಿಸಲಾಗಿದೆ, ಅವನ್ನೇ ಗೀತೆಯು ಪುನರುಚ್ಚರಿಸಿದೆ. ಶಂಕರನು ಹೇಳುವಂತೆ ವೈಶೇಷಿಕ ದರ್ಶನವು ಗುರುತಿಸುವ ಐದು ಆತ್ಮಗುಣ ಗಳನ್ನು ಸಹ ಗೀತೆಯು ಕ್ಷೇತ್ರದ (ಅಂದರೆ ಭೌತಪ್ರಪಂಚದ) ಧರ್ಮಗಳೆಂದು ಉಲ್ಲೇಖಿಸಿದೆ (೧೩.೬). ಆ ಗುಣಗಳು ಯಾವುವೆಂದರೆ ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ (ಶರೀರ ಮತ್ತು ಅಂಗಗಳು), ಚೇತನ ಮತ್ತು ಧೃತಿ. ಶಂಕರನ ವಾಕ್ಯ ಇದು : ಅಥ ಇದಾನೀಂ ಆತ್ಮಗುಣಾ ಇತಿ ಯಾನ್ ಆಚಕ್ಷತೇ ವೈಶೇಷಿಕಾಃ ತೇ ಅಪಿ ಕ್ಷೇತ್ರಧರ್ಮಾ ಏವ ನ ತು ಕ್ಷೇತ್ರಜ್ಞಸ್ಯ ಇತಿ ಆಹ ಭಗವಾನ್). ಒಟ್ಟಿನಲ್ಲಿ ಗೀತೆಯ "ಕ್ಷೇತ್ರ"ವು ಮೂಲ ಸಾಂಖ್ಯ ಮತ್ತು ವೈಶೇಷಿಕ ದರ್ಶನಗಳ ಕಲಸು ಮೇಲೋಗರ. ಮತಧರ್ಮದ ಗ್ರಂಥವಾದ ಗೀತೆಯಿಂದ ಇದಕ್ಕಿಂತಲೂ ಹೆಚ್ಚಿನ ತತ್ತ್ವಶಾಸ್ತ್ರ ಪ್ರತಿಪಾದನೆಯನ್ನು ನಿರೀಕ್ಷಿಸುವುದು ತಪ್ಪು. ಗೀತೆಯು ಸಾಂಖ್ಯದಿಂದ ಪಡೆದಿರುವ ತತ್ವಗಳೆಂದರೆ ಪಂಚಭೂತಗಳು (ಭೂಮಿ, ನೀರು, ತೇಜಸ್ಸು, ವಾಯು, ಆಕಾಶ), ಅಹಂಕಾರ (ನಾನು ಎಂಬುದಕ್ಕೆ ಚಿಹ್ನೆ), ಬುದ್ಧಿ, ಅವ್ಯಕ್ತ, ಪಂಚ

ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಮನಸ್ಸು ಮತ್ತು ಐದು ಇಂದ್ರಿಯ ವಿಷಯಗಳು : ಒಟ್ಟು ಇಪ್ಪತ್ತನಾಲ್ಕು.

ಭೂತಾದಿ ವಸ್ತುಗಳಿಂದ ಸಂಜ್ಞಿತವಾದ ಕ್ಷೇತ್ರವನ್ನು ತಿಳಿಯಲು ಒಂದು ಅರ್ಹತೆ ಅಥವಾ ಪಕ್ವತೆಯು ಅಗತ್ಯವಿದೆಯೆಂದು ಹೇಳುವ ಭಗವಾನನು ಐದು ಶ್ಲೋಕಗಳಲ್ಲಿ (೭–೧೧) ಅವನ್ನು ಪಟ್ಟಿ ಮಾಡಿದ್ದಾನೆ. ತಗ್ಗಿಬಗ್ಗಿ ನಡೆಯುವುದು, ದೊಡ್ಡಸ್ತಿಕೆ ಮೆರೆಯದಿರುವುದು, ಅಹಿಂಸೆ, ಶಾಂತಚಿತ್ತತೆ, ಸ್ಥೈರ್ಯ, ವೈರಾಗ್ಯ, ಮುಂತಾದವು ಕ್ಷೇತ್ರದ ಕ್ಲುಪ್ತವಾದ ಜ್ಞಾನ ಪಡೆಯಲು ಅರ್ಹತೆ ನೀಡುತ್ತವೆ. ಸ್ಥಿತಪ್ರಜ್ಞ, ಭಕ್ತ, ಇಬ್ಬರೂ ಹೊಂದಿದ್ದಾರೆನ್ನಲಾದ ಗುಣಗಳನ್ನೇ ಬೇರೊಂದು ರೂಪದಲ್ಲಿ ಇಲ್ಲಿ ಹೇಳಲಾಗಿದೆ. ಹೇಳಿದ್ದನ್ನೇ ಮತ್ತೆ ಬೇರೆಯೆಂಬಂತೆ ಅನ್ಯ ಶಬ್ದಗಳಲ್ಲಿ ಹೇಳುವುದು ಗೀತೆಯ ಸ್ವಭಾವ. (ಅದನ್ನನುಕರಿಸಿ ಶಾಲಾ–ಕಾಲೇಜುಗಳಲ್ಲಿ ಅಧ್ಯಾಪಕರು ತಮ್ಮ ಪಾಂಡಿತ್ಯ ಪ್ರದರ್ಶನ ಮಾಡುತ್ತಾರೆಂದು ತೋರುತ್ತದೆ). ತಿಳಿಯಲು ಅರ್ಹತೆ ಪಡೆಯಬೇಕು, ಅದು ಕೆಲವು ಗುಣಗಳಿಂದಾಗಿ ದಕ್ಕುತ್ತದೆ, ಸರಿ; ಆದರೆ ಲಭಿಸುವ ಜ್ಞಾನ ಅಥವಾ ತಿಳಿವಳಿಕೆ (ಜ್ಞೇಯ) ಎಂಥದು ? ಆ ತಿಳಿವಳಿಕೆ ಪಡೆದರೆ ಅಮೃತತ್ವದ ಸಿದ್ಧಿಯಾದಂತೆಯೇ ಸರಿ (೧೩.೧೨ : ...ಯತ್ ಜ್ಞಾತ್ವಾ ಅಮೃತಮಶ್ನುತೇ). ಬ್ರಹ್ಮಜ್ಞಾನದ ಫಲ ಅದು. ಏನಿದು ಬ್ರಹ್ಮನ್ ? ಅದು 'ಸತ್' ಅಲ್ಲ, 'ಅಸತ್' ಸಹ ಅಲ್ಲ ! (೧೩.೧೨ : ಅನಾದಿಮತ್ಪರಂ ಬ್ರಹ್ಮ ನ ಸತ್ ತತ್ ನ ಅಸತ್ ಉಚ್ಯತೇ). ಜ್ಞೇಯವನ್ನು ವಿಶದೀಕರಿಸುವುದಾಗಿ ಹೇಳಿ "ಬ್ರಹ್ಮನ್ ಸತ್ ಅಲ್ಲ, ಅಸತ್ ಸಹ ಅಲ್ಲ" ಎಂದು ಹೇಳಿಬಿಟ್ಟರೆ ಇದೆಂತಹ ತಿಳಿವಳಿಕೆ ನೀಡುವ ಪರಿ ಎನ್ನಬಹುದಲ್ಲವೇ ಎಂಬ ಶಂಕೆಯು ಶಂಕರರನ್ನೂ ಬಾಧಿಸಿದೆ (ನನು ಮಹತಾ ಪರಿಕರಬಂಧೇನ ಕಂಠರವೇಣ ಉದ್‌ಘುಷ್ಯ ಜ್ಞೇಯಂ ಪ್ರವಕ್ಷ್ಯಾಮಿ ಇತಿ ಅನನುರೂಪಂ ಉಕ್ತಂ). ಅವರೇ ಅದಕ್ಕೆ ಸಮಾಧಾನ ನೀಡಿ "ಹಾಗೇನೂ ಇಲ್ಲ, ನೇತಿ ನೇತಿ ಎಂಬುದು ಉಪನಿಷತ್ತಿನ ಮಾತೇ ಆಗಿದೆ" ಎಂದು ತೃಪ್ತರಾಗುತ್ತಾರೆ.

ಹಾಗಿದ್ದರೆ 'ಬ್ರಹ್ಮನ್' ಎಂಬುದರ ವ್ಯಾಪ್ತಿ ಅಷ್ಟು ಅಗಾಧವೆ ? ಋಗ್ವೇದದ ಹತ್ತನೆಯ ಮಂಡಲದ ಪುರುಷಸೂಕ್ತದಲ್ಲಿ ಜಗತ್ತಿನ ಆದಿಗೆ ಕಾರಣನಾದ 'ಪುರುಷ'ನಿಗೆ ಸಾವಿರ ತಲೆಗಳು, ಸಾವಿರ ಕಣ್ಣುಗಳು ಮತ್ತು ಸಾವಿರ ಪಾದಗಳು; ಜಗತ್ತನ್ನು ತಿಳಿಯುವ ಕ್ಷೇತ್ರಜ್ಞನಿಗೆ ಎಲ್ಲೆಲ್ಲೂ ಕೈ–ಕಾಲುಗಳು, ಎಲ್ಲೆಲ್ಲೂ ಕಣ್ಣು–ತಲೆ–ಬಾಯಿ–ಕಿವಿಗಳು. ಅವನು ಎಲ್ಲವನ್ನೂ ಆವರಿಸಿರುವ ಸರ್ವಾಂತರ್ಯಾಮಿ (೧೩.೧೩). ಎಲ್ಲಕ್ಕೂ ಕಾರಣಕರ್ತನಾದ ಅವನು (ಅಥವಾ ಅದು) 'ಬ್ರಹ್ಮನ್'. ಎಲ್ಲಕ್ಕೂ ಕಾರಣ ಹೌದು, ಆದರೆ ತನ್ನಲ್ಲಿ ಯಾವ ಬದಲಾವಣೆಯನ್ನೂ ಕಾಣುವುದಿಲ್ಲ, ಅಂದರೆ ಹಿಗ್ಗುವಿಕೆ–ಕುಗ್ಗುವಿಕೆಗಳಿಲ್ಲ (೧೩.೧೩ : ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋ ಮುಖಂ। ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥). ಇಂದ್ರಿಯಗಳಿಲ್ಲದೆಯೂ ಸರ್ವೇಂದ್ರಿಯ ಕ್ರಿಯೆಗಳನ್ನು ಅದು ಸಾಧಿಸುತ್ತದೆ, ಗುಣಗಳಿಲ್ಲದೆಯೂ ಎಲ್ಲ ಗುಣಗಳ ಆಗರ ಅದು, ಯಾವುದರ ಆಲಂಬನೆಯೂ ಇಲ್ಲದೆ ಎಲ್ಲದಕ್ಕೂ ಆಲಂಬನ ಅದು (೧೪). ಕಠೋಪನಿಷತ್ತಿನಲ್ಲಿ ಅದರ ಕ್ರಿಯಾವ್ಯಾಪ್ತಿಯನ್ನು ಹೇಳುವಾಗ "ಕುಳಿತು ದೂರ ಸಾಗುತ್ತದೆ, ಮಲಗಿ ಸರ್ವತ್ರ ವ್ಯಾಪಿಸುತ್ತದೆ" (ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ) ಎನ್ನಲಾಗಿದೆ; ಗೀತೆಯು ಅದನ್ನೇ "ಅದು ಅಚರ ಮತ್ತು ಚರ" ಎನ್ನುತ್ತದೆ (೧೫). ಅದು ವಿಭಜನೆಗೆ ವಸ್ತುವಲ್ಲ, ಆದರೆ ಎಲ್ಲೆಲ್ಲೂ ವಿಭಜಿತವಾದಂತೆ ತೋರುತ್ತದೆ (೧೬ : ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ). ಬೆಳಕುಗಳಲ್ಲಿ ಅತಿ ಪ್ರಖರ ಅದು ಮತ್ತು ಕತ್ತಲೆಯ ಅತಿಗಾಢತ್ವ ಅದರಲ್ಲಿದೆ (೧೭ : ಜ್ಯೋತಿಷಾಮಪಿ ತಜ್ಜ್ಯೋತಿಃ ತಮಸಃ ಪರಮುಚ್ಯತೇ). ಎಲ್ಲಕ್ಕಿಂತ ಮಿಗಿಲಾಗಿ ಅದು ಜ್ಞಾನ, ಜ್ಞೇಯ ಮತ್ತು ಜ್ಞಾನಗಮ್ಯ (ಅಂದರೆ ಜ್ಞಾನದಿಂದ ಪಡೆಯಬಹುದಾದ್ದು).

ಭಗವಾನನ ಈ ವೈರುಧ್ಯ–ಅವೈರುಧ್ಯಗಳನ್ನು ತಿಳಿದವನು ಪರಮಾತ್ಮಭಾವವನ್ನು ಅಥವಾ ಮೋಕ್ಷವನ್ನು ಹೊಂದುತ್ತಾನೆ (೧೩.೧೮ : ...ಮದ್ಭಕ್ತಃ ಏತದ್ವಿಜ್ಞಾಯ ಮದ್ಭಾವಾಯ ಉಪಪದ್ಯತೇ). ಇಲ್ಲಿ ಮತ್ತೆ ಕಾರ್ಯ–ಕಾರಣ ಭಾವದ ಅಭಾವವಿದೆ : ಏನನ್ನೋ ತಿಳಿಯುವುದರಿಂದ ನಾವು ಅದಾಗುತ್ತೇವೆಯೇ ಮತ್ತು ಹೇಗೆ ಅದಾಗುತ್ತೇವೆ ? ನಿಗೂಢ ಜ್ಞಾನದ ಬೋಧೆಯಾಗುತ್ತಿರುವಾಗ ಅಂತಹ ಪ್ರಶ್ನೆಗಳನ್ನು ಎತ್ತಬಾರದೇನೊ !

# ರೈತ ಹುಡುಗಿಯ ಹಾಡು

**ಬ**ನ್ನಿ, ಕಾಗೆಗಳೇ ಬನ್ನಿ,
ಇಲ್ಲೇ ಇದೆ ಅಪರಂಜಿ
ಗುಂಡು ಭಂಡಾರ
ಹೀರಿಬಿಡಿ ಚಿನ್ನದರಸವ
ಹೊಟ್ಟೆ ಬಿರಿಯುವಂತೆ
ಒಳಗಿರುವ ಬೆಳ್ಳಿಗಟ್ಟಿಗಳೇ
ಸಾಕು ನನಗೆ.

ಮನೆಯ ಮುಂದೆ, ಹೊಲದಬದಿ
ಎಲ್ಲಿ ನೋಡಿದರಲ್ಲಿ
ವಸಂತೋತ್ಸವ
ನಡೆಸಿವೆ ಬೇವಿನಮರಗಳು
ಪಾತಾಳಕ್ಕಿಳಿದು ಗಣಿಗಾರಿಕೆ
ನಡೆಸಬೇಕಿಲ್ಲ, ಭೂತಾಯ
ಬಗೆದು ನೋಯಿಸಬೇಕಿಲ್ಲ.

ಬೇವಿನಮರದ ತಂಪು
ನೆಳಲಲಿ ಕೂತು ನಿಧಾನವಾಗಿ
ರಸ ಹೀರಿ
ಕೊಟ್ಟುಬಿಡಿ ಬೀಜಗಳನ್ನಷ್ಟೆ
ನನಗೆ, ಆರಿಸುತ್ತೇನೆ
ತೋರು ಬೆರಳುಗಳಿಂದ
ಭೂಮಿ ನೋಯದ ಹಾಗೆ.

ಮುತ್ತು ಮಾಣಿಕ್ಯವ
ಸೇರಿನಲಿ ಅಳೆದು ಮಾರುವರ
ನಾನು ಕಂಡಿಲ್ಲ
ನೀವು ಉಗುಳಿಬಿಟ್ಟ
ಬೀಜಗಳೇ ನನ್ನ ಮಾಣಿಕ್ಯ
ಸೇರು, ಪಂಛೇರುಗಳಲ್ಲಿ
ಅಳೆದು ಮಾರುತ್ತೇನೆ.

ಬನ್ನಿ, ಕಾಗೆಗಳೇ ಬನ್ನಿ,
ಆತ್ಮಗಳ ಆವಾಹಿಸಿಕೊಂಡು
ತುತ್ತುತಿಂದು
ನಾಕಕ್ಕೆ ಕಳಿಸುವ ಮಧ್ಯವರ್ತಿಗಳೇ
ಬದುಕಿರುವವರ ತುತ್ತಿನ ಚೀಲ
ತುಂಬಿಸಬನ್ನಿ
ಬನ್ನಿ, ಕಾಗೆಗಳೇ ಬನ್ನಿ.



**ಎಸ್. ಎನ್. ಸುನಂದ**
ನಂ. ೮೩೨, 'ಬೆಳಗು', ೨೪ನೇ ಅಡ್ಡರಸ್ತೆ, ೫೨ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು – ೫೬೦ ೧೧೧

ಗೀತೆಯಂತೂ ಅಂತಹ ಪ್ರಶ್ನೆಯನ್ನು ಸುತರಾಂ ಎತ್ತುವುದಿಲ್ಲ.

೧೩ನೆಯ ಅಧ್ಯಾಯದ ಇನ್ನುಳಿದ ಭಾಗವು (೧೯–೩೪) ಪ್ರಕೃತಿ ಮತ್ತು ಪುರುಷರ ಸಂಬಂಧ ಮತ್ತು ಪ್ರತ್ಯೇಕತೆಯನ್ನು ವಿಶದಪಡಿಸುತ್ತದೆ. ಸಾಂಖ್ಯದರ್ಶನದ ಪುರುಷನು "ಕೇವಲಿ" (ಅಂದರೆ, ನಿಷ್ಕ್ರಿಯನಾದವನು), ಅಥವಾ ಅನಾಸಕ್ತ. (ತರಗತಿಗಳಲ್ಲಿ ಪಾಠ ಕೇಳದೆ, ಯಾವ ಪ್ರತಿಕ್ರಿಯೆಯೂ ಇಲ್ಲದ ಮುಖಭಾವ ಹೊಂದಿರುತ್ತಿದ್ದ ನಮ್ಮನ್ನು ಅಧ್ಯಾಪಕರು "ಏನು, ಸಾಂಖ್ಯಪುರುಷರಂತೆ ಕುಳಿತಿರುವಿರಿ" ಎಂದು ಛೇಡಿಸುತ್ತಿದ್ದರು). ಪ್ರಕೃತಿಯು ನಾಟ್ಯರಾಣಿ ಮತ್ತು ಅವಳಿಂದ ಪುರುಷನಲ್ಲಿ ಚಟುವಟಿಕೆ ಮೂಡುತ್ತದೆ; ಅವನು ನಿರ್ಗುಣಿ, ಆದರೆ ಪ್ರಕೃತಿಯ ಗುಣಗಳು ಅವನಲ್ಲಿ ಸಂಮಿಳಿತಗೊಳ್ಳುತ್ತವೆ. ಮೂಲಭೂತವಾಗಿ ಪ್ರಕೃತಿ–ಪುರುಷಗಳೆರಡೂ ಅನಾದಿ ಅಥವಾ ನಿತ್ಯ; ಪ್ರಕೃತಿಯು ತಾನಾಗಿಯೇ ವಿಕಾಸ ಹೊಂದುತ್ತದೆ, ಅದಕ್ಕೆ ಹೊರಗಿನ ಯಾವ ಕಾರಣದ ಅಗತ್ಯವೂ ಇಲ್ಲ. ಅದರ ಅಂತರ್ಗತ ಸ್ವಭಾವವೇ ಅದರ ವಿಕಸನಕ್ಕೆ ಕಾರಣ. ಇದು ಸಾಂಖ್ಯ ದರ್ಶನದ ಮೂಲಸತ್ವ. ಆ ಕಾರಣದಿಂದಾಗಿಯೇ ಅದು ಭೌತವಾದೀ ದರ್ಶನ. ಗೀತೆಯು ಬಹುಮಟ್ಟಿಗೆ ಅದನ್ನು ಉಳಿಸಿಕೊಂಡಿದೆ : ಪ್ರಕೃತಿ ಮತ್ತು ಪುರುಷ ಅನಾದಿ; ಬದಲಾವಣೆ ಮತ್ತು ಗುಣಗಳು ಪ್ರಕೃತಿಯಿಂದ (ಅಥವಾ ಪ್ರಕೃತಿಯ ಸ್ವ–ಭಾವದಿಂದ) ಮೂಡುತ್ತವೆ (೧೩.೧೯ : ಪ್ರಕೃತಿಂ ಪುರುಷಂ ಚೈವ ವಿದ್ಧಿ ಅನಾದೀ ಉಭಾವಪಿ। ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ॥). "ವಿಕಾಸವು ಪ್ರಕೃತಿಯಿಂದಾಗಿ" ಎಂದರೆ ಎಲ್ಲ ಪರಿಣಾಮಗಳಿಗೂ ಅದೇ ಸ್ವತಃ ಕಾರಣ ಎಂದರ್ಥ; ಪುರುಷನೇನಿದ್ದರೂ ಸುಖ–ದುಃಖಗಳನ್ನು ಅನುಭವಿಸುವವನು (೨೦ : ಕಾರ್ಯ–ಕಾರಣ ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ। ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥). ಗೀತೆಗೂ ಮೂಲಸಾಂಖ್ಯಕ್ಕೂ ವ್ಯತ್ಯಾಸವಿರುವುದು ಇಲ್ಲೇ : ಸಾಂಖ್ಯದ ಪುರುಷನ ಗುಣ–ಕ್ರಿಯೆಗಳು ಪ್ರಕೃತಿಯಿಂದ ಉಂಟಾಗಿರುವಂಥವು, ಆದರೆ ಗೀತೆಯ ಪುರುಷನು ಸ್ವತಃ ಆ ಲಕ್ಷಣಗಳನ್ನು ಹೊಂದಿದ್ದಾನೆ. ಒಂದರ್ಥದಲ್ಲಿ ಇವೆರಡೂ ಭೌತವಾದ ಮತ್ತು ಭಾವನಾವಾದದ ಮೂಲಸೂತ್ರಗಳೆನ್ನಬಹುದು. ಶಂಕರನು ಈ ಶ್ಲೋಕದ ಮೇಲಿನ ಭಾಷ್ಯದಲ್ಲಿ ನೇರವಾಗಿ ಈಶ್ವರನನ್ನು ಎಳೆದುತಂದಿರುವುದನ್ನು ಗಮನಿಸಬಹುದು. ಜಗದುತ್ಪತ್ತಿ ಸ್ಥಿತಿ ಪ್ರಲಯಗಳಿಗೆ ಈಶ್ವರನು ಕಾರಣವೆಂದು ಅಲ್ಲಿ ಹೇಳಲಾಗಿದೆ : ಯಾಭ್ಯಾಂ ಪ್ರಕೃತಿಭ್ಯಾಂ ಈಶ್ವರೋ ಜಗದುತ್ಪತ್ತಿ ಸ್ಥಿತಿಪ್ರಲಯಹೇತುಃ ತೇ ದ್ವೇ ಅನಾದೀ ಸತ್ಯೌ ಸಂಸಾರಸ್ಯ ಕಾರಣಂ. ಸಾಂಖ್ಯದಿಂದ ಆರಂಭವಾದ ವಿವರಣೆಯು ಗೀತೆಯಲ್ಲಿ ಸಾಂಖ್ಯವನ್ನು ಬಿಟ್ಟುಕೊಟ್ಟು ಬಹುದೂರ ಸಾಗಿದೆ. ಬ್ರಹ್ಮಸೂತ್ರವು "ಸಾಂಖ್ಯವು ಶ್ರುತಿಸಮ್ಮತವಲ್ಲ"ವೆಂದು ಹೇಳಿರುವುದನ್ನು ಗೀತೆ, ಶಂಕರಭಾಷ್ಯ, ಎಲ್ಲಾ ಪುನರುಚ್ಚರಿಸಿವೆ.

ಪ್ರಕೃತಿಯೊಡನ ಸಂಸರ್ಗದಿಂದಾಗಿ ಪುರುಷನು ಪ್ರಕೃತಿಯ ಗುಣಗಳನ್ನು ಮೈಗೂಡಿಸಿಕೊಳ್ಳುತ್ತಾನೆ; ಅದರಿಂದಾಗಿ "ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ" ಜನ್ಮ ತಾಳುತ್ತಾನಂತೆ ! (೧೩.೨೧ : ...ಸದಸದ್ಯೋನಿ ಜನ್ಮಸು). ಆಯಾ ವರ್ಣದವರ ಸ್ಥಾನ ಮತ್ತು ಕರ್ತವ್ಯಗಳನ್ನು ನಿರ್ದಿಷ್ಟವಾಗಿ ನಿಗದಿಗೊಳಿಸುವ ಗೀತೆಗೆ ಈ "ಸತ್ ಅಸತ್ ಯೋನಿ ಜನ್ಮವು" ಬಹಳ ಪ್ರಮುಖವಾದ್ದು ಮತ್ತು ಉಪಯುಕ್ತವಾದ್ದು. ಮುಂದಿನ ಒಂದು ಅಧ್ಯಾಯದಲ್ಲಿ ನಾವು ಕಾಣುವಂತೆ ಸತ್ವ, ರಜಸ್ ಮತ್ತು ತಮೋಗುಣಗಳು ಸಹ ನಿರ್ದಿಷ್ಟ ವರ್ಣಗಳವರನ್ನು ಆಯ್ದುಕೊಳ್ಳುತ್ತವೆ; ಆದ್ದರಿಂದ ವಿವಿಧ ವರ್ಣಗಳವರು ಸಹಜವಾಗಿಯೇ ನಿರ್ದಿಷ್ಟ ಸ್ವಭಾವಗಳನ್ನು ಹೊಂದಿರುತ್ತಾರೆ. ಇಷ್ಟು ಅವೈಜ್ಞಾನಿಕವಾದ ಅನಿಸಿಕೆಯನ್ನು ಗೀತೆಯು ಅಧಿಕಾರವಾಣಿಯಿಂದ ಮಂಡಿಸುತ್ತದೆಂದರೆ ಅದರ ಉದ್ದೇಶವು ನಮಗೆ ಸ್ಪಷ್ಟವಾಗಬೇಕಲ್ಲವೆ ? ಶ್ರೇಣೀಕೃತ ಸಮಾಜದ ನಿಚ್ಚಳ ಸಮರ್ಥನೆ ಇದು. ಪ್ರಕೃತಿ–ಪುರುಷ ಸಂಬಂಧ, ಅವುಗಳ ಗುಣ, ಇತ್ಯಾದಿಗಳನ್ನು ಕ್ಲುಪ್ತವಾಗಿ ತಿಳಿದವರು ಪುನರ್ಜನ್ಮದಿಂದ ಮುಕ್ತರಾಗುತ್ತಾರೆ (೧೩.೨೩ : ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ। ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥). ಕ್ಲುಪ್ತವಾಗಿ ತಿಳಿಯುವುದೆಂದರೆ ಪುರುಷನು ದೇಹವೊಂದರಲ್ಲಿ ಸೇರಿಕೊಂಡಿದ್ದರೂ ಮೂಲತಃ ಅವನು ಪರಮಾತ್ಮನೇ ಆಗಿದ್ದಾನೆಂದು ತಿಳಿಯುವುದು (೧೩.೨೨). ಸಾಂಖ್ಯದರ್ಶನದ "ವಿವೇಕಜ ಜ್ಞಾನ" ಇದು. ಪ್ರಕೃತಿಯಿಂದ ತಾನು ಭಿನ್ನ, ಅದನ್ನು ತಾನು ಅಂಟಿಸಿಕೊಳ್ಳಬಾರದೆಂಬುದು ವಿವೇಕ. ಅದು ದೊರೆತಾಗ ಪುರುಷನು ನಿರ್ಲಿಪ್ತ; ಆದ್ದರಿಂದ ಗುಣ, ಇತ್ಯಾದಿಗಳ ಬಾಧೆ ಅವನಿಗಿಲ್ಲ. ಪುರುಷನು ಪಡೆಯುವ ಜ್ಞಾನವು ಅವನ ಕ್ರಿಯಾವಿಧಾನ, ಚಿಂತನೆ ಮತ್ತು ಅಸ್ತಿತ್ವದ ಸ್ವರೂಪವನ್ನು ಬದಲಾಯಿಸುತ್ತದೆ ಎಂಬುದು ಇಲ್ಲಿಯ ಇಂಗಿತ. ಜ್ಞಾನವು ಒಂದು ಉನ್ನತ ಮಾದರಿಯ ಜೀವನಕ್ರಿಯೆಗೆ ಇಂಬುಕೊಡದಿದ್ದರೆ ಆ ಜ್ಞಾನವು ವ್ಯರ್ಥವೆಂಬುದನ್ನು ಅವೇ ಮಾತುಗಳಲ್ಲಿ ಹೇಳದಿದ್ದರೂ ಗೀತೆಯ ಆಶಯ ಅದೇ ಆಗಿದೆ. ಸ್ಥಿತಪ್ರಜ್ಞನಂಥವರು ಅದಕ್ಕೆ ದೃಷ್ಟಾಂತವನ್ನು ಒದಗಿಸುತ್ತಾರೆ. ಸಾಂಖ್ಯದ ಮಾರ್ಗವೊಂದೇ ಇಂತಹ ಔನ್ನತ್ಯಕ್ಕೆ ಹಾದಿಯಲ್ಲ. ಧ್ಯಾನ, ಕರ್ಮಯೋಗಗಳೂ ಸಹ ಅದಕ್ಕೆ ಸಾಧನಗಳು (೧೩.೨೪). ತಾವೇ ಸ್ವಂತವಾಗಿ ಜ್ಞಾನವನ್ನು ಪಡೆಯಲಾಗದವರು ಇತರರಿಂದ ಅದನ್ನು ಪಡೆದಾದರೂ ಮುಕ್ತಿಗೆ ಅರ್ಹರಾಗಲು ಸಾಧ್ಯವೆನ್ನುತ್ತದೆ ಗೀತೆ (೧೩.೨೫). ಒಟ್ಟಿನಲ್ಲಿ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಗದಿಂದ ಸ್ಥಾವರ–ಜಂಗಮಗಳೆಲ್ಲಾ ಅಸ್ತಿತ್ವಕ್ಕೆ ಬರುತ್ತವೆ; ವಿನಾಶವಾಗುವಂತಹ ಗುಣಹೊಂದಿರುವ ವಸ್ತುಗಳಲ್ಲೂ ಅವಿನಾಶಿಯಾದ ಪರಮೇಶ್ವರನನ್ನು ಕಾಣುವವರು ಸಮ್ಯಕ್ ಜ್ಞಾನವನ್ನು ಪಡೆಯುವಂಥವರಾಗಬಲ್ಲರು (೧೩.೨೭). ಅವರಿಗೆ ಅತ್ಯುನ್ನತ ಶ್ರೇಯೋಮಾರ್ಗವು ನಿಶ್ಚಿತ (೨೮).

ಅರ್ಜುನನು ಇಲ್ಲೊಂದು ಅನುಮಾನ ವ್ಯಕ್ತಪಡಿಸಲು ಸಾಧ್ಯ. ಅವನದನ್ನು ಮಾಡದಿದ್ದರೂ ಗೀತಾಕರ್ತೃವು ಅದನ್ನು ನಿರೀಕ್ಷಿಸಿ ಒಂದು ಉತ್ತರ ಕೊಡುತ್ತಾನೆ. ವ್ಯಕ್ತಿಗಳು ಪ್ರತ್ಯೇಕ, ಅವರೆಲ್ಲಾ ಅವರವರದೇ ಶರೀರಗಳನ್ನು ಹೊಂದಿದ್ದಾರೆ, ಅವರವರ ಕರ್ಮಫಲಗಳು ಭಿನ್ನ. ಹಾಗಿದ್ದಾಗ ಎಲ್ಲರಲ್ಲೂ ಇರುವುದು ಒಂದೇ ಈಶ್ವರನೆಂಬುದು ಮಿಥ್ಯೆಯಲ್ಲವೆ ? ಅದಕ್ಕೆ ಗೀತೆಯು ನೀಡುವ ಸಮಾಧಾನ ಇದು : ಎಲ್ಲ ಕ್ರಿಯೆಗಳಿಗೂ ಪ್ರಕೃತಿಯು ಕಾರಣವೇ ವಿನಾ ಈಶ್ವರನಲ್ಲ. ಗುಣಗಳು ಪ್ರಕೃತಿಯವು, ಆದ್ದರಿಂದ ಭಿನ್ನತೆಯು ಪ್ರಕೃತಿಮೂಲ; ಪುರುಷ ಅಥವಾ ಈಶ್ವರ ಮೂಲವಲ್ಲ. ಈಶ್ವರನು ಕರ್ತೃವಲ್ಲ, ಅವನು ಅಕರ್ತಾ; ಇದೇ ಸರಿಯಾದ ತಿಳಿವಳಿಕೆ (೧೩.೨೯ : ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ। ಯಃ ಪಶ್ಯತಿ ತಥಾತ್ಮಾನಂ ಅಕರ್ತಾರಂ ಸ ಪಶ್ಯತಿ ॥). ಪ್ರಕೃತಿಯ ಸಂಸರ್ಗವಿಲ್ಲದ ಪುರುಷನಲ್ಲಿ ಗುಣಗಳೇನೂ ಇಲ್ಲ, ಆದ್ದರಿಂದ ಕ್ರಿಯೆಯೂ ಇಲ್ಲ. ದೋಷವೆಲ್ಲಾ ಪ್ರಕೃತಿಯದೇ ! ಕ್ಷೇತ್ರಗಳು ಭಿನ್ನ, ಆದರೆ ಕ್ಷೇತ್ರಜ್ಞನು ಒಬ್ಬನೇ ಎಂದಾಯಿತು; ಏಕೆಂದರೆ ಎಲ್ಲವುಗಳ ಮೂಲವೂ ಅದೊಂದೇ (ಅಥವಾ ಅವನೊಬ್ಬನೇ). ಆದಿರಹಿತನೂ ಗುಣರಹಿತನೂ ಆದ ಬ್ರಹ್ಮನ್ (ಕ್ಷೇತ್ರಜ್ಞ) ಯಾವುದೇ ಶರೀರವನ್ನು ಹೊಕ್ಕರೂ ಕರ್ತೃವಾಗುವುದಿಲ್ಲ, ಪರಿಣಾಮವುಳ್ಳ ವಸ್ತುವಾಗುವುದಿಲ್ಲ. ಎರಡನೆಯ ಅಧ್ಯಾಯದಲ್ಲೇ ಗೀತೆಯಕರ್ತೃವು ಹೇಳಿದ್ದನಲ್ಲ, ಆತ್ಮವು ಹುಟ್ಟುವುದಿಲ್ಲ, ಸಾಯುವುದಿಲ್ಲ, ಎಂದು (೨.೨೦ : ನ ಜಾಯತೇ ಮ್ರಿಯತೇ ವಾ ಕದಾಚಿತ್). ಒಬ್ಬನೇ ಸೂರ್ಯನು ಇಡೀ ಲೋಕಕ್ಕೆ ಪ್ರಕಾಶ ನೀಡುವುದಕ್ಕೆ ಸಮಾನಾದ್ದು ಒಂದೇ ಬ್ರಹ್ಮನ್ (ಕ್ಷೇತ್ರಜ್ಞ) ಇಡೀ ಕ್ಷೇತ್ರವನ್ನು (ಶರೀರಾದಿ ವಸ್ತುಗಳನ್ನು) ವ್ಯಾಪಿಸಿರುವುದು (೧೩.೩೩ : ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ। ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥). ಸಂಕ್ಷೇಪವಾಗಿ ಹೇಳುವುದಾದರೆ, ಕ್ಷೇತ್ರ ಮತ್ತು ಕ್ಷೇತ್ರಜ್ಞ, ಇವುಗಳ ನಡುವಿನ ಅಂತರವನ್ನು ಕುರಿತ ಜ್ಞಾನವು ಅತಿಮಹತ್ವದ್ದು (೧೩.೩೪).

ಈ ಅಧ್ಯಾಯದಲ್ಲಿ ಸಾಂಖ್ಯ ಮತ್ತು ವೇದಾಂತಗಳನ್ನು ಗೀತೆಯ ಕರ್ತೃವು ಮುಕ್ತವಾಗಿ ಬೆರೆಸಿದ್ದಾನೆ ಹಾಗೂ ಸಾಂಖ್ಯದರ್ಶನದ ಭೌತವಾದೀ ಪ್ರಕ್ರಿಯೆಯನ್ನು ಯಾವ ಸಂಕೋಚವೂ ಇಲ್ಲದೆ ತಿರುಚಿಹಾಕಿದ್ದಾನೆ.

***(ಮುಂದುವರಿಯುತ್ತದೆ)***

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧
೪ನೇ ಕ್ರಾಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೮೫

## ನಿರಂತರ

ಬಾಯಿ ಮುಚ್ಚಿಸಿದೆ
ಮಾತು–ಸಾಕೆಂದು
ತೆರೆದುಕೊಂಡೇ ಇದೆ
ಮನ – ಇನ್ನೂ ಮುಗಿಯದೆಂದು

**ಪ. ಉಮೇಶ ಕಾರಂತ**



**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ



**ಶ್ರೀ ಹೆಚ್. ಆಂಜನೇಯ**
ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ



**ಶ್ರೀ ಬಿ. ಬಾಲರಾಜ್** ಬಿ.ಇ.
ಅಧ್ಯಕ್ಷರು, ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ, ಬೆಂಗಳೂರು

# ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

## ನಿಗಮವು 2016ನೇ ಸಾಲಿನಲ್ಲಿ ಸಾಧಿಸಿರುವ ಪ್ರಗತಿ ವಿವರ

- 2016–17ನೇ ಸಾಲಿನಲ್ಲಿ ಸರ್ಕಾರವು ನಿಗಮಕ್ಕೆ ರೂ. 90.00 ಕೋಟಿಗಳ ಅನುದಾನ ಬಿಡುಗಡೆ ಮಾಡಲಾಗಿದ್ದು, ಈ ಅನುದಾನದಲ್ಲಿ ಕೆಳಕಂಡ ಪ್ರಮುಖ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿರುತ್ತದೆ.
- ರೂ. 2794.78 ಲಕ್ಷಗಳ ಅನುದಾನ ಭರಿಸಿ ಒಟ್ಟು 254 ಸಂಖ್ಯೆಯ ನಾಗರಿಕ ಮೂಲಭೂತ ಸೌಲಭ್ಯಗಳಾದ ಸಿ. ಸಿ. ರಸ್ತೆ, ಚರಂಡಿ, ಸಂಪರ್ಕ ರಸ್ತೆ, ಅಂಗನವಾಡಿ ಕಟ್ಟಡ ನಿರ್ಮಾಣ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲು ವಿವಿಧ ಸರ್ಕಾರಿ ಸಂಸ್ಥೆಗಳ ಮೂಲಕ ಕ್ರಮವಹಿಸಲಾಗಿರುತ್ತದೆ.
- ರೂ. 4270.43 ಲಕ್ಷಗಳ ಅನುದಾನ ಭರಿಸಿ ಒಟ್ಟು 163 ಸಂಖ್ಯೆಯ ಸೇವಾಲಾಲ್ ಸಮುದಾಯ ಭವನ ಕಾಮಗಾರಿಗಳನ್ನು ಕೈಗೊಳ್ಳಲು ವಿವಿಧ ಸರ್ಕಾರಿ ಸಂಸ್ಥೆಗಳ ಮೂಲಕ ಕ್ರಮವಹಿಸಲಾಗಿರುತ್ತದೆ...
- ಸನ್ಮಾನ್ಯ ಮುಖ್ಯಮಂತ್ರಿಗಳು 2015–16ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿರುವಂತೆ ಬೀದರ್ ಜಿಲ್ಲೆ ಹುಮ್ನಾಬಾದ್ ತಾಲ್ಲೂಕಿನ ಲಾಲ್‌ಧರಿ ಪ್ರದೇಶದ ಬೋರಂಪಲ್ಲಿಯಲ್ಲಿ ಹಾಗೂ ಬಾಗಲಕೋಟೆ ಜಿಲ್ಲೆಯ ಗದ್ದನಕೇರಿಯಲ್ಲಿ ಬಂಜಾರ ಆರ್ಥಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗಿರುತ್ತದೆ.
- ಸನ್ಮಾನ್ಯ ಮುಖ್ಯಮಂತ್ರಿಗಳು 2015–16ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿರುವಂತೆ ಬಂಜಾರ ಭಾಷಾ ಅಭಿವೃದ್ಧಿ ಹಾಗೂ ಸಂಶೋಧನಾ ಕಾರ್ಯ ಕೈಗೊಳ್ಳಲು ರೂ. 300.00 ಲಕ್ಷಗಳ ಅನುದಾನ ನಿಗದಿಪಡಿಸಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಇವರ ಮೂಲಕ ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿರುತ್ತದೆ.
- ಹಲವು ವರ್ಷಗಳಿಂದ ಪ್ರಗತಿ ಕಾಣದೆ ಉಳಿದಿರುವ ತಾಂಡಾಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸುವ ಯೋಜನೆಗೆ ಚಲನೆ ನೀಡಲಾಗಿದ್ದು ಸರ್ಕಾರದ ಮಟ್ಟದಲ್ಲಿ ಈ ಕುರಿತು ವಿಶೇಷ ಕೋಷವನ್ನು ಸ್ಥಾಪಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿದೆ.
- ರಾಜ್ಯ ವ್ಯಾಪ್ತಿಯಲ್ಲಿ ಬರುವ ತಾಂಡಾಗಳಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಜಾರಿಯಲ್ಲಿರುವ ಅಭಿವೃದ್ಧಿ ಯೋಜನೆಗಳ ಪರಿಚಯದ ಬಗ್ಗೆ ಅರಿವು ಮತ್ತು ಜಾಗೃತಿ ಮೂಡಿಸುವ ಕಾರ್ಯಕ್ರಮ.
- ಬಂಜಾರ ಪಾರಂಪರಿಕ ಕಸೂತಿ ಮತ್ತು ಪೂರಕ ಹೊಲಿಗೆ ಕೌಶಲ್ಯ, ಬಂಜಾರ ವಾಜಾ ಸಾಹಿತ್ಯ ಕಲೆ ಮತ್ತು ಕಟ್ಟಡಗಳ ನಿರ್ಮಾಣ ಕೌಶಲ್ಯ ತೋಟಗಾರಿಕೆ ತರಬೇತಿ ಕಾರ್ಯಕ್ರಮಗಳ ಅನುಷ್ಠಾನ.

ವ್ಯವಸ್ಥಾಪಕ ನಿರ್ದೇಶಕರು



ನಮ್ಮ ಸಮಾಜದಲ್ಲಿ ಮಹಿಳೆಯರು ಮತ್ತು ಮಕ್ಕಳು ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಲಿಂಗ ತಾರತಮ್ಯ, ಕೌಟುಂಬಿಕ ಹಿಂಸೆ, ಉದ್ಯೋಗದಲ್ಲಿ ಸೀಮಿತ ಅವಕಾಶಗಳು, ಅನಕ್ಷರತೆ, ಅತ್ಯಾಚಾರ, ಲೈಂಗಿಕ ದೌರ್ಜನ್ಯ ಇತ್ಯಾದಿ ಇತ್ಯಾದಿ. ಇವೆಲ್ಲ ಸಾಮಾನ್ಯವಾಗಿ ಬಹಿರಂಗವಾಗಿ ಕಂಡುಬರುವ ಅಸಮಾನತೆಗಳು. ಆದರೆ ನಮ್ಮ ಮಹಿಳೆಯರನ್ನು ಮತ್ತು ಮಕ್ಕಳನ್ನು ಪ್ರಚ್ಛನ್ನವಾಗಿ ಕಾಡುತ್ತಿರುವ ಒಂದು ಸಮಸ್ಯೆಯೆಂದರೆ ಅಪೌಷ್ಟಿಕತೆ. ಅದು ಅನೇಕ ರೂಪದಲ್ಲಿ ಕಾಡುತ್ತಿದೆ. ಈ ಕಾರಣಕ್ಕೆ ಅಪೌಷ್ಟಿಕತೆಯನ್ನು 'ಮರೆಮಾಚಿದ ಹಸಿವು' ಎಂದು ಕರೆಯಲಾಗಿದೆ. ಅಪೌಷ್ಟಿಕತೆ, ತಾರತಮ್ಯ ಮುಂತಾದವು ಮಹಿಳೆಯರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಸೀಮಿತಗೊಳಿಸಿವೆ.

**ಪ್ರವೀಣ್ ಕುಮಾರ್**



# ಕರ್ನಾಟಕದಲ್ಲಿ ಅಪೌಷ್ಟಿಕತೆಯ ವಿರಾಟ್ ಸ್ವರೂಪ

ನಮ್ಮ ಸಮಾಜದಲ್ಲಿ ಮಹಿಳೆಯರು ಮತ್ತು ಮಕ್ಕಳು ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಲಿಂಗ ತಾರತಮ್ಯ, ಕೌಟುಂಬಿಕ ಹಿಂಸೆ, ಉದ್ಯೋಗದಲ್ಲಿ ಸೀಮಿತ ಅವಕಾಶಗಳು, ಅನಕ್ಷರತೆ, ಅತ್ಯಾಚಾರ, ಲೈಂಗಿಕ ದೌರ್ಜನ್ಯ ಇತ್ಯಾದಿ ಇತ್ಯಾದಿ. ಇವೆಲ್ಲ ಸಾಮಾನ್ಯವಾಗಿ ಬಹಿರಂಗವಾಗಿ ಕಂಡುಬರುವ ಅಸಮಾನತೆಗಳು. ಆದರೆ ನಮ್ಮ ಮಹಿಳೆಯರನ್ನು ಮತ್ತು ಮಕ್ಕಳನ್ನು ಪ್ರಚ್ಛನ್ನವಾಗಿ ಕಾಡುತ್ತಿರುವ ಒಂದು ಸಮಸ್ಯೆಯೆಂದರೆ ಅಪೌಷ್ಟಿಕತೆ. ಅದು ಅನೇಕ ರೂಪದಲ್ಲಿ ಕಾಡುತ್ತಿದೆ. ಈ ಕಾರಣಕ್ಕೆ ಅಪೌಷ್ಟಿಕತೆಯನ್ನು 'ಮರೆಮಾಚಿದ ಹಸಿವು' ಎಂದು ಕರೆಯಲಾಗಿದೆ. ಅಪೌಷ್ಟಿಕತೆ, ತಾರತಮ್ಯ ಮುಂತಾದವು ಮಹಿಳೆಯರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಸೀಮಿತಗೊಳಿಸಿವೆ.

**ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ**

ನಮ್ಮ ದೇಶದಲ್ಲಿ ಕುಟುಂಬ ಮಟ್ಟದಲ್ಲಿ ಆರೋಗ್ಯಕ್ಕೆ, ಮುಖ್ಯವಾಗಿ ಸಂತಾನೋತ್ಪತ್ತಿ ಆರೋಗ್ಯಕ್ಕೆ ಸಂಬಂಧಿಸಿದಂತೆ ರಾಷ್ಟ್ರಮಟ್ಟದಲ್ಲಿ ಸಮೀಕ್ಷೆಯನ್ನು (ಎನ್‌ಎಫ್‌ಎಚ್‌ಎಸ್) ನಡೆಸುವ ಕೆಲಸ ೧೯೯೨–೯೩ರಲ್ಲಿ ಆರಂಭವಾಯಿತು. ಇದು ಮೊದಲ ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆಯಾಗಿದೆ. ಎರಡನೆಯ ಸಮೀಕ್ಷೆಯು ೧೯೯೮–೯೯ರಲ್ಲಿ ನಡೆಯಿತು. ಮೂರನೆಯ ಸಮೀಕ್ಷೆಯನ್ನು ೨೦೦೫–೦೬ರಲ್ಲಿ ನಡೆಸಲಾಯಿತು. ನಾಲ್ಕನೆಯ ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆಯನ್ನು ೨೦೧೫–೧೬ರಲ್ಲಿ ನಡೆಸಿ ಅದರ ವರದಿಗಳನ್ನು ಪ್ರಕಟಿಸಲಾಗಿದೆ. ಈ ಸಮೀಕ್ಷೆಗಳಲ್ಲಿ ಆರೋಗ್ಯ ಮತ್ತು ಸಂತಾನೋತ್ಪತ್ತಿ ಆರೋಗ್ಯಕ್ಕೆ ಸಂಬಂಧಿಸಿದಂತೆ ರಕ್ತಹೀನತೆ, ಸಾಂಸ್ಥಿಕ ಹೆರಿಗೆ, ವಿವಾಹ/ಬಾಲ್ಯವಿವಾಹ, ಸಂತಾನೋತ್ಪತ್ತಿ ಆರೋಗ್ಯ ಸೇವೆ, ಬಿ ಎಮ್ ಐ ವಿವರಗಳು ಮುಂತಾದವುಗಳ ಬಗ್ಗೆ ರಾಜ್ಯ ಮತ್ತು ಜಿಲ್ಲಾಮಟ್ಟದ ಅಂಕಿಅಂಶಗಳನ್ನು ಪ್ರಕಟಿಸಲಾಗುತ್ತದೆ. ಪ್ರಸ್ತುತ ಲೇಖನದಲ್ಲಿ ಎನ್ ಎಫ್ ಎಚ್ ಎಸ್ ೨೦೧೫–೧೬ರ ಕರ್ನಾಟಕಕ್ಕೆ ಸಂಬಂಧಿಸಿದ ಅಪೌಷ್ಟಿಕತೆ, ಅನೀಮಿಯ, ಬಾಲ್ಯವಿವಾಹಗಳು ಮುಂತಾದವುಗಳನ್ನು ಕುರಿತಂತೆ ಚರ್ಚೆ ಮಾಡಲಾಗಿದೆ.

ಲಿಂಗ ತಾರತಮ್ಯದ ಕಾರಣವಾಗಿ ಮತ್ತು ಅಪೌಷ್ಟಿಕತೆಯ ಪರಿಣಾಮವಾಗಿ ಲಿಂಗ ಅನುಪಾತವು ಮಹಿಳೆಯರಿಗೆ ಪ್ರತಿಕೂಲವಾಗಿದೆ. ಕರ್ನಾಟಕದಲ್ಲಿ ೨೦೧೧ರ ಜನಗಣತಿ ಪ್ರಕಾರ ಪ್ರತಿ ಸಾವಿರ ಪುರುಷರಿಗೆ ಇರುವ ಮಹಿಳೆಯರ ಸಂಖ್ಯೆ ೯೭೩. ಇದು ವಾಸ್ತವವಾಗಿ ಸಾವಿರಕ್ಕಿಂತ ಅಧಿಕವಿರಬೇಕು. ಇದೇ ರೀತಿಯಲ್ಲಿ ಪ್ರತಿ ಸಾವಿರ ಅಕ್ಷರಸ್ಥ ಪುರುಷರಿಗೆ ಎದುರಾಗಿರುವ ಅಕ್ಷರಸ್ಥ ಮಹಿಳೆಯರ ಸಂಖ್ಯೆ ೮೦೬. ನಮ್ಮ ರಾಜ್ಯದಲ್ಲಿ ಎಸ್.ಆರ್.ಎಸ್. ಮಾಹಿತಿ ಪ್ರಕಾರ ೨೦೧೫ರಲ್ಲಿ ಪ್ರತಿ ಸಾವಿರ ಜನನಗಳಿಗೆ ಹೆಣ್ಣು ಶಿಶು ಮರಣ ಪ್ರಮಾಣ ೩೦ರಷ್ಟಿದ್ದರೆ ಗಂಡು ಶಿಶುಗಳ ಮರಣ ಪ್ರಮಾಣ ೨೬. ಲಿಂಗ ತಾರತಮ್ಯ ಅನ್ನುವುದು ಭಾವನಾತ್ಮಕ ಸಂಗತಿ ಮಾತ್ರವಲ್ಲ, ಅದೊಂದು ಪ್ರಚಲಿತ ವಾಸ್ತವ ಸಂಗತಿ. ನಮ್ಮ ಸಮಾಜದ ಸಂದರ್ಭದಲ್ಲಿ ಹೆಣ್ಣುಮಕ್ಕಳು ತಾಯಿಯ ಗರ್ಭಕೋಶ ಪ್ರವೇಶಿಸಿದ ಸಂದರ್ಭದಿಂದ ಕೊನೆಗೆ ಮಣ್ಣಿನ ಗರ್ಭ ಸೇರುವವರೆಗೆ ಅಸಮಾನತೆಯನ್ನು ಅನುಭವಿಸುತ್ತಿರುತ್ತಾರೆ. ನಮ್ಮಲ್ಲಿ ಹೆಣ್ಣನ್ನು ಸರ್ವತಂತ್ರಸ್ವತಂತ್ರ ವ್ಯಕ್ತಿಯನ್ನಾಗಿ ಪರಿಗಣಿಸುವುದಕ್ಕೆ ಪ್ರತಿಯಾಗಿ ಅವಳನ್ನು ತಾಯಿಯಾಗಿ, ಹೆಂಡತಿಯಾಗಿ ನೋಡುವ ಕ್ರಮವಿದೆ. ಏಕೆಂದರೆ ಮಹಿಳೆ ಅಂದರೆ ಅವಳು ಕೇವಲ ಸಂತಾನೋತ್ಪತ್ತಿ ಸಾಧನ. ಈ ಕಾರ್ಯವನ್ನು ನಿರ್ವಹಿಸಲು ಅಗತ್ಯವಾದ ಪೌಷ್ಟಿಕ ಆಹಾರದ ಬಗ್ಗೆ ಯಾವತ್ತೂ ನಮ್ಮ ಸಮಾಜ ಗಮನ ನೀಡಲಿಲ್ಲ. ಇದರ ಪರಿಣಾಮವೇ ಅಪೌಷ್ಟಿಕತೆಯ ಅಕರಾಳ ವಿಕರಾಳ ರೂಪ.

ಪೌಷ್ಟಿಕ ಆಹಾರದ ಬಗ್ಗೆ ಗಮನ ನೀಡುವುದಕ್ಕೆ ಪ್ರತಿಯಾಗಿ ಉಪವಾಸ ವ್ರತಗಳನ್ನು ವಿಧಿಸಿದ್ದು, ಈರುಳ್ಳಿ-ಬೆಳ್ಳುಳ್ಳಿ ವರ್ಜಿತ ಆಹಾರ ಸೇವನೆಯನ್ನು ಬೋಧಿಸಿದ್ದು, ಮನೆವಾರ್ತೆಗೆ ಮಾತ್ರವೇ ಮಹಿಳೆಯರ ಪ್ರಪಂಚವನ್ನು ಸೀಮಿತಗೊಳಿಸಿದ್ದು ಮುಂತಾದವು ಲಿಂಗ ತಾರತಮ್ಯ ಮತ್ತು ಅಪೌಷ್ಟಿಕತೆಯ ಮೂಲದಲ್ಲಿರುವ ಸಂಗತಿಗಳಾಗಿವೆ.

ನಮ್ಮ ರಾಜ್ಯದ ಸಂದರ್ಭದಲ್ಲಿ ಮಹಿಳೆಯರ ಮತ್ತು ಮಕ್ಕಳ ಅಪೌಷ್ಟಿಕತೆಗೆ ಪ್ರಾದೇಶಿಕ ಆಯಾಮವಿದೆ. ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಬಾಲ್ಯವಿವಾಹಗಳು ಇಂದಿಗೂ ವ್ಯಾಪಕವಾಗಿ ನಡೆಯುತ್ತಿವೆ. ಬಾಲ ಕಾರ್ಮಿಕ ಪದ್ಧತಿಯು ದೊಡ್ಡ ಪ್ರಮಾಣದಲ್ಲಿ ಅಸ್ತಿತ್ವದಲ್ಲಿದೆ. ಒಟ್ಟು ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ಸದರಿ ಜಿಲ್ಲೆಗಳಲ್ಲಿ ಅಧಿಕವಾಗಿದೆ. ಉದಾಹರಣೆಗೆ, ನಮ್ಮ ರಾಜ್ಯದಲ್ಲಿ ೬ರಿಂದ ೫೯ ತಿಂಗಳ ವಯೋಮಾನದ ಮಕ್ಕಳಲ್ಲಿ ಅನೀಮಿಯ ಎದುರಿಸುತ್ತಿರುವ ಮಕ್ಕಳ ಪ್ರಮಾಣ ೨೦೧೫-೧೬ರಲ್ಲಿ ಶೇ. ೬೦.೯. ಆದರೆ ಅನೀಮಿಯ ಎದುರಿಸುತ್ತಿರುವ ಮಕ್ಕಳ ಪ್ರಮಾಣ ರಾಯಚೂರಿನಲ್ಲಿ ಶೇ. ೭೦ರಷ್ಟಿದ್ದರೆ ಯಾದಗೀರ್‌ನಲ್ಲಿ ಇದು ಶೇ. ೭೪ರಷ್ಟಿದೆ. ಕಲಬುರಗಿಯಲ್ಲಿ ಶೇ. ೭೨ರಷ್ಟಿದ್ದರೆ ವಿಜಯಪುರದಲ್ಲಿ ಅದು ಶೇ. ೬೮ರಷ್ಟಿದೆ. ಬಳ್ಳಾರಿ ಜಿಲ್ಲೆಯಲ್ಲಿ ಅನೀಮಿಯಕ್ಕೆ ಒಳಗಾಗಿರುವ ಮಕ್ಕಳ ಪ್ರಮಾಣ ಶೇ. ೭೨.೩. ಮಕ್ಕಳಲ್ಲಿರುವ ಅನೀಮಿಯಕ್ಕೆ ಮತ್ತು ಅವರ ಬೌದ್ಧಿಕ ಬೆಳವಣಿಗೆಗೆ ಸಂಬಂಧವಿದೆ. ಯಾವ ಜಿಲ್ಲೆಗಳಲ್ಲಿ ಮಕ್ಕಳಲ್ಲಿನ ಅಪೌಷ್ಟಿಕತೆ ಪ್ರಮಾಣ ಅಧಿಕವಾಗಿರುತ್ತದೋ ಅಲ್ಲಿ ಹತ್ತನೆಯ ತರಗತಿಯ ಮತ್ತು ಪಿಯುಸಿ ಎರಡನೆಯ ವರ್ಷದ ಪರೀಕ್ಷಾ ಫಲಿತಾಂಶ ಕೆಳಮಟ್ಟದಲ್ಲಿರುತ್ತದೆ. ನಮ್ಮಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಉತ್ತಮಪಡಿಸಬೇಕೆಂದರೆ ಅದು ಕೇವಲ ಶಾಲೆಗಳನ್ನು ತೆರೆಯುವುದರಿಂದ, ಶಾಲಾ ಕಟ್ಟಡಗಳನ್ನು ಕಟ್ಟಿಸುವುದರಿಂದ, ಶಿಕ್ಷಕರನ್ನು ನೇಮಿಸುವುದರಿಂದ ಮಾತ್ರ ಸಾಧ್ಯವಿಲ್ಲ. ಇದರ ಜೊತೆಗೆ ಮಕ್ಕಳ ಆರೋಗ್ಯ, ಪೌಷ್ಟಿಕತೆಯ ಮಟ್ಟ, ಮಕ್ಕಳ ಮನೆಯಲ್ಲಿನ ವಾತಾವರಣ ಮುಂತಾದವುಗಳನ್ನು ನಿರ್ವಹಿಸಬೇಕಾಗುತ್ತದೆ. ಅಪೌಷ್ಟಿಕತೆ/ಅನೀಮಿಯ ಅನ್ನುವುದು ಅಭಿವೃದ್ಧಿ ಸಮಸ್ಯೆ ಅನ್ನುವುದನ್ನು ನಾವು ಮೊದಲು ಮನಗಾಣಬೇಕು. ಅದರ ನಿವಾರಣೆಗೆ ಬಂಡವಾಳ ಹೂಡಿಕೆಯ ಅಗತ್ಯವಿದೆ.

**ಮಹಿಳೆಯರಲ್ಲಿ ಅನೀಮಿಯ**

ಅನೀಮಿಯ/ಅಪೌಷ್ಟಿಕತೆಗೆ ಅಂತರ ತಲೆಮಾರು ಆಯಾಮವಿದೆ. ಇದು ತಲೆಮಾರಿನಿಂದ ತಲೆಮಾರಿಗೆ ಹರಿದುಕೊಂಡು ಬರುತ್ತದೆ. ಅನೀಮಿಯ ಎದುರಿಸುತ್ತಿರುವ ತಾಯಂದಿರು ಹಡೆಯುವ ಮಕ್ಕಳು ಅನೀಮಿಯಕ್ಕೆ ಒಳಗಾಗಿರುತ್ತಾರೆ. ಅನೀಮಿಯಕ್ಕೆ ಒಳಗಾದ ಹದಿಹರೆಯದ ಹೆಣ್ಣುಮಕ್ಕಳು ಅಪ್ರಾಪ್ತ ವಯಸ್ಸಿಗೆ ಗರ್ಭಿಣಿಯರಾಗಿ ಹಡೆದ ಮಕ್ಕಳು ಖಚಿತವಾಗಿ ಅನೀಮಿಯಕ್ಕೆ ಒಳಗಾಗಿರುತ್ತಾರೆ. ಮಹಿಳೆಯರಲ್ಲಿನ ಅನೀಮಿಯ ಮತ್ತು ಬಾಲ್ಯವಿವಾಹಗಳ ನಡುವೆ ಸಂಬಂಧವಿದೆ. ಹೆಣ್ಣುಮಕ್ಕಳಿಗೆ ೧೮ ವರ್ಷ ತುಂಬುವುದಕ್ಕೆ ಮೊದಲೇ ಮದುವೆ ಮಾಡುವುದನ್ನು ಬಾಲ್ಯವಿವಾಹ ಎಂದು ಶಾಸನಾತ್ಮಕವಾಗಿ ಕರೆಯಲಾಗಿದೆ. ನಿದರ್ಶನವಾಗಿ ಕೊಪ್ಪಳ ಜಿಲ್ಲೆಯಲ್ಲಿ ಬಾಲ್ಯವಿವಾಹಗಳ ಪ್ರಮಾಣ ಶೇ. ೩೫.೯ರಷ್ಟಿದ್ದರೆ, ಅಲ್ಲಿ ೧೫ರಿಂದ ೪೯ರ ವಯೋಮಾನದ ಮಹಿಳೆಯರಲ್ಲಿನ ಅನೀಮಿಯ ಪ್ರಮಾಣ ಶೇ. ೪೫.೬ರಷ್ಟಿದೆ. ಯಾದಗೀರ್ ಜಿಲ್ಲೆಯಲ್ಲಿ ಮಹಿಳೆಯರಲ್ಲಿನ ಅನೀಮಿಯ ಪ್ರಮಾಣ ಶೇ. ೪೭.೭ರಷ್ಟಿದ್ದರೆ ಬಾಲ್ಯವಿವಾಹಗಳ ಪ್ರಮಾಣ ಶೇ. ೩೫.೫ರಷ್ಟಿದೆ. ಪ್ರಸವಪೂರ್ವ ಆರೋಗ್ಯ ಸೇವೆಯನ್ನು ಪಡೆದ ಗರ್ಭಿಣಿಯರ ಪ್ರಮಾಣ ರಾಜ್ಯಮಟ್ಟದಲ್ಲಿ ಶೇ. ೩೩ರಷ್ಟಿದ್ದರೆ ಇದರ ಪ್ರಮಾಣ ವಿಜಯಪುರದಲ್ಲಿ ಶೇ. ೨೪, ಯಾದಗೀರ್ ಜಿಲ್ಲೆಯಲ್ಲಿ ಶೇ. ೧೯ ಮತ್ತು ಕಲಬುರಗಿ ಜಿಲ್ಲೆಯಲ್ಲಿ ಅದರ ಪ್ರಮಾಣ ಶೇ. ೩೦. ಜನನಿ ಸುರಕ್ಷಾ ಫಲಾನುಭವಿಗಳ ಪ್ರಮಾಣ ೨೦೧೫-೧೬ರಲ್ಲಿ ರಾಜ್ಯಮಟ್ಟದಲ್ಲಿ ಶೇ. ೧೯.೯ರಷ್ಟಿದೆ. ಆದರೆ ಬಡತನ ತೀವ್ರವಾಗಿರುವ ಹಿಂದುಳಿದ ಜಿಲ್ಲೆಗಳಲ್ಲಿ ಇದರ ಫಲಾನುಭವಿಗಳ ಪ್ರಮಾಣ ಅಧಿಕವಿದೆ. ಉದಾಹರಣೆಗೆ, ಜನನಿ ಸುರಕ್ಷಾ ಯೋಜನೆಯಡಿಯಲ್ಲಿ ಅನುಕೂಲ ಪಡೆದುಕೊಂಡ ಬಾಣಂತಿಯರ ಪ್ರಮಾಣ ಚಾಮರಾಜನಗರ ಜಿಲ್ಲೆಯಲ್ಲಿ ಶೇ. ೪೩.೪ರಷ್ಟಿದ್ದರೆ ಬಾಗಲಕೋಟೆಯಲ್ಲಿ ಅವರ ಪ್ರಮಾಣ ಶೇ. ೩೬ ಮತ್ತು ರಾಯಚೂರು ಜಿಲ್ಲೆಯಲ್ಲಿ ಅವರ ಪ್ರಮಾಣ ಶೇ. ೩೮ರಷ್ಟಿದೆ. ಇದೊಂದು ಸ್ವಾಗತಾರ್ಹ ಸಂಗತಿ. ಹಿಂದುಳಿದ ಜಿಲ್ಲೆಗಳಲ್ಲಿ ಬಡತನವು ತೀವ್ರವಾಗಿರುವುದರಿಂದ ಸರ್ಕಾರದ ಕಾರ್ಯಕ್ರಮಗಳು ಅನಿವಾರ್ಯವಾಗಿವೆ. ಈ ಕಾರಣಕ್ಕೆ ಜನನಿ ಸುರಕ್ಷಾ ಕಾರ್ಯಕ್ರಮದ ಫಲಾನುಭವಿಗಳ ಪ್ರಮಾಣ ಹಿಂದುಳಿದ ಜಿಲ್ಲೆಗಳಲ್ಲಿ ಅಧಿಕವಾಗಿದೆ.

**ಮಹಿಳೆಯರಲ್ಲಿನ ಅನೀಮಿಯ ಮತ್ತು ಭೂರಹಿತ ದಿನಗೂಲಿಗಳ ಪ್ರಮಾಣ**

ಜನಗಣತಿ ೨೦೧೧ರ ವರದಿ ಪ್ರಕಾರ ನಮ್ಮ ರಾಜ್ಯದಲ್ಲಿನ ಒಟ್ಟು ಪುರುಷ ದುಡಿಮೆಗಾರರಲ್ಲಿ ಭೂರಹಿತ ಪುರುಷ ದುಡಿಮೆಗಾರರ ಪ್ರಮಾಣ ಶೇ. ೧೭.೯೭ರಷ್ಟಿದ್ದರೆ, ಮಹಿಳೆಯರಿಗೆ ಸಂಬಂಧಿಸಿದಂತೆ ಇವರ ಪ್ರಮಾಣ ಶೇ. ೪೦.೩೩ರಷ್ಟಿದೆ. ಬಾಗಲಕೋಟೆ, ರಾಯಚೂರು, ಕೊಪ್ಪಳ, ಯಾದಗೀರ್, ಚಾಮರಾಜನಗರ ಜಿಲ್ಲೆಗಳಲ್ಲಿ ಒಟ್ಟು ಪುರುಷ ದುಡಿಮೆಗಾರರ ಪ್ರಮಾಣದಲ್ಲಿ ಪುರುಷ ಭೂರಹಿತ ದುಡಿಮೆಗಾರರ ಪ್ರಮಾಣ ಶೇ. ೩೦ಕ್ಕಿಂತ ಕಡಿಮೆಯಿದ್ದರೆ ಒಟ್ಟು ಮಹಿಳಾ ದುಡಿಮೆಗಾರರಲ್ಲಿ ಮಹಿಳಾ ಭೂರಹಿತ ದುಡಿಮೆಗಾರರ ಪ್ರಮಾಣ ಶೇ. ೬೦ಕ್ಕಿಂತ ಅಧಿಕವಿದೆ. ಅಂದರೆ ಎಲ್ಲಿ ಉದ್ಯೋಗವು ಹಂಗಾಮಿಯಾಗಿರುತ್ತದೋ, ಎಲ್ಲಿ ಕೂಲಿ ಕೆಳಮಟ್ಟದಲ್ಲಿರುತ್ತದೋ ಅಂತಹ ಉದ್ಯೋಗಗಳಲ್ಲಿ ಮಹಿಳೆಯರ ಪ್ರಮಾಣ ಅಧಿಕವಾಗಿರುತ್ತದೆ ಮತ್ತು ಅಲ್ಲಿ ಪುರುಷರ ಪ್ರಮಾಣ ಕೆಳಮಟ್ಟದಲ್ಲಿರುತ್ತದೆ. ಹೀಗೆ ಶಿಕ್ಷಣ, ಆರೋಗ್ಯ, ಉದ್ಯೋಗ ಎಲ್ಲ ಕ್ಷೇತ್ರಗಳಲ್ಲಿಯೂ ಮಹಿಳೆಯರು ತಾರತಮ್ಯವನ್ನು ಎದುರಿಸುತ್ತಿದ್ದಾರೆ.

ಭೂರಹಿತ ಮಹಿಳಾ ದುಡಿಮೆಗಾರರ ಪ್ರಮಾಣ ಅಧಿಕವಿರುವುದಕ್ಕೂ, ಅವರಲ್ಲಿ ಅನಕ್ಷರತೆ ಪ್ರಮಾಣ ಕೆಳಮಟ್ಟದಲ್ಲಿರುವುದಕ್ಕೂ ಹಾಗೂ ಮಹಿಳೆಯರು ಮತ್ತು ಮಕ್ಕಳಲ್ಲಿ ಕಂಡುಬರುವ ಅನೀಮಿಯ ಪ್ರಮಾಣಕ್ಕೂ ಸಂಬಂಧವಿದೆ. ನಮ್ಮ ರಾಜ್ಯದ ಯಾವ ಜಿಲ್ಲೆಗಳಲ್ಲಿ ಭೂರಹಿತ ಮಹಿಳಾ ದುಡಿಮೆಗಾರರ ಪ್ರಮಾಣ ಅಧಿಕವಾಗಿದೆಯೋ ಆ ಜಿಲ್ಲೆಗಳಲ್ಲಿ ಮಹಿಳೆಯರು ಮತ್ತು ಪುರುಷರ ಸಾಕ್ಷರತೆಯ ಪ್ರಮಾಣಗಳ ನಡುವೆ ಅಸಮಾನತೆಯು ಅಧಿಕವಾಗಿರುತ್ತದೆ. ಉದಾಹರಣೆಗೆ ಯಾದಗೀರ್, ವಿಜಯಪುರ, ರಾಯಚೂರು ಮುಂತಾದ ಜಿಲ್ಲೆಗಳಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಅನುಕ್ರಮವಾಗಿ ಶೇ. ೨೦.೮೭, ಶೇ. ೨೦.೪೯ ಮತ್ತು ಶೇ. ೨೧.೭೪ ಅಂಶಗಳಷ್ಟು ಕಡಿಮೆಯಿದೆ. ಆದರೆ ರಾಜ್ಯಮಟ್ಟದಲ್ಲಿ ಈ ಅಂತರ ಶೇ. ೧೪.೩೯ ಅಂಶಗಳಷ್ಟಿದೆ.

**ಇದಕ್ಕೇನು ಪರಿಹಾರ !**

ಮೊದಲನೆಯದಾಗಿ, ಅಪೌಷ್ಟಿಕತೆ ಸಮಸ್ಯೆಯನ್ನು ಪ್ರತ್ಯೇಕವಾಗಿ ಪರಿಗಣಿಸುವುದು ಸಾಧ್ಯವಿಲ್ಲ. ಇದನ್ನು ಕೇವಲ ಮಹಿಳೆಯರ ಸಮಸ್ಯೆ ಎಂದು ಪರಿಗಣಿಸುವುದು ತಪ್ಪು. ಇದನ್ನು ಅಭಿವೃದ್ಧಿ ಸಮಸ್ಯೆಯನ್ನಾಗಿ ಪರಿಗಣಿಸಿ ಕ್ರಮಗಳನ್ನು ತೆಗೆದುಕೊಳ್ಳುವುದು ಅಗತ್ಯ. ಎರಡನೆಯದಾಗಿ, ಈ ಸಮಸ್ಯೆಯು ಚಾರಿತ್ರಿಕವಾಗಿ ಅನೂಚಾನವಾಗಿ ಹರಿದುಬರುತ್ತಿರುವ ಸಂಗತಿಯಾಗಿದೆ. ಇದನ್ನು ತಾಂತ್ರಿಕ ಸಮಸ್ಯೆಯನ್ನಾಗಿ ಪರಿಗಣಿಸುವ ಕ್ರಮದಿಂದಾಗಿ ಇದು ಹರಿದುಬರುತ್ತಿದೆ. ಸಮಾಜದಲ್ಲಿ ಮಹಿಳೆಯರ ಬಗ್ಗೆ ಆಳವಾಗಿ ಬೇರೂರಿರುವ ಪೂರ್ವಗ್ರಹ, ತಾರತಮ್ಯ ನಂಬಿಕೆಗಳಿಂದಾಗಿ ಸದರಿ ಸಮಸ್ಯೆಯು ಮುಂದುವರಿಯುತ್ತಿದೆ. ಮೂರನೆಯದಾಗಿ, ಸಮಾಜದಲ್ಲಿ ಮಹಿಳೆಯರ ಸಮಸ್ಯೆಗಳನ್ನು ಕಡೆಗಣಿಸಿಕೊಂಡು ಬರಲಾಗಿದೆ. ಅವುಗಳನ್ನು ಮಹಿಳೆಯರ ಸಮಸ್ಯೆ ಎಂದು ಮೂಲೆಗುಂಪು ಮಾಡಲಾಗುತ್ತಿದೆ. ನಾಲ್ಕನೆಯದಾಗಿ, ಕುಟುಂಬಗಳಲ್ಲಿ ಆಹಾರ ವಿತರಣೆಗೆ ಸಂಬಂಧಿಸಿದಂತೆ ಲಿಂಗ ತಾರತಮ್ಯವಿದೆ. ಮನೆಗಳಲ್ಲಿ ಗಂಡು ಮಕ್ಕಳಿಗೆ ಆಹಾರವನ್ನು ಮೊದಲು ನೀಡಲಾಗುತ್ತದೆ ಮತ್ತು ಅವರಿಗೆ ಪೌಷ್ಟಿಕ ಆಹಾರವನ್ನು ನೀಡಲಾಗುತ್ತದೆ. ಆದರೆ ಹೆಣ್ಣುಮಕ್ಕಳಿಗೆ ವಿಶೇಷ ಗಮನ ನೀಡುವ ಕ್ರಮ ಕಂಡುಬರುವುದಿಲ್ಲ. ಐದನೆಯದಾಗಿ, ಅಭಿವೃದ್ಧಿಯಲ್ಲಿ ಮಹಿಳೆಯರು ವಂಚಿತರಾಗುತ್ತಿದ್ದಾರೆ. ಇದರ ಪರಿಣಾಮವಾಗಿ ಜನಸಂಖ್ಯೆಯಲ್ಲಿ ಮಹಿಳೆಯರ ಸಂಖ್ಯೆಯು ಕಡಿಮೆಯಾಗುತ್ತಿದೆ. ಹೆಣ್ಣು ಶಿಶುಗಳ ಮರಣ ಪ್ರಮಾಣವು ಗಂಡು ಶಿಶುಗಳ ಮರಣ ಪ್ರಮಾಣಕ್ಕಿಂತ ಹೆಚ್ಚಾಗಿದೆ.

ಈ ಎಲ್ಲ ಸಂಗತಿಗಳನ್ನು ಸರ್ಕಾರ ಮತ್ತು ಸಮಾಜ ಎದುರಿಸಬೇಕು. ಈ ತಾರತಮ್ಯದ ಸಂಗತಿಗಳನ್ನು ಕಾನೂನುಗಳ, ಶಾಸನಗಳ ಮೂಲಕ ಪರಿಹರಿಸುವುದು ಸಾಧ್ಯವಿಲ್ಲ. ಅವು ಒಂದು ಹಂತದವರೆಗೆ ಪರಿಣಾಮ ಬೀರಬಹುದು. ಆದರೆ ಸಮಸ್ಯೆಯನ್ನು ಬೇರುಸಹಿತ ನಿವಾರಿಸಬೇಕಾದರೆ ಮಹಿಳೆಯರ ಬಗ್ಗೆ ಸಮಾಜದಲ್ಲಿ ಆಳವಾಗಿ ಬೇರೂರಿರುವ ತಾರತಮ್ಯ ಭಾವನೆಯನ್ನು ತೊಲಗಿಸಬೇಕು. ಲಿಂಗ ಸಮಾನತೆಯನ್ನು ಒಂದು ಮೌಲ್ಯವಾಗಿ, ಅಭಿವೃದ್ಧಿಯ ಸಂಗತಿಯಾಗಿ, ಬಂಡವಾಳವನ್ನು ನಿರೀಕ್ಷಿಸುವ ಬಾಬತ್ತಾಗಿ ಪರಿಗಣಿಸಬೇಕಾಗಿದೆ.

**ಪ್ರವೀಣ್ ಕುಮಾರ್**
ಅರ್ಥಶಾಸ್ತ್ರದ ಸಂಶೋಧನ ವಿದ್ಯಾರ್ಥಿ, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೦೧

# ಬೆಂಗಳೂರು ನಾಗರತ್ನಮ್ಮ

ಚಿನ್ನಸ್ವಾಮಿ ವಡ್ಡಗೆರೆ

ನಂಜನಗೂಡಿನ ಕಪಿಲೆಯ ದಡದಲ್ಲಿ ಹುಟ್ಟಿದ ದೇವದಾಸಿ ಸಮುದಾಯದ ಹೆಣ್ಣು ಮಗಳೊಬ್ಬಳು ಕರ್ನಾಟಕ ಸಂಗೀತ ಕ್ಷೇತ್ರದ ಧ್ರುವತಾರೆಯಾಗಿ ತಮಿಳುನಾಡಿನ ತಂಜಾವೂರು ಬಳಿಯ ತಿರುವಯ್ಯಾರಿನ ಕಾವೇರಿ ತಟದಲ್ಲಿರುವ ತ್ಯಾಗರಾಜರ ಸಮಾಧಿಯ ಎದುರೇ ಗುಡಿ ಕಟ್ಟಿಸಿಕೊಂಡು ಪೂಜೆಗೆ ಸಂದಿರುವ ಮಹಾನ್ ಕಥಾನಕ "ಕಪಿಲೆ ಹರಿದಳು ಕಡಲಿಗೆ". ಇದು ಪ್ರೊ॥ ಮಲೆಯೂರು ಗುರುಸ್ವಾಮಿ ಅವರ ಬೃಹತ್ ಕಾದಂಬರಿ. ಸ್ತ್ರೀ ಸಮಾನತೆ, ಲೈಂಗಿಕ ಶೋಷಣೆ, ಮೇಲ್ವರ್ಗದ ದಬ್ಬಾಳಿಕೆ ಎಲ್ಲವನ್ನು ಎದುರಿಸಿ ದೇವದಾಸಿ ಬದುಕಿಗೆ ಘನತೆಯನ್ನು ತಂದುಕೊಟ್ಟ ಕನ್ನಡದ ಹೆಣ್ಣುಮಗಳೊಬ್ಬಳು ತಮಿಳುನಾಡಿನಲ್ಲಿ ಉಂಟುಮಾಡಿದ ಸಂಚಲನ ಅಸಾಮಾನ್ಯ. ನಂಜನಗೂಡು, ಮೈಸೂರಿನ ಸಾಂಸ್ಕೃತಿಕ, ಸಾಮಾಜಿಕ ಇತಿಹಾಸವನ್ನು ಹೇಳುತ್ತಲೇ 'ಬೆಂಗಳೂರು ನಾಗರತ್ನಮ್ಮ'ನವರ ಬದುಕಿನ ಹೋರಾಟವನ್ನು ಚಿತ್ರಿಸಿರುವ ಕಾದಂಬರಿಯನ್ನು ಕನ್ನಡಿಗರೆಲ್ಲರೂ ಓದಬೇಕು. ಕವಿ ಡಿವಿಜಿ ಅವರಿಂದ 'ತ್ಯಾಗರತ್ನ' ಎಂದು ಕರೆಸಿಕೊಂಡ ಅನುಪಮ ಜೀವಿಯ ಜೀವನಗಾಥೆ ಕುರಿತ ವಿಶಿಷ್ಟ ಬರೆಹ ಇದು.

ಕಪಿಲೆ ಹರಿದಳು ಕಡಲಿಗೆ ಪ್ರೊ॥ ಮಲೆಯೂರು ಗುರುಸ್ವಾಮಿ ಅವರ ನಾಲ್ಕನೆಯ ಕಾದಂಬರಿ. ನದಿಯೊಂದು ಎಲ್ಲೋ ಹುಟ್ಟಿ ಕಡಲು ಸೇರುವ ಹಂತದಲ್ಲಿ ಅನೇಕ ಏರಿಳಿತಗಳು, ಅನಿರೀಕ್ಷಿತ ತಿರುವುಗಳು ಸಂಭವಿಸುತ್ತವೆ. ಹುಟ್ಟುವ ಎಲ್ಲಾ ನದಿಗಳಿಗೂ ಕಡಲು ಕೂಡುವ ಯೋಗ ಇರುವುದಿಲ್ಲ. ಕಡಲು ಸೇರುವ ನದಿಗೆ ಪೂಜನೀಯ ಸ್ಥಾನ ಇದೆ. ಈ ಅರ್ಥದಲ್ಲಿ ಗುರುಸ್ವಾಮಿ ಅವರು ಈ ಅಪೂರ್ವ ಜೀವನಗಾಥೆಗೆ "ಕಪಿಲೆ ಹರಿದಳು ಕಡಲಿಗೆ" ಎಂದು ಕರೆದಿರುವುದು "ರೂಪಕ"ದಂತಿದೆ.



ಕಾದಂಬರಿಯನ್ನು ಓದಿ ಮುಗಿಸುತ್ತಿದ್ದಂತೆಯೇ ನಾಗರತ್ನಮ್ಮನವರ ಜೀವನ ಓದುಗರ ಮೈಮನ ಆವರಿಸಿಕೊಳ್ಳುತ್ತದೆ. ಲೈಂಗಿಕ ಶೋಷಣೆಗೆ ಒಳಗಾಗಿ, ಶ್ರೀಮಂತಿಕೆಯ ಅಮಲಿನಲ್ಲಿ ಮುಳುಗಿ ನಾಶವಾಗಿ ಬಿಡಬಹುದಾಗಿದ್ದ ದೇವದಾಸಿ ಹೆಣ್ಣುಮಗಳೊಬ್ಬಳು ಏರಿದ ಎತ್ತರ, ಬಲಾಢ್ಯರನ್ನು ಎದುರಿಸಿದ ಕೆಚ್ಚು, ಸ್ತ್ರೀ ಅಸಮಾನತೆ, ಅಪಮಾನ, ನೋವು ಎಲ್ಲವನ್ನೂ ಸಹಿಸಿಕೊಂಡು ನಡೆಸಿದ ಹೋರಾಟ, ಭೋಗ ಜೀವನದಿಂದ ತ್ಯಾಗ ಜೀವನದತ್ತ ನಡೆದ ಹಾದಿ ಮನಕಲಕುವಂತಿದೆ. ನಾಗರತ್ನಮ್ಮನವರ ವ್ಯಕ್ತಿತ್ವಕ್ಕೆ ಕುಂದು ಬಾರದಂತೆ ಎಚ್ಚರಿಕೆಯಿಂದ ಸಮಚಿತ್ತದಲ್ಲಿ ಕಟ್ಟಿರುವ ಪ್ರೊ॥ ಮಲೆಯೂರು ಗುರುಸ್ವಾಮಿ (ಮಗು) ಅವರ ಕಥನ ಪ್ರತಿಭೆ ಇಲ್ಲಿ ಅನಾವರಣಗೊಂಡಿದೆ.

ಕರ್ನಾಟಕ ಸಂಗೀತದಲ್ಲಿ ದೊಡ್ಡ ಹೆಸರು ಮಾಡಿದ್ದ "ಬೆಂಗಳೂರು ನಾಗರತ್ನಮ್ಮ" ಹುಟ್ಟಿದ್ದು ನಂಜನಗೂಡಿನಲ್ಲಿ. ವಕೀಲರಾಗಿದ್ದ ಸುಬ್ಬರಾಯರ ಉಪಪತ್ನಿ ಪುಟ್ಟಲಕ್ಷ್ಮಮ್ಮನವರ ಮಗಳಾಗಿ ಹುಟ್ಟಿ ಮೈಸೂರು, ಬೆಂಗಳೂರು, ಮದ್ರಾಸ್ ಮಹಾನಗರಗಳಲ್ಲಿ ಸಂಗೀತ ದಿಗ್ಗಜರಿಂದ ಸಂಗೀತಾಭ್ಯಾಸಮಾಡಿ ಅನೇಕ ಸಂಘರ್ಷಗಳನ್ನು ಎದುರಿಸಿ ತಮಿಳುನಾಡಿನಲ್ಲಿ ಪೂಜೆಗೊಳ್ಳುತ್ತಿರುವ ಕನ್ನಡ ನಾಡಿನ ಹೆಣ್ಣುಮಗಳ ಹಿಂದೆ ಬಹುದೊಡ್ಡ ಚರಿತ್ರೆಯೆ ಇದೆ. ಶತಮಾನದ ಹಿಂದಿನ ಕತೆ ಹೇಳುತ್ತಲೇ ಅಂದಿನ ಸಾಮಾಜಿಕ ಸಂಘರ್ಷ, ಸಾಂಸ್ಕೃತಿಕ ಬಿಕ್ಕಟ್ಟು, ದೇವದಾಸಿಯರ ಬದುಕು–ಬವಣೆ, ಉಳ್ಳವರ ದರ್ಪ, ಸಂಗೀತಕ್ಷೇತ್ರದಲ್ಲಿನ ಒಳ ರಾಜಕೀಯ, ಇಂತಹ ಶೋಷಣೆಯ ವಿರುದ್ಧ ಹೋರಾಡಿ ಗೆದ್ದು ಅನರ್ಘ್ಯ ರತ್ನವೇ ಆದ ನಾಗರತ್ನಮ್ಮನವರ ಹೋರಾಟದ ಬದುಕನ್ನು ಕಾದಂಬರಿಕಾರರು ಚಿತ್ರಿಸಿದ್ದಾರೆ. ಹೆಜ್ಜಿಗೆ ಗ್ರಾಮದ ಸ್ಥಳ ಪುರಾಣ ನಂಜುಂಡೇಶ್ವರ, ಜಡೇ ನಂಜುಂಡೇಶ್ವರನಾದ ಕಥೆ, ಚಾಮುಂಡಿ ಮತ್ತು ನಂಜುಂಡೇಶ್ವರನ ಪ್ರಣಯ ಪ್ರಸಂಗ, ರತ್ನಳಲ್ಲಿದ್ದ ಅಸಾಧಾರಣ ಧಾರಣಶಕ್ತಿಯನ್ನು ಗುರುತಿಸಿ ಚಿಕ್ಕಲಿಂಗಯ್ಯನವರು ಮೊದಲ ಸಂಗೀತ ಗುರುವಾಗಿ ಸಂಗೀತಾಭ್ಯಾಸ ಮಾಡಿಸಿದ್ದು ಎಲ್ಲಾ ಮೊದಲ ಭಾಗದಲ್ಲಿದೆ.

ಒಮ್ಮೆ ಹೊಳೆದಂಡೆಯಲ್ಲಿ ಕುಳಿತು ರತ್ನಳಿಗೆ ಸಂಗೀತಾಭ್ಯಾಸ ಮಾಡಿಸುತ್ತಿದ್ದ ಚಿಕ್ಕಲಿಂಗಯ್ಯನವರು ಹೇಳಿದ ಒಂದು ಮಾತು "ಕಪಿಲಾ ನದಿ ಇದೆಯಲ್ಲಾ ಇದು ಮುಂದಕ್ಕೆ ಹರಿದು ತಿರುಮಕೂಡಲು ನರಸೀಪುರದ ಬಳಿ ಕಾವೇರಿ ನದಿಯಲ್ಲಿ ಬೆರೆತುಹೋಗುತ್ತದೆ. ಹಾಗೆಯೇ ಕಾವೇರಿ ಮುಂದಕ್ಕೆ ಹೋಗಿ ಸಮುದ್ರದಲ್ಲಿ ಸೇರಿಹೋಗುತ್ತದೆ. ಆಮೇಲೆ ಕಪಿಲೆಯೂ ಇಲ್ಲ, ಕಾವೇರಿಯೂ ಇಲ್ಲ. ಇವೆಲ್ಲ ಕಡಲು ಎನಿಸಿಕೊಳ್ಳುತ್ತವೆ. ಏಕೆಂದರೆ "ಕಡಲು" ಎಲ್ಲಕ್ಕಿಂತ ದೊಡ್ಡದು. ನಮ್ಮ ಜೀವನವೂ ಹಾಗೆಯೇ. ಈಗ ನೀನು ಚಿಕ್ಕವಳಾಗಿದ್ದೀಯಾ, ಮುಂದೆ ನಾಲ್ಕು ಜನಕ್ಕೆ ಬೇಕಾದವಳಾಗ್ತೀಯಾ" ಎಂಬ ಮಾತು ರತ್ನಳ ಬದುಕಿನಲ್ಲಿ ಸತ್ಯವಾಗುತ್ತದೆ.

ಸುಬ್ಬರಾಯರ ಔದಾರ್ಯ ರತ್ನಳನ್ನು ಮೈಸೂರಿನವರೆಗೂ ಕರೆತರುತ್ತದೆ. ಅಂದಿನ ಕಾಲದಲ್ಲಿ ಮೈಸೂರು ಆಸ್ಥಾನದಲ್ಲಿ ವಿದ್ವಾಂಸರಾಗಿ ಪ್ರಸಿದ್ಧರಾಗಿದ್ದ ಗಿರಿಭಟ್ಟರ ತಮ್ಮಯ್ಯನವರು, ಬಿಡಾರಂ ಕೃಷ್ಣಪ್ಪನವರು ಗುರುವಾಗಿ ಒದಗಿಬರುತ್ತಾರೆ. ಮೈಸೂರು ನಗರದಲ್ಲಿ ಹಾಡುಗಾರ್ತಿಯಾಗಿ ಪ್ರಸಿದ್ಧಿಗೆ ಬಂದ ನಾಗರತ್ನ ಅವರ ನಾದದ ಪರಿಮಳ ಅರಮನೆಯನ್ನು ತಲುಪುತ್ತದೆ. ಚಾಮರಾಜ ಒಡೆಯರ ಸಮಕ್ಷಮದಲ್ಲಿ ಸಂಗೀತ ಕಚೇರಿ ನಡೆಯುತ್ತದೆ. ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ ಮುಂತಾದ ಸಂಗೀತ ವಿದ್ವಾಂಸರು, ಬಸವಪ್ಪ ಶಾಸ್ತ್ರೀ, ಗರಳಪುರಿ ಶಾಸ್ತ್ರಿಗಳಂತಹ ಸಾಹಿತಿ ದಿಗ್ಗಜರ ಸಮಕ್ಷಮದಲ್ಲಿ ಕಚೇರಿ ನಡೆದು ನಾಗರತ್ನ ಭೇಷ್ ಎನಿಸಿಕೊಳ್ಳುತ್ತಾರೆ.

ಬಂಗಾಳ ಪ್ರಾಂತ್ಯಕ್ಕೆ ಪ್ರವಾಸ ಹೋಗಿ ಡಿಫ್ತೀರಿಯಾದಿಂದ ಕಲ್ಕತ್ತದಲ್ಲಿ ಚಾಮರಾಜ ಒಡೆಯರ್ ನಿಧನರಾಗುತ್ತಾರೆ. ಇದೇ ಸಂದರ್ಭದಲ್ಲಿ ಅರಮನೆ ಭಸ್ಮವಾದ ಸುದ್ದಿ ಕೇಳಿ ಬೆಂಗಳೂರಿನಿಂದ ಮೈಸೂರಿಗೆ ಬಂದ ಪಿಟೀಲು ವಿದ್ವಾನ್ ವೆಂಕಟಸ್ವಾಮಪ್ಪನವರು ನಾಗರತ್ನ ಅವರ ಸಂಗೀತ ಪ್ರತಿಭೆಗೆ ಮಾರುಹೋಗಿ ಅವರನ್ನು ಬೆಂಗಳೂರಿಗೆ ಕರೆದುಕೊಂಡು ಹೋಗುತ್ತಾರೆ. ಇಲ್ಲಿಂದ ಮೂರನೆಯ ಭಾಗ ಆರಂಭ. ಇಲ್ಲಿ ಕತೆಯ ವೇಗ ಹೆಚ್ಚಾಗುತ್ತದೆ. ಶಾಂತವಾಗಿ ಹರಿಯುತ್ತಿದ್ದ ನದಿಗೆ ಇಲ್ಲಿ ಅನಿರೀಕ್ಷಿತ ತಿರುವುಗಳು ಸಿಕ್ಕುತ್ತವೆ. ನಾಗರತ್ನ 'ನಾಗರತ್ನಮ್ಮ'ನವರಾಗಿ ಸಮಾಜದ ಗೌರವಕ್ಕೆ ಭಾಜನರಾಗುತ್ತಾರೆ.



ಹಣ, ಗೌರವ, ಅಂತಸ್ತು ಎಲ್ಲಾ ನಿರಾಯಾಸವಾಗಿ ದಕ್ಕುತ್ತದೆ. ಜಸ್ಟಿಸ್ ನರಹರಿರಾಯರಂತಹ ಪ್ರತಿಷ್ಠಿತರೆ ನಾಗರತ್ನಮ್ಮನವರ ಸಂಗೀತ ಮತ್ತು ಸೌಂದರ್ಯಕ್ಕೆ ಮನಸೋಲುತ್ತಾರೆ. ನ್ಯಾಯಾಧೀಶರೇ ನಾಗರತ್ನಮ್ಮನವರನ್ನು ಹುಡುಕಿಕೊಂಡು ಅವರ ಮನೆಗೆ ಹೋಗುವುದು ದೊಡ್ಡ ಸುದ್ದಿಯಾಗುತ್ತದೆ. 'ಬೆಂಗಳೂರು ನಾಗರತ್ನಮ್ಮ' ಎಂದೇ ಪ್ರಸಿದ್ಧಿಗೆ ಬರುವ ಇವರನ್ನು ದೊಡ್ಡ ದೊಡ್ಡ ಸಂಘಸಂಸ್ಥೆಗಳು ತಮ್ಮ ಗೌರವ ಸದಸ್ಯೆಯಾಗಿ ಮಾಡಿಕೊಳ್ಳಲು ಮುಗಿಬೀಳುತ್ತಾರೆ. ಕವಿ ಡಿವಿಜಿ ಅಂತಹ ಕವಿಗಳು ನಾಗರತ್ನಮ್ಮನವರ ಸಂಗೀತಕ್ಕೆ ಮನಸೋಲುತ್ತಾರೆ. ನದಿಯಾಗಿರುವ ನಾಗರತ್ನ ಸಾಗರಕ್ಕೆ ಹರಿಯಬೇಕಾದರೆ ನಾಟ್ಯ ಸಂಗೀತಗಳ ಸಾಗರವೇ ಆದ, ಮಹಾ ಸಂಗೀತ ವಿದ್ವಾಂಸರ ತವರಾದ ಚೆನ್ನಪಟ್ಟಣಂ (ಮದ್ರಾಸ್), ತಿರುವಯ್ಯಾರ್, ತಂಜಾವೂರ್, ಮಧುರೈ, ಕೊಯಮತ್ತೂರ್‌ಗೆ ಹೋಗಿ ನೆಲಸಬೇಕು ಎನ್ನುವ ನರಹರಿರಾಯರ ಮಾತಿನಂತೆ ನಾಗರತ್ನಮ್ಮ ಮದ್ರಾಸ್‌ಗೆ ಹೋಗಿ ನೆಲೆನಿಲ್ಲುತ್ತಾರೆ.

'ಬೆಂಗಳೂರು ನಾಗರತ್ನಮ್ಮ' ಆಗಿದ್ದವರು ಮದ್ರಾಸ್‌ನಲ್ಲಿ ನಾಗರತ್ನಮ್ಮಾಳ್ ಆಗಿ ಪ್ರಸಿದ್ಧರಾಗುತ್ತಾರೆ. ಇಲ್ಲಿಂದ ಕಾದಂಬರಿಯ ನಾಲ್ಕನೇ ಭಾಗ ಆರಂಭ. ಮದ್ರಾಸ್ ನಗರ ಕಲಾವಿದರ ತವರುಮನೆ ಎಂದು ಪರಿಗಣಿತವಾಗಿತ್ತು. ಕುಂಪಣಿ ಸರಕಾರದ ಕೇಂದ್ರಸ್ಥಾನವೂ ಆಗಿದ್ದರಿಂದ ಅಲ್ಲಿ ಎಲ್ಲಾ ರೀತಿಯ ಜನರು ವಾಸಿಸುತ್ತಿದ್ದರು. ಕೊಯಂಬತ್ತೂರು ಪಳನಿ ಕುಂಜರಂ, ಸೇಲಂ ಮೀನಾಕ್ಷಿ ಮತ್ತು ಈಕೆಯ ಪುತ್ರಿಯರಾದ ಸೇಲಂ ಪಾಪ ಮತ್ತು ರಾಧಾ, ಸೇಲಂ ಗೋದಾವರಿ, ಈನಾಡು ಸೋದರಿಯರು, ಕಪಾಲೀಶ್ವರ ದೇವಸ್ಥಾನದ ನರ್ತಕಿ ಮಹಾಸುಂದರಿ ಮೈಲಾಪುರ ದೊರೆಕಣ್ಣು, ಮೈಲಾಪುರಂ ಗೌರಿ, ವೀಣಾ ಧನಮ್ಮಾಳ್ ಮುಂತಾದ ಖ್ಯಾತ ಕಲಾವಿದೆಯರು ಮದ್ರಾಸಿನಲ್ಲಿ ವಾಸಿಸುತ್ತಿದ್ದರು. ಇಂತಹ ಮಹಾ ಕಲಾಸಾಗರಕ್ಕೆ ಬಂದು ನೆಲೆನಿಂತ ನಾಗರತ್ನಮ್ಮಾಳ್ ಅವರ ಕೀರ್ತಿ ಹಬ್ಬಲು ಹೆಚ್ಚು ಸಮಯ ಬೇಕಾಗಲಿಲ್ಲ. ಜಾರ್ಜ್‌ಟೌನ್ ಶ್ರೀನಿವಾಸ ಅಯ್ಯರ್ ಬೀದಿಯಲ್ಲಿ ಭವ್ಯ ಬಂಗಲೆ ಖರೀದಿಸುತ್ತಾರೆ. ಆ ಭವ್ಯ ಮಹಲು ಮುಂದೆ 'ಮ್ಯಾನ್ಷನ್ ಹೌಸ್' ಎಂದೇ ಪ್ರಖ್ಯಾತಿಯಾಗುತ್ತದೆ. ಈಕೆಯ ಪ್ರಖ್ಯಾತಿಯನ್ನು ಕಂಡು ಸಂಗೀತ ಕಲಿಸಿದ ಗುರುಗಳು ಸಂತೋಷಪಡುತ್ತಾರೆ.

ಇದೇ ಸಂದರ್ಭದಲ್ಲಿ ನಡೆದ ಘಟನೆಯೊಂದು ನಾಗರತ್ನಮ್ಮಾಳ್ ಬದುಕಿನಲ್ಲಿ ಬಿರುಗಾಳಿ ಎಬ್ಬಿಸಿಬಿಡುತ್ತದೆ. 'ರಾಧಿಕ ಸಾಂತ್ವನಮು' ಎಂಬ ಶೃಂಗಾರ ರಸಪ್ರಧಾನವಾದ ಕಾವ್ಯದ ಪರಿಷ್ಕೃತ ಆವೃತ್ತಿಗಳು ಎಲ್ಲೆಡೆ ಸಿಕ್ಕುತ್ತಿದ್ದವೆ ಹೊರತು ಮೂಲ ಪ್ರತಿ ಸಿಕ್ಕುತ್ತಿರಲಿಲ್ಲ. ಇದನ್ನು ಮನಗಂಡು ಮೂಲಪ್ರತಿಗಾಗಿ ಹುಡುಕಾಟ ನಡೆಸಿದಾಗ ಕೊನೆಗೆ ಅದು ಶಾಲಾ ಮಾಸ್ತರರ ಬಳಿ ಸಿಗುತ್ತದೆ. ಆಗ ತಮ್ಮೆಲ್ಲ ಕೆಲಸಗಳನ್ನು ಬಿಟ್ಟು ನಾಗರತ್ನಮ್ಮ ಮೂಲ ಕೃತಿಯನ್ನು ಅಧ್ಯಯನಮಾಡಿ, ಅನೇಕ ವಿದ್ವಾಂಸರನ್ನು ಭೇಟಿಮಾಡಿ ಕೃತಿಯ ಬಗ್ಗೆ ಚರ್ಚಿಸಿ ಮುದ್ದುಪಳನಿಯ ಪ್ರಸ್ತಾವನೆ ಯೊಂದಿಗೆ ಕೃತಿಯನ್ನು ಪ್ರಕಟಿಸುತ್ತಾರೆ. ಕೃಷ್ಣನ ಪ್ರೇಯಸಿಯಾದ ರಾಧೆಯು ತನ್ನ ಸಹೋದರಿಯ ಮಗಳಾದ ಇಳಾದೇವಿಗೆ ಪ್ರಾಕೃತಿಕವಾಗಿ ಉಂಟಾಗುವ ಲೈಂಗಿಕ ಬಯಕೆಗಳ ಸ್ವರೂಪವನ್ನು ಹೇಳುವ ಈ ಕೃತಿಸಾಹಿತ್ಯದಲ್ಲಿ ಶೀಲ – ಅಶ್ಲೀಲದ ಬಗ್ಗೆ ದೊಡ್ಡ ಚರ್ಚೆಯನ್ನೇ ಹುಟ್ಟುಹಾಕುತ್ತದೆ. ಸರಕಾರ ಈ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವಂತೆ ಗಣ್ಯರು ಒತ್ತಡ ತರುತ್ತಾರೆ. ಇದೇ ಸಮಯದಲ್ಲಿ ದೇವದಾಸಿಯರನ್ನು ದೇವಸ್ಥಾನ ದಿಂದ ಹೊರಹಾಕಬೇಕು, ಅವರ ನರ್ತನವನ್ನು ಬಹಿಷ್ಕರಿಸ ಬೇಕು ಎಂಬ ಚಳವಳಿಯೂ ಚಾಲನೆ ಪಡೆಯುತ್ತದೆ. ಆಗ ದೇವದಾಸಿಯರ ಪರವಾಗಿ ನಾಗರತ್ನಮ್ಮಾಳ್ ನಿಲ್ಲುತ್ತಾರೆ. ಕೊನೆಗೂ ಹೋರಾಟದಲ್ಲಿ ಗೆಲ್ಲುತ್ತಾರೆ.

ಆ ಕಾಲದಲ್ಲಿ ನಾಗರತ್ನಮ್ಮನವರ ಬಳಿ ಇದ್ದಷ್ಟು ಚಿತ್ರ ವಿಚಿತ್ರವಾದ ಚಿನ್ನ ಮತ್ತು ವಜ್ರಾಭರಣಗಳು ಅನೇಕ ರಾಜಮನೆತನದ ಸ್ತ್ರೀಯರ ಬಳಿಯೂ ಇರಲಿಲ್ಲವಂತೆ. ಮದ್ರಾಸ್‌ನಲ್ಲಿ ಇನ್‌ಕಂ ಟ್ಯಾಕ್ಸ್ ಕಟ್ಟುತ್ತಿದ್ದ ಏಕೈಕ ಸಂಗೀತ ವಿದುಷಿ ನಾಗರತ್ನಮ್ಮನವರಾಗಿದ್ದರು. ಇಂತಹ ಶ್ರೀಮಂತಿಕೆಯ ಉಪ್ಪರಿಗೆಯಲ್ಲಿದ್ದ ನಾಗರತ್ನಮ್ಮ ತಮ್ಮ ಎಲ್ಲಾ ಸಕಲ ಐಶ್ವರ್ಯಗಳನ್ನು ತ್ಯಾಗರಾಜರ ಸಮಾಧಿ ಕಟ್ಟಿಸಲು, ಸಂಗೀತ ವಿದ್ವಾಂಸರಿಗೆ ಗುಡಿಗುಂಡಾರ ಕಟ್ಟಿಸಲು (ಮೈಸೂರಿನ ಸಂತೆಪೇಟೆಯ ಪಶ್ಚಿಮ ಭಾಗದಲ್ಲಿರುವ ಸೀತಾರಾಮ ಮಂದಿರ ನಿರ್ಮಾಣಕ್ಕೂ ನೆರವು) ದಾನಮಾಡಿ ಕೊನೆಗೆ ಬಂಗಲೆಯನ್ನು ತೊರೆದು ಹೆಂಚಿನ ಮನೆಯಲ್ಲಿ ಸಾಮಾನ್ಯಳಂತೆ, ಸಂತಳಂತೆ ಬದುಕಿಹೋದ ಕತೆ ತ್ಯಾಗರತ್ನ ಎಂಬ ಕೊನೆಯ ಭಾಗದಲ್ಲಿದೆ.

ದೇವದಾಸಿಯ ಮಗಳಾಗಿ ಕಪಿಲೆಯ ದಡದಲ್ಲಿರುವ ನಂಜನಗೂಡಿನಲ್ಲಿ 'ರತ್ನ'ಳಾಗಿ ಜನಿಸಿ. ಮೈಸೂರಿಗೆ ಬಂದು ಗುರುಗಳ ಆಶೀರ್ವಾದದಿಂದ 'ನಾಗರತ್ನ'ಳಾಗಿ ಬೆಂಗಳೂರಿಗೆ ಬಂದು ಸಂಗೀತ ಕ್ಷೇತ್ರದ 'ಬೆಂಗಳೂರು ನಾಗರತ್ನಮ್ಮ' ಆಗಿ, ಮದ್ರಾಸ್‌ನಲ್ಲಿ ಸಾಂಸ್ಕೃತಿಕ, ಸಾಮಾಜಿಕ ಬದುಕಿನಲ್ಲಿ ಗುರುತಿಸಿಕೊಂಡು 'ನಾಗರತ್ನಮ್ಮಾಳ್' ಆದರು. ಒಮ್ಮೆ ಬೆಂಗಳೂರಿಗೆ ಬಂದಿದ್ದಾಗ ತಮ್ಮನ್ನು ನೋಡಲು ಬಂದ ಡಿವಿಜಿ ಅವರೊಂದಿಗೆ ಮಾತನಾಡುತ್ತಾ 'ಉದ್ದಕ್ಕೂ ಸಮಾಜದ ದೃಷ್ಟಿಯಲ್ಲಿ "ಭೋಗ ರತ್ನ"ಳಾಗಿ ಬದುಕಿದೆ. ಈಗ ನಿಮ್ಮ ಮುಂದೆ "ರೋಗ ರತ್ನ"ಳಾಗಿ ಮಲಗಿದ್ದೇನೆ' ಎನ್ನುತ್ತಾರೆ. ಅದಕ್ಕೆ ಡಿವಿಜಿ "ದೇಹಾಲಸ್ಯ, ರೋಗ ಯಾರನ್ನೂ ಬಿಟ್ಟಿದ್ದಲ್ಲ. ಅದು ಅಪರಿಹಾರ್ಯ. ಆದರೆ ತಾವು ಅದನ್ನು ಮೀರಿ ಬದುಕಿದ್ದೀರಿ. ಎಲ್ಲವನ್ನೂ ತ್ಯಾಗಯ್ಯನವರ ಸೇವೆಗೆ ಅರ್ಪಿಸಿ 'ತ್ಯಾಗರತ್ನ'ರಾಗಿದ್ದೀರಿ ಎಂದು ಹೇಳುತ್ತಾರೆ. ಇದು ನಾಗರತ್ನಮ್ಮನವರ ವ್ಯಕ್ತಿತ್ವವನ್ನು ತೋರಿಸುತ್ತದೆ.

ದೊರೆಗಳು ಅವರನ್ನು (ತ್ಯಾಗರಾಜರನ್ನು) ಆರಾಧಿಸಿದರು. ಸಂಗೀತಗಾರರು ಅವರ ಕೀರ್ತನೆಗಳನ್ನು ಮಾರಾಟಮಾಡಿ ಹಣವಂತರಾದರು. ಆದರೆ ಅವರ ಈ ದೇಗುಲ ಮಾತ್ರ ಇತರರು ಕಟ್ಟಿದ್ದಲ್ಲ, ಓರ್ವ ದೇವದಾಸಿ ಕುಲದ ಹೆಣ್ಣುಮಗಳು ಕಟ್ಟಿದ್ದು, ಏನು ಸೋಜಿಗ ! ತಿರುವಯ್ಯಾರಿಗೆ ಭೇಟಿಕೊಟ್ಟಿದ್ದ ಮಾಲನ್ ಎನ್ನುವ ತಮಿಳು ಬರಹಗಾರ ಅಲ್ಲಿನ ತ್ಯಾಗರಾಜರ ವೃಂದಾವನವನ್ನು ನೋಡಿ ಬರೆದ ಸಾಲುಗಳಿವು. ಇದನ್ನು ಡಾ॥ ಜಗದೀಶ್ ಕೊಪ್ಪ 'ಗಟ್ಟಿ ದನಿಯ ದಿಟ್ಟ ಕಲಾವಿದೆ ಬೆಂಗಳೂರು ನಾಗರತ್ನ' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಇಂತಹ ಮಹಾನ್ ಸಂಗೀತ ವಿದುಷಿಯ ಜೀವನ ಕಥನ 'ಕಪಿಲೆ ಹರಿದಳು ಕಡಲಿಗೆ' ಕಾದಂಬರಿ. ನಾಗರತ್ನಮ್ಮ ಸಾವನ್ನಪ್ಪಿದಾಗ ಆರಾಧನೆಯ ದಿನಗಳಲ್ಲಿ ಉತ್ಸವಮೂರ್ತಿಯನ್ನು ಇಟ್ಟು ಮೆರೆಸುತ್ತಿದ್ದ ರಥದ ಮೇಲೆ ಅವರ ಪವಿತ್ರ ಪಾರ್ಥಿವ ಶರೀರವನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿದರು. ಜನರನ್ನು ನಿಯಂತ್ರಿಸಲು ಪೊಲೀಸರು ಹರಸಾಹಸ ಪಡಬೇಕಾಯಿತು.

**ಚಿನ್ನಸ್ವಾಮಿ ವಡ್ಡಗೆರೆ**
'ಸ್ಪಂದನ', ನಂ. ೧೧೪೬, ೪ನೇ ಮುಖ್ಯರಸ್ತೆ, ೨ನೇ ಕ್ರಾಸ್
ಪಡುವಣ ರಸ್ತೆ, ಟಿ. ಕೆ. ಲೇಔಟ್, ಮೈಸೂರು – ೫೭೦ ೦೨೩

# 'ದಲಿತ' ಪದ ಬಳಕೆಗೆ ಮಿತಿ ಬೇಕು

**ಪ್ರಕಾಶ ದೇಶಪಾಂಡೆ**

ರಾಜಕೀಯದಲ್ಲಿಂದು ಮಿತಿಮೀರಿ ಬಳಕೆಯಾಗುತ್ತಿರುವ ಪದ "ದಲಿತ". ರಾಜಕಾರಣದ ಜತೆಜತೆಗೆ ಮಾಧ್ಯಮಗಳೂ ಕೂಡ ಈ ಪದವನ್ನು ಮಿತಿಮೀರಿ ಬಳಸುತ್ತಿರುವದರಿಂದ "ದಲಿತ" ಪದದ ಘನತೆ, ಗೌರವಕ್ಕೆ ಚ್ಯುತಿ ಉಂಟಾಗುತ್ತಿದೆ. ಆ ಮೂಲಕ ದಲಿತ ಜನಸಮುದಾಯವನ್ನು ಮೇಲೆತ್ತುವ ಬದಲು ಮತ್ತಷ್ಟು ಕೆಳಮಟ್ಟಕ್ಕೆ ತಳ್ಳುವ ಹಾಗೂ ಅವರನ್ನು ಪ್ರತ್ಯೇಕತೆಯಿಂದ ನೋಡುವ ಕಾರ್ಯವನ್ನು ಮಾಡಲಾಗುತ್ತಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಈಗಿನ ದಲಿತ ಸಮುದಾಯವನ್ನು ಬೇರೆ ಬೇರೆ ಜಾತಿವಾಚಕಗಳಿಂದ ಗುರುತಿಸಿ ಅವೇ ಹೆಸರಿನಿಂದ ಕರೆಯಲಾಗುತ್ತಿತ್ತು. ಆದರೆ ಗಾಂಧೀಜಿಯವರು ತಳ ಸಮುದಾಯದವರನ್ನು "ಹರಿಜನರು" ಎಂದು ಕರೆದು ಅವರಿಗೊಂದು ವಿಶೇಷ ಸ್ಥಾನಮಾನ ಕಲ್ಪಿಸಿದರು. ವಿಶೇಷವಾಗಿ ಈಗ ಪರಿಶಿಷ್ಟರೆಂದು ಗುರುತಿಸಿರುವವರನ್ನೇ ಹರಿಜನರೆಂದು ಕರೆಯಲಾಯಿತು. ಹರಿಜನರು ಎಂದರೆ "ಹರಿಯ ಜನರು" (ದೇವರ ಮಕ್ಕಳು) ಎಂಬರ್ಥದಲ್ಲಿ ಗುರುತಿಸಲಾಯಿತು. ಇದು ಜನರೂಢಿಯ ಶಬ್ದವಾಗಿ ಸಹಜವಾಗಿ ಎಲ್ಲ ಭಾಷೆಗಳಲ್ಲೂ ಸ್ಥಾನ ಪಡೆದುಕೊಂಡಿತು. ಈ ಜನಾಂಗಕ್ಕೆ ವಿಶೇಷ ಗೌರವ ನೀಡಲೆಂದೇ ಗಾಂಧೀಜಿಯವರು "ಹರಿಜನ" ಪತ್ರಿಕೆಯನ್ನೂ ಕೂಡ ಪ್ರಾರಂಭಿಸಿದ್ದರು. ಇದು ಆಗಿನ ದಿನಗಳಲ್ಲಿ ಜನಪ್ರಿಯವೂ ಆಗಿತ್ತು.

ಸ್ವಾತಂತ್ರ್ಯಾನಂತರವೂ "ಹರಿಜನ" ಪದ ಬಹುವರ್ಷಗಳವರೆಗೂ ರೂಢಿಯಲ್ಲಿತ್ತು. ಇತ್ತೀಚಿನ ಮೂವತ್ತು, ನಲವತ್ತು ವರ್ಷಗಳಲ್ಲಿ "ಹರಿಜನ" ಪದಕ್ಕೆ ಪರ್ಯಾಯವಾಗಿ "ದಲಿತ" ಪದ ರೂಪುಗೊಂಡಿತು. ಈಗಂತೂ "ಹರಿಜನ" ಪದ ಮಾಯವಾಗಿ "ದಲಿತ" ಪದವೇ ಸರ್ವವ್ಯಾಪಿಯಾಗಿಬಿಟ್ಟಿದೆ. ದಲಿತರು ಎಂದರೆ ಮತ್ತದೇ ಪರಿಶಿಷ್ಟ ವರ್ಗದವರು ಎಂದು ಗುರುತಿಸುವಂತಾಗಿದೆ. ಇದನ್ನೀಗ ಆ ಸಮುದಾಯದವರೂ ಸೇರಿದಂತೆ ಸರ್ಕಾರ ಹಾಗೂ ಇಡೀ ಸಮಾಜ ಒಪ್ಪಿಕೊಂಡಿದೆ. "ದಲಿತ" ಪದ ಈಗ ಗೌರವಪೂರ್ಣವೂ ಆಗಿದೆ. ಅಚ್ಚರಿ ಎಂದರೆ ಸಂವಿಧಾನ ಶಿಲ್ಪಿ ಡಾ॥ ಅಂಬೇಡಕರ ಅವರು ತಮ್ಮ ಜೀವನದಲ್ಲಿ ಎಂದಿಗೂ "ದಲಿತ" ಪದವನ್ನು ಬಳಸಿರಲಿಲ್ಲ. ಅಷ್ಟೇ ಅಲ್ಲ ತಮ್ಮ ಲೇಖನ, ಸಾಹಿತ್ಯದಲ್ಲೂ "ದಲಿತ" ಪದವನ್ನು ಬರೆದಿರಲಿಲ್ಲ.

ಆದರೆ ಇತ್ತೀಚಿನ ದಿನಗಳಲ್ಲಿ "ದಲಿತ" ಪದದ ಬಳಕೆ ಮಿತಿಮೀರಿ ಅದರ ಗೌರವಕ್ಕೆ ಧಕ್ಕೆ ಬರುವಂತಾಗಿದೆ. ರಾಜ್ಯದ ಮುಂದಿನ ಮುಖ್ಯಮಂತ್ರಿ ಯಾರಾಗಬೇಕೆಂದು ಸೂಚಿಸಬೇಕಾದರೆ ಕಾಂಗ್ರೆಸ್ಸಿನಿಂದ ಮಲ್ಲಿಕಾರ್ಜುನ ಖರ್ಗೆ ಅಥವಾ ಡಾ॥ ಜಿ. ಪರಮೇಶ್ವರ ಅವರ ಹೆಸರು ಹೇಳುವ ಬದಲು ದಲಿತ ಖರ್ಗೆ ಎಂದೋ ಅಥವಾ ದಲಿತ ಪರಮೇಶ್ವರ ಎಂದೋ ಹೇಳಲಾಗುತ್ತಿದೆ. ಮಾಧ್ಯಮಗಳಂತೂ "ದಲಿತ" ಪದಕ್ಕೆ ಹೆಚ್ಚು ಒತ್ತುನೀಡಿ ಇವರಿಬ್ಬರನ್ನು ಹೆಸರಿಸುತ್ತವೆ. ಅದೇ ರೀತಿ ಕೆಪಿಸಿಸಿ ಅಧ್ಯಕ್ಷತೆಗೆ ಹೆಸರಿಸಬೇಕಾದರೆ ಮುನಿಯಪ್ಪನವರೂ ಸೇರಿದಂತೆ ಖರ್ಗೆ ಹಾಗೂ ಡಾ॥ ಪರಮೇಶ್ವರ ಅವರನ್ನು ಮತ್ತೆ ಮತ್ತೆ ದಲಿತ ಎಂದೇ ಸಂಬೋಧಿಸಲಾಗುತ್ತಿತ್ತು. ಇವರುಗಳು ಕಾಂಗ್ರೆಸ್ ನಾಯಕರು. ಇವರನ್ನು ಹಿರಿಯ ಕಾಂಗ್ರೆಸ್ಸಿಗರೆಂದು ಏಕೆ ಹೆಸರಿಸುವದಿಲ್ಲ ? ಹಾಗೆಂದು ಏಕೆ ಸಂಬೋಧಿಸುವದಿಲ್ಲ ? ದಲಿತರೆಂದೇ ಏಕೆ ಹೆಸರಿಸಲಾಗುತ್ತಿದೆ ? ಇದರ ಹಿಂದಿರುವ ಹುನ್ನಾರವೇನು? ಸಮಾಜದಿಂದ ಇವರನ್ನು ಪ್ರತ್ಯೇಕಿಸಿ ನೋಡುವುದೇಕೆ ? ಜನರು ಇವರನ್ನು ಪ್ರತ್ಯೇಕವಾಗಿ ನೋಡಬೇಕೆನ್ನುವ ಕುತಂತ್ರ ಏನಾದರೂ ಇದರ ಹಿಂದಿದೆಯೇ ?

ಈ ಸ್ಥಿತಿ ಕೇವಲ ಕರ್ನಾಟಕಕ್ಕೆ ಸೀಮಿತವಲ್ಲ. ರಾಷ್ಟ್ರಮಟ್ಟದಲ್ಲಿಯೂ ಇಂಥ ಸ್ಥಿತಿ ಇದೆ. ಉತ್ತರ ಪ್ರದೇಶದ ಮಾಜಿ ಮುಖ್ಯಮಂತ್ರಿ ಮಾಯಾವತಿ ಅವರನ್ನು ದಲಿತ ಮುಖ್ಯಮಂತ್ರಿ ಎಂದಿದ್ದಿದೆ. ಕಾನ್ಶಿರಾಮ ಅವರನ್ನು ದಲಿತ ಧುರೀಣ ಎಂದು ಕರೆದಿದ್ದಿದೆ. ಮಾಜಿ ಉಪಪ್ರಧಾನಿ ಜಗಜೀವನರಾಮ್ ಅವರನ್ನು ದಲಿತ ಎಂದು ಸಂಬೋಧಿಸಿದ್ದಿದೆ. ಅಷ್ಟೇ ಏಕೆ, ಡಾ॥ ಅಂಬೇಡಕರ ಅವರನ್ನು ಈಗಲೂ ದಲಿತ ನಾಯಕ ಎಂದೇ ಸಂಬೋಧಿಸಲಾಗುತ್ತಿದೆ. ಇವರೆಲ್ಲ ರಾಷ್ಟ್ರೀಯ ನಾಯಕರು. ಇವರಿಗೆ ಜಾತಿ, ಧರ್ಮ ಆರೋಪಿಸುವದೇ ತಪ್ಪು. ಕೆಲ ವರ್ಷಗಳ ಹಿಂದೆ ಬಿಜೆಪಿಯ ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಓರ್ವರನ್ನು ದಲಿತ ಅಧ್ಯಕ್ಷರೆಂದೇ ಕರೆಯಲಾಗುತ್ತಿತ್ತು.

ರಾಜ್ಯದಲ್ಲಿ ಬೇರೆ ಬೇರೆ ಜಾತಿಗಳವರು ಮುಖ್ಯಮಂತ್ರಿಗಳಾಗಿ ಹೋಗಿದ್ದಾರೆ. ಕೆಪಿಸಿಸಿ ಅಧ್ಯಕ್ಷರಾಗಿದ್ದಾರೆ. ಅವರನ್ನಾರೂ ಅವರವರ ಜಾತಿಗಳಿಂದ ಹೆಸರಿಸಲಾಗಿಲ್ಲ. ನಿಜಲಿಂಗಪ್ಪ, ವೀರೇಂದ್ರ ಪಾಟೀಲ, ಯಡಿಯೂರಪ್ಪ ಅವರನ್ನು ಲಿಂಗಾಯತ ಮುಖ್ಯಮಂತ್ರಿಗಳೆಂದು ಸಂಬೋಧಿಸುವದಿಲ್ಲ. ಮಾಜಿ ಮುಖ್ಯಮಂತ್ರಿ

ರಾಷ್ಟ್ರೀಯ ಹಾಗೂ ರಾಜ್ಯ ಧುರೀಣರು ಊಟ, ಉಪಾಹಾರ ಮಾಡಲು ದಲಿತರ ಮನೆಗಳಿಗೆ ಹೋಗುವದಿದೆ. ಇಂಥದಕ್ಕೆಲ್ಲ ಭಾರಿ ಪ್ರಚಾರ ಪಡೆದುಕೊಳ್ಳುವದಿದೆ. ಪ್ರಧಾನಿ ನರೇಂದ್ರ ಮೋದಿ, ಕಾಂಗ್ರೆಸ್ ಉಪಾಧ್ಯಕ್ಷ ರಾಹುಲ್ ಗಾಂಧಿ ಅವರುಗಳು ದಲಿತರ ಮನೆಗಳಿಗೆ ಹೋಗಿ ಊಟ, ಉಪಾಹಾರ ಮಾಡುವುದು ಅವರವರ ಪಕ್ಷಗಳಿಗೆ ಒಂದು ಗಿಮಿಕ್, ಅಷ್ಟೆ . ಅವರು ದಲಿತರ ಮನೆಗಳಿಗೆ ಹೋದುದನ್ನೇ ಮಾಧ್ಯಮಗಳು ದೊಡ್ಡದಾಗಿ ಬಿಂಬಿಸುತ್ತವೆ. ಅದರಿಂದ ಸಾಧಿಸುವದೇನೂ ಇರುವದಿಲ್ಲ. ಇತ್ತೀಚೆಗೆ ರಾಜ್ಯ ಬಿಜೆಪಿ ಅಧ್ಯಕ್ಷರು ದಲಿತರೊಬ್ಬರ ಮನೆಗೆ ಊಟಕ್ಕೆ ಹೋಗಿ ಹೋಟೆಲ್‌ನಿಂದ ತರಿಸಿದ ಉಪಾಹಾರ ತಿಂದು ಎಡವಟ್ಟು ಮಾಡಿಕೊಂಡರು. ಆ ತಪ್ಪಿಗೆ ಮತ್ತೆ ದಲಿತರೊಬ್ಬರ ಮನೆಗೆ ಊಟಕ್ಕೆ ಹೋಗಿ ಮನೆಯಲ್ಲಿ ಮಾಡಿದ್ದನ್ನೇ ಮನಸ್ಸಿಲ್ಲದಿದ್ದರೂ ಉಂಡು ಬಂದರು. ಮಾಧ್ಯಮಗಳು ಇದನ್ನು ಬಹುವಾಗಿ ಪ್ರಸಾರಿಸಿದವು. ದಲಿತರ ಮನೆಗೆ ಊಟಕ್ಕೋ ಅಥವಾ ಫಲಾಹಾರಕ್ಕೋ ಹೋಗುವದರಲ್ಲಿ ವಿಶೇಷವೇನಿದೆ ? ದಲಿತರ ಮನೆಗೆ ಹೋಗುವದರಲ್ಲಿ ತಪ್ಪೇನಿದೆ ? ಮಾಧ್ಯಮಗಳು ಇದನ್ನು ಅಷ್ಟೊಂದು ದೊಡ್ಡದಾಗಿ ಪ್ರಕಟಿಸುವ/ ಪ್ರಸಾರಿಸುವ ಅಗತ್ಯವೇನಿದೆ ?

ಗುಂಡೂರಾವ್ ಅವರನ್ನು ಬ್ರಾಹ್ಮಣ ಮುಖ್ಯಮಂತ್ರಿ ಎಂದು, ಬಂಗಾರಪ್ಪ ಅವರನ್ನು ಈಡಿಗ ಮುಖ್ಯಮಂತ್ರಿ ಎಂದು, ಕುಮಾರಸ್ವಾಮಿ ಅವರನ್ನು ಒಕ್ಕಲಿಗ ಮುಖ್ಯಮಂತ್ರಿ ಎಂದು, ಧರಮ್‌ಸಿಂಗ್ ಅವರನ್ನು ರಜಪೂತ ಮುಖ್ಯಮಂತ್ರಿ ಎಂದು ಕರೆಯಲಿಲ್ಲ, ಗುರುತಿಸಿಲ್ಲ. ಈಗಿನ ಸಿದ್ದರಾಮಯ್ಯ ಅವರನ್ನು ಕುರುಬ ಮುಖ್ಯಮಂತ್ರಿ ಎಂದು ಕರೆಯಲಾಗುತ್ತಿಲ್ಲ. ಡಿ. ಕೆ. ಶಿವಕುಮಾರ್ ಅವರನ್ನು ಒಕ್ಕಲಿಗ ಎಂದು, ಎಸ್. ಆರ್. ಪಾಟೀಲ, ಎಮ್. ಬಿ. ಪಾಟೀಲ ಅವರ ಹೆಸರುಗಳು ಕೆಪಿಸಿಸಿಗೆ ಪ್ರಸ್ತಾಪವಾದರೆ ಲಿಂಗಾಯತ ಎಂದು ವಿಶೇಷಣ ಹಚ್ಚುವದಿಲ್ಲ. ಹೀಗಿರುವಾಗ ಖರ್ಗೆ, ಡಾ॥ ಪರಮೇಶ್ವರ ಅವರ ಹೆಸರುಗಳು ಪ್ರಸ್ತಾಪವಾದಾಗ ಅವರನ್ನಷ್ಟೇ ಏಕೆ ದಲಿತ ಎಂದು ಕರೆಯಲಾಗುತ್ತದೆ?

ಇಂಥ ಪರಿಸ್ಥಿತಿ ಮುಸ್ಲಿಮರಿಗಿಲ್ಲದಿರುವದು ಸಮಾಧಾನಕರ ಸಂಗತಿ. ರಾಷ್ಟ್ರದ ಪ್ರಥಮ ಶಿಕ್ಷಣ ಮಂತ್ರಿ ಡಾ॥ ಅಬುಲ್ ಕಲಾಮ್ ಆಜಾದ್, ಕಾನೂನು ಸಚಿವರಾಗಿದ್ದ ಮೊಹಮ್ಮದ್ ಕರೀಮ್ ಛಗ್ಲಾ, ರಾಷ್ಟ್ರಪತಿಗಳಾಗಿದ್ದ ಡಾ॥ ಜಾಕೀರ್ ಹುಸೇನ್, ಫಕರುದ್ದೀನ್ ಅಲಿ ಅಹಮ್ಮದ್, ಅಬ್ದುಲ್ ಕಲಾಮ್ ಅವರನ್ನು ಪುಣ್ಯಕ್ಕೆ ದೇಶ ಮುಸ್ಲಿಮ್ ಮಂತ್ರಿ ಎಂದೋ ಅಥವಾ ಮುಸ್ಲಿಮ್ ರಾಷ್ಟ್ರಪತಿ ಎಂದೋ ಕರೆಯಲಿಲ್ಲ. ಆದರೆ ಇಂಥ ವಿಶೇಷಣಗಳು ದಲಿತ ಸಮುದಾಯ ದವರಿಗಷ್ಟೇ ಏಕೆ ಹಚ್ಚಲಾಗುತ್ತಿದೆ ಎಂಬುದು ಅರ್ಥ ವಾಗುತ್ತಿಲ್ಲ. ದಲಿತರನ್ನು ದಲಿತರನ್ನಾಗಿಯೇ ಇಡುವ ಪರಿಪಾಠ ಈಗಲೂ ಮುಂದುವರಿದುಕೊಂಡು ಬರುತ್ತಿದೆಯೇ ಎಂಬ ಸಂದೇಹ ಕಾಡುವಂತಾಗಿದೆ. ಅವರನ್ನು ದಲಿತರೆಂದು ಸಂಬೋಧಿಸದೆ ಸಮಾಜ ವಾಹಿನಿಯಲ್ಲಿ ಒಂದಾಗಿಸುವ ಪ್ರಯತ್ನ ಈಗ ನಡೆಯಬೇಕಾಗಿದೆ. ಅವರ ಪ್ರಮುಖರನ್ನು ಜಾತಿ ವಿಶೇಷಣದಿಂದ ದೂರವಿಟ್ಟು ಇತರ ನಾಯಕರು, ಧುರೀಣರನ್ನು ಸಂಬೋಧಿಸುವಂತೆ ಇವರನ್ನೂ ಹಾಗೆಯೇ ಕರೆಯಬಹುದಲ್ಲ? ರಾಜಕೀಯ ಹಾಗೂ ಮಾಧ್ಯಮ ಇವೆರಡೂ ಈ ವಿಷಯದಲ್ಲಿ ಒಂದು ನಿರ್ಣಯ ಕೈಗೊಳ್ಳಬೇಕಾದ ಅವಶ್ಯಕತೆ ಇಂದಿದೆ.

ಇನ್ನು ರಾಷ್ಟ್ರೀಯ ಹಾಗೂ ರಾಜ್ಯ ಧುರೀಣರು ಊಟ, ಉಪಾಹಾರ ಮಾಡಲು ದಲಿತರ ಮನೆಗಳಿಗೆ ಹೋಗುವದಿದೆ. ಇಂಥದಕ್ಕೆಲ್ಲ ಭಾರಿ ಪ್ರಚಾರ ಪಡೆದುಕೊಳ್ಳುವದಿದೆ. ಪ್ರಧಾನಿ ನರೇಂದ್ರ ಮೋದಿ, ಕಾಂಗ್ರೆಸ್ ಉಪಾಧ್ಯಕ್ಷ ರಾಹುಲ್ ಗಾಂಧಿ ಅವರುಗಳು ದಲಿತರ ಮನೆಗಳಿಗೆ ಹೋಗಿ ಊಟ, ಉಪಾಹಾರ ಮಾಡುವುದು ಅವರವರ ಪಕ್ಷಗಳಿಗೆ ಒಂದು ಗಿಮಿಕ್, ಅಷ್ಟೆ. ಅವರು ದಲಿತರ ಮನೆಗಳಿಗೆ ಹೋದುದನ್ನೇ ಮಾಧ್ಯಮಗಳು ದೊಡ್ಡದಾಗಿ ಬಿಂಬಿಸುತ್ತವೆ. ಅದರಿಂದ ಸಾಧಿಸುವದೇನೂ ಇರುವದಿಲ್ಲ. ಇತ್ತೀಚೆಗೆ ರಾಜ್ಯ ಬಿಜೆಪಿ ಅಧ್ಯಕ್ಷರು ದಲಿತರೊಬ್ಬರ ಮನೆಗೆ ಊಟಕ್ಕೆ ಹೋಗಿ ಹೋಟೆಲ್‌ನಿಂದ ತರಿಸಿದ ಉಪಾಹಾರ ತಿಂದು ಎಡವಟ್ಟು ಮಾಡಿಕೊಂಡರು. ಆ ತಪ್ಪಿಗೆ ಮತ್ತೆ ದಲಿತರೊಬ್ಬರ ಮನೆಗೆ ಊಟಕ್ಕೆ ಹೋಗಿ ಮನೆಯಲ್ಲಿ ಮಾಡಿದ್ದನ್ನೇ ಮನಸ್ಸಿಲ್ಲದಿದ್ದರೂ ಉಂಡು ಬಂದರು. ಮಾಧ್ಯಮಗಳು ಇದನ್ನು ಬಹುವಾಗಿ ಪ್ರಸಾರಿಸಿದವು. ದಲಿತರ ಮನೆಗೆ ಊಟಕ್ಕೋ ಅಥವಾ ಫಲಾಹಾರಕ್ಕೋ ಹೋಗುವದರಲ್ಲಿ ವಿಶೇಷವೇನಿದೆ? ದಲಿತರ ಮನೆಗೆ ಹೋಗುವದರಲ್ಲಿ ತಪ್ಪೇನಿದೆ? ಮಾಧ್ಯಮಗಳು ಇದನ್ನು ಅಷ್ಟೊಂದು ದೊಡ್ಡದಾಗಿ ಪ್ರಕಟಿಸುವ/ಪ್ರಸಾರಿಸುವ ಅಗತ್ಯವೇನಿದೆ ? ಒಂದು ವೇಳೆ ಯಡಿಯೂರಪ್ಪ ಅವರು ತಮ್ಮವರೇ ಆದ ಗೋವಿಂದ ಕಾರಜೋಳ ಅವರಲ್ಲಿ ಊಟಕ್ಕೋ, ಉಪಾಹಾರಕ್ಕೋ ಹೋಗಿದ್ದರೆ ಮಾಧ್ಯಮಗಳು ಅದನ್ನು ಮಹತ್ವದ ಸುದ್ದಿಯನ್ನಾಗಿಸು ತ್ತಿದ್ದವೆ ? ಇಂಥ ಪ್ರಕರಣಗಳಲ್ಲೂ ಕೂಡ ದಲಿತರನ್ನು ಮಾಧ್ಯಮಗಳು ಕೆಳಮಟ್ಟದಿಂದ ನೋಡುತ್ತವೆಯೇ ಹೊರತಾಗಿ ಅವರಿಗೆ ವಿಶೇಷತೆಯನ್ನೇನೂ ನೀಡುವದಿಲ್ಲ. ರಾಜಕೀಯ ಧುರೀಣರಿಗೆ ಇದೊಂದು ಗಿಮಿಕ್ ಆದರೆ ಮಾಧ್ಯಮಗಳಿಗೆ ಒಂದು ಸುದ್ದಿ ಆಹಾರ, ಅಷ್ಟೆ. ಇದೆಲ್ಲ ಪ್ರಚಾರ, ಮತಕ್ಕಾಗಿ ಮಾಡುವದು ಎಂದು ಜನರಿಗೆ ಗೊತ್ತಿದ್ದರೂ ಇಂಥದ್ದನ್ನೆಲ್ಲ ಏಕೆ ಸಹಿಸಿಕೊಂಡಿದ್ದಾರೆ ? ಈ ಬಗ್ಗೆ ಯಾರೂ ಏಕೆ ದನಿ ಎತ್ತುವದಿಲ್ಲ ? ಪ್ರಜ್ಞಾವಂತ ಮಾಧ್ಯಮಗಳು ಇದಕ್ಕೆಲ್ಲ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿರುವದಾದರೂ ಏಕೆ ?

ಈಗಂತೂ ಬಿಜೆಪಿ ತನ್ನ ದಿನಚರಿಯನ್ನು ದಲಿತರ ಕೇರಿಗಳಿಂದಲೇ ಪ್ರಾರಂಭಿಸುತ್ತಿದೆ. ಇದು ನಾಟಕ ಅಥವಾ ಗಿಮಿಕ್ ಅಲ್ಲವೆಂದೂ ದಲಿತರ ಸಮಸ್ಯೆ ಗಳನ್ನು ಅರಿಯಲು ತಾವು ದಲಿತರ ಕೇರಿಗಳಿಗೆ ಭೇಟಿ ನೀಡುತ್ತಿರುವದಾಗಿಯೂ ದಲಿತರ ಮನೆಗಳಲ್ಲಿ ಊಟ ಉಪಾಹಾರ ಮಾಡುತ್ತಿರುವದಾಗಿಯೂ ಬಿಜೆಪಿ ರಾಜ್ಯಾಧ್ಯಕ್ಷ, ಸಂಸದ ಯಡಿಯೂರಪ್ಪ ಇದಕ್ಕೆ ಸ್ಪಷ್ಟೀಕರಣ ನೀಡಿದ್ದಾರೆ. ಹಾಗಾದರೆ ಈ ಹಿಂದಿನ ಐದು ವರ್ಷಗಳು ಇವರ ಅಧಿಕಾರಾವಧಿಯಲ್ಲಿ ಮಾಡಿದ್ದೇನು ? ತಮ್ಮ ಆಡಳಿತದಲ್ಲಿ ಇವರಿಗೆ ದಲಿತರ ಸಮಸ್ಯೆಗಳು ಅರಿವಿಗೆ ಬರಲಿಲ್ಲವೆ ? ಆಗ ಇವರಿಗೆ ದಲಿತರ ಪರ ಕಾಳಜಿ ಇರಲಿಲ್ಲವೆ ? ಆಗ ಇವರಿಗಿರದ ದಲಿತ ಕಾಳಜಿ ಈಗೇಕೆ ಒಮ್ಮೆಲೇ ನೆನಪಾಯಿತು ? ವಿಧಾನಸಭೆ ಚುನಾವಣೆ ಹೊಸ್ತಿಲಲ್ಲಿರುವಾಗಲೇ ಇವರಿಗೆ ದಲಿತ ಪರ ಕಾಳಜಿ ಧುತ್ತೆಂದು ನೆನಪಾಯಿತೆ? ಇದಕ್ಕೆ ಬಿಜೆಪಿಗರು ಉತ್ತರಿಸುವದೇನು?

ಒಂದೆಡೆ ನಾವು ಜಾತ್ಯತೀತ ರಾಷ್ಟ್ರ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ತಮ್ಮದು ಜಾತ್ಯತೀತ ಪಕ್ಷ ಎಂದು ಎಲ್ಲ ಪಕ್ಷಗಳೂ ಕೂಡ ಹೆಮ್ಮೆಯಿಂದ ಸಾರಿಕೊಳ್ಳುತ್ತವೆ. ಆದರೆ ಅವುಗಳ ಅಂತರಾಳದಲ್ಲಿ ಜಾತಿ ಅತಿಯಾಗಿ ಅಡಗಿರುತ್ತದೆ. ಒಂದು ಜಾತಿಯವರು ಮೇಲು, ಮತ್ತೊಂದು ಜಾತಿಯವರು ಕೀಳು ಎಂಬ ತಾರತಮ್ಯ ಸಮಾಜದಲ್ಲಿ ಜೀವಂತವಾಗಿರುವದನ್ನು ಜಾತ್ಯತೀತ ಎಂದು ಕರೆಯಲು ಹೇಗೆ ಸಾಧ್ಯ ? ಅದೇ ಕಾಲಕ್ಕೆ ದಲಿತರನ್ನಷ್ಟೇ ಜಾತಿವಾಚಕವಾಗಿ ಕಾಣುತ್ತೇವೆ. ಜಾತಿರೂಪದಿಂದ ಸಂಬೋಧಿಸುತ್ತೇವೆ. ಇದೆಂಥ ಜಾತ್ಯತೀತತೆ ನಮ್ಮದು ? ಅವರ ಬಗೆಗಿನ ನಮ್ಮೊಳಗಿನ ಕೀಳರಿಮೆ ಇನ್ನೂ ಕಡಿಮೆಯಾಗಿಲ್ಲ ಎನ್ನುವದಕ್ಕೆ ಇದು ಸಾಕ್ಷಿ. ಡಾ॥ ಅಂಬೇಡಕರ, ಖರ್ಗೆ, ಡಾ॥ ಪರಮೇಶ್ವರ ಅವರನ್ನು ಇನ್ನಾದರೂ "ದಲಿತ" ವಿಶೇಷಣದೊಂದಿಗೆ ಗುರುತಿಸಿ ಸಂಬೋಧಿಸುವದನ್ನು ಬಿಡಬೇಕು. ಈ ದಿಶೆಯಲ್ಲಿ ಮಾಧ್ಯಮಗಳೇ ಮೊಟ್ಟಮೊದಲು ಈ ಕಾರ್ಯ ಮಾಡಬೇಕು. ಡಾ॥ ಅಂಬೇಡಕರ ಅವರನ್ನು ಜನನಾಯಕ ಎಂದೇ ಕರೆಯಬೇಕು. ಖರ್ಗೆ, ಡಾ॥ ಪರಮೇಶ್ವರ, ಮುನಿಯಪ್ಪ ಅವರನ್ನು ಹಿರಿಯ ಕಾಂಗ್ರೆಸ್ಸಿಗರೆಂದೋ ಅಥವಾ ಕಾಂಗ್ರೆಸ್ ಧುರೀಣರೆಂದೋ ಸಂಬೋಧಿಸ ಬೇಕೇ ಹೊರತಾಗಿ ದಲಿತ ವಿಶೇಷಣದಿಂದಲ್ಲ ಎನ್ನುವದನ್ನು ಮಾಧ್ಯಮದವರು ತಿಳಿದುಕೊಳ್ಳಬೇಕು. ಈ ವಿಷಯದಲ್ಲಿ ಜನರಿಗೆ ತಿಳುವಳಿಕೆ ಕೊಡುವ ಕೆಲಸವನ್ನೂ ಮಾಧ್ಯಮಗಳು ಮಾಡಬೇಕೇ ವಿನಾ ಜಾತೀಯತೆಯನ್ನು ಸಮಾಜದಲ್ಲಿ ಹರಡದಂತೆ ನೋಡಿಕೊಳ್ಳಬೇಕು. ಈ ನಿಟ್ಟಿನಲ್ಲಿ ಮಾಧ್ಯಮಗಳ ಜವಾಬ್ದಾರಿ ಹೆಚ್ಚಾಗಿದೆ ಎನ್ನುವದನ್ನು ಅವು ತಿಳಿದು ಕೊಳ್ಳಬೇಕು. ಈ ಕೆಲಸ ಮಾಧ್ಯಮದವರಿಂದಲೇ ಆರಂಭವಾಗಬೇಕು. ಅಂತೆಯೇ ಮಾಧ್ಯಮಗಳು "ದಲಿತ" ಪದವನ್ನು ಒಂದು ಮಿತಿಗೊಳಪಡಿಸಿ ಬಳಸು ವದನ್ನು ರೂಢಿ ಮಾಡಿಕೊಳ್ಳಬೇಕು. ಇಲ್ಲವಾದರೆ ದಲಿತರೇ ಪಾಠ ಕಲಿಸುವ ಪ್ರಸಂಗವನ್ನು ಮಾಧ್ಯಮ ಗಳು, ರಾಜಕಾರಣಿಗಳು ತಂದುಕೊಳ್ಳಬಾರದು.

**ಪ್ರಕಾಶ ದೇಶಪಾಂಡೆ**
ಹುಕ್ಕೇರಿ

## ಅಭಿನಂದನೆಗಳು...

'ನವಕರ್ನಾಟಕ' ಹಾಗೂ 'ಹೊಸತು'ವಿನ ಲೇಖಕ ಬಳಗದವರಾದ, ಕುವೆಂಪು ಭಾಷಾ ಭಾರತಿಯ ಅಧ್ಯಕ್ಷರಾಗಿ ಆಯ್ಕೆಯಾದ ಕೆ. ಮರುಳಸಿದ್ದಪ್ಪ, ಸದಸ್ಯರಾಗಿ ನೇಮಕರಾದ ತಾರಿಣಿ ಶುಭದಾಯಿನಿ, ಎಂ. ಎಸ್. ಶಶಿಕಲಾ ಗೌಡ, ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ ನೇಮಕರಾದ ಡಾ॥ ವಸುಂಧರಾ ಭೂಪತಿ, ಸದಸ್ಯರಾದ ದ್ವಾರನಕುಂಟೆ ಪಾತಣ್ಣ, ಕವಿತಾ ರೈ, ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ॥ ಅರವಿಂದ ಮಾಲಗಿತ್ತಿ, ಸದಸ್ಯರಾದ ಡಾ॥ ರಾಜಶೇಖರ ಮಠಪತಿ, ರಂಗನಾಥ ಕಂಟನಕುಂಟೆ, ಸಾವಿತ್ರಿ ಮುಜುಮದಾರ್, ಬೈರಮಂಗಲ ರಾಮೇಗೌಡ, ಪ್ರಶಾಂತ ನಾಯಕ್ ಹಾಗೂ ನಾಟಕ ಅಕಾಡೆಮಿಯ ಸದಸ್ಯರಾದ ಗಣೇಶ ಅಮೀನಗಡ ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.




# ದೇವರು ಖಾಲಿಯಾದನು

ಕೆ. ಎಸ್. ರವಿಕುಮಾರ್

"ಯಾವನೋ ಅದು, ಮುಠ್ಠಾಳ ಮುಂಡೇಮಗ... ನನ್ನನ್ನು ದೂಕಿದ್ದು...!? ನಿನ್ ಮನೆ ಹಾಳಾಗ, ನಿನ್ ಕುಲ ನಾಶನಾಗ, ಮಡಿಶುದ್ಧನಾಗಿ ಬಂದಿದ್ದೆ. ಮತ್ತೆ ಮನೆಗ್ಹೋಗಿ ಮಿಂದು ಬರಬೇಕು. ಥಶ್ಚ್... ಥೇ...!" ಅರವತ್ತರ ಸನಿಹವಿದ್ದ ವಿಷ್ಣುಪ್ರಿಯ ಜೋಯಿಸರು ಗಟಾರದ ಕೊಚ್ಚೆಯಲ್ಲಿ ನಿಂತೇ ಶಪಿಸುತ್ತಿದ್ದರು. ಒಂದು ಮಗ್ಗುಲಾಗಿ ಬಿದ್ದಿದ್ದರಿಂದ ಕಿವಿಯ ತನಕ ದಢೂತಿ ಶರೀರ ಕೊಚ್ಚೆಮಯವಾಗಿತ್ತು. ಎಡಗೈಯಿಂದ ಬಲಗೆನ್ನೆಗಂಟಿದ ಹೊಲಸನ್ನು ಒರೆಸಿಕೊಂಡು ಉಗ್ರ ಸ್ವರೂಪಿಯಾಗಿದ್ದರು. ಶ್ವೇತಶುಭ್ರ ಪಂಚೆ ಟಾರು ಮೆತ್ತಿಕೊಂಡಂತೆ ಎಳೆ ಬಿಸಿಲಿಗೆ ಮಿರ ಮಿರ ಎನ್ನುತ್ತಿತ್ತು. ಶಲ್ಯ ಮುಳುಗಿಯೇ ಹೋಗಿತ್ತು. ಪವಿತ್ರ ಯಜ್ಞೋಪವೀತದ ಅವಸ್ಥೆ ನೋಡಿ ಜೋಯಿಸರಿಗೆ ಕಣ್ಣಲ್ಲಿ ನೀರೇ ಬಂತು. ಗಲೀಜು ಮತ್ತು ಅವಮಾನಗಳಿಂದ ಅವರು ಕುಗ್ಗಿಹೋಗಿದ್ದರು. ಯಾಕೋ ಇವತ್ತು ಅವರ ಗ್ರಹಗತಿ ನೆಟ್ಟಗಿದ್ದಂತಿರಲಿಲ್ಲ. ಪಾಪ, ಅವರ ನೋವು, ಆಕ್ರೋಶಗಳು ಅರ್ಥವಾಗುವಂಥದ್ದೇ. ಸೂರ್ಯ ಏಳೋಕೆ ಮುಂಚೆಯೆ ಸ್ನಾನ, ಜಪ, ತಪ, ಸಂಧ್ಯಾವಂದನೆಗಳನ್ನೆಲ್ಲ ನಿಷ್ಠೆಯಿಂದ ಪೂರೈಸಿ ದೈವಿಕ ಕಳೆಯೊಂದಿಗೆ ಮಡಿಪಂಚೆ ಮತ್ತು ಬಂಗಾರದ ಜರಿಶಲ್ಯ ಹೊದ್ದು ತೊಟ್ಟು ಕಾಫಿಯನ್ನೂ ಕುಡಿಯದೆ ದೇವರ ದರ್ಶನಕ್ಕೆ ಬಂದಿದ್ದರು. ಅವರು ಬರುವ ಹೊತ್ತಿಗಾಗಲೆ ಸರದಿ ಸಾಲಿನಲ್ಲಿ ಅಂದಾಜು ಇನ್ನೂರು ಜನರಾದರೂ ಇದ್ದು ದರ್ಶನದ ಅಮೂಲ್ಯ ಕ್ಷಣವನ್ನು ಎದುರುನೋಡುತ್ತಿದ್ದರು. ಜೋಯಿಸರೂ ಸಾಲಿಗೆ ಸೇರಿಕೊಂಡರು. ನೋಡನೋಡುತ್ತಿದ್ದಂತೆ ಮುಂದೆ ಯಾರೋ ಸರದಿ ಸಾಲಿಗೆ ತೂರಿದ್ದನ್ನು ಕಂಡು ಯುವಕರಿಬ್ಬರು ಪ್ರತಿಭಟಿಸಿದರು. ಅತಿಕ್ರಮಣಕಾರನಿಗೆ ಜಾಗ ಸಿಗಬಾರದೆಂದವರು ಮುನ್ನುಗ್ಗಿದಾಗ ತಳ್ಳಾಟವಾಗಿ ಎಲ್ಲೋ ದಿಟ್ಟಿ ನೆಟ್ಟು ಕಾಲಕ್ಷೇಪಕ್ಕಾಗಿ ತಮ್ಮ ನೆಚ್ಚಿನ ಸೌಂದರ್ಯ ಲಹರಿಯ ಪಠಣದಲ್ಲಿ ಮುಳುಗಿದ್ದ ಜೋಯಿಸರು ಆಯ ತಪ್ಪಿ ಪಕ್ಕದ ಊರ ಗಟಾರಕ್ಕೆ ಬಿದ್ದುಬಿಟ್ಟಿದ್ದರು.

'ಮಹಾಪಾಪಿ' ಮಂಜಪ್ಪಯ್ಯ ಹೆಗಲಿನಿಂದ ಸಾಮಾನಿನ ಚೀಲವನ್ನು ಹಗುರಾಗಿ ನೆಲಕ್ಕಿಳಿಸಿದರು. ರಸ್ಕಿನ ಪೊಟ್ಟಣವನ್ನು ಹೊರತೆಗೆಯುತ್ತಿದ್ದಂತೆ ಮೊಮ್ಮಕ್ಕಳಿಬ್ಬರು ಓಡಿ ಬಂದು ಆಚೀಚೆ ಬಗಲಿಗೆ ಜೋತುಬಿದ್ದರು. ಕರಕರ ಸದ್ದು ಮಾಡುತ್ತ ಅವು ರಸ್ಕು ತಿನ್ನುವಾಗ ಮಂಜಪ್ಪಯ್ಯ "ಮಕ್ಕಳಾ...ಽ...ಽ... ಅಲ್ನೋಡ್ರೋ. ಏಣಿ ಮೆಟ್ಟಿಲ ಮೇಲೆ ಕಾಳ ಬೆಕ್ಕು ಕೂತ್ಗಂಡು ಆಸೆಗಣ್ಣಲ್ಲಿ ನೋಡ್ತಾ ಅದೆ. ಅದಕ್ಕೂ ಒಂಚೂರು ಕೊಡ್ರೋ..." ಎಂದರು.




ಕಿರಾಲುಗುಡ್ಡೆ ಗ್ರಾಮದ ಸಾವುಕಾರ, ಇನ್ನೂರೆಕರೆ ಅಡಕೆ ತೋಟದ ಜಮೀನುದಾರ, ಮೂವರು ಹೆಂಡಿರ ಮುದ್ದಿನ ಗಂಡ ಸಿಂಗಾರಯ್ಯ ಮೊದಲಿಬ್ಬರು ಹೆರಲಿಲ್ಲವೆಂದು ಮೂರನೆಯ ಮದುವೆಯಾಗಿತ್ತು. ಮೂರನೆಯವಳಿಗೆ ಮಗುವಾದ್ದರಿಂದ ನಾಲ್ಕನೆಯವಳು ಸಿಂಗಾರಯ್ಯನವರ ಮನೆಗೆ ಬಲಗಾಲಿಡುವುದು ತಪ್ಪಿತ್ತು. ಸೋಜಿಗವೆಂದರೆ ಆ ಮಗು ಅಡಕೆ ಕೊನೆ ತೆಗೆಯುವ ಮನೆಯಾಳು ಬೇಂತು ಪರಬುವಿನದು ಎಂಬ ದಟ್ಟ ಗುಮಾನಿ ಇತ್ತು. ಇರಲಿ, ಅದು ಬೇರೆಯೆ ಕತೆ. ದೊಡ್ಡ ಜಮೀನುದಾರನಾಗಿ ಸಾಮಾನ್ಯರೊಂದಿಗೆ ಸರದಿಯಲ್ಲಿ ಬರುವುದು ಅವರಿಗಿಷ್ಟವಿರಲಿಲ್ಲ. ಅತ್ತ ಗದ್ದೆ ನಾಟಿ ಬೇರೆ ಬಿರುಸಿನಿಂದ ನಡೆಯುತ್ತಿತ್ತು. ಏನಾದರೂ ತಂತ್ರ ಹೂಡಿ ವಿಶೇಷ ದರ್ಶನ ಪಡೆದು ಮನೆಗೆ ಮರಳೋಣ ಎಂದರೆ ದರ್ಶನ ನೀಡುತ್ತಿದ್ದ ದೇವರು ದೇವಸ್ಥಾನ ದಲ್ಲಿರಲಿಲ್ಲ, ಮನೆಯೊಂದರ ಗೋಡೆಯಲ್ಲಿ ಒಡಮೂಡಿದವನಾಗಿದ್ದ. ಆ ಮನೆಗೆ ಕತ್ತಲಾದ ಮೇಲಷ್ಟೆ ಭೇಟಿ ಕೊಟ್ಟು ಅಭ್ಯಾಸವಿದ್ದ ಸಿಂಗಾರಯ್ಯನವರಿಗೆ ಈಗ ನೂರಾರು ಜನಗಳೆದುರು ವಿಶೇಷ ದರ್ಶನಕ್ಕಾಗಿ ಕಾರ್ಯಾಚರಣೆಗಿಳಿಯುವುದು ಕಸಿವಿಸಿಯಾಗಿತ್ತು. ಸಾಲಿನಲ್ಲಿ ನಿಂತಿದ್ದ ಬಹಳ ಮಂದಿಗೆ ಅವರ ರಸಿಕ ಕತೆಗಳು ಗೊತ್ತಿದ್ದರಿಂದ ಈಗಿನ ಪವಿತ್ರ ಸನ್ನಿವೇಶದಲ್ಲಿ ಎಲ್ಲರ ಗಮನ ಸೆಳೆಯುವುದು ಅವರಿಗೆ

ಬೇಡವಾಗಿತ್ತು. ಮೂರು ದಿನಗಳಿಂದ ನವರಂಗಸಾನಿಯ ಸಂಗವಿಲ್ಲದೆ ಅಸೌಖ್ಯದ ಭಾವನೆ ಬೇರೆ ತೀವ್ರ ಬಾಧಿಸುತ್ತಿತ್ತು. ಗಣಪತಿ ನೋಡುವ ನೆಪದಲ್ಲಿ ಅವಳನ್ನು ಮಾತನಾಡಿಸಬೇಕಿತ್ತು. ಒಟ್ಟಾರೆ ಅವರ ಪೇಚಾಟ ವರ್ಣನಾತೀತವಾಗಿತ್ತು. ದೇಹದ ಭಾರವನ್ನು ಒಮ್ಮೆ ಆ ಕಾಲಿಗೆ ಒಮ್ಮೆ ಈ ಕಾಲಿಗೆ ಎಂದು ಬದಲಿಸುತ್ತಿದ್ದರು. ತೊಡೆ ಸಂದಿಯಲ್ಲಿ ನಿನ್ನೆ ಸಂಜೆ ಇಂಬಳ ಕಚ್ಚಿದೆಡೆ ತುರಿಕೆ ಶುರುವಾಗಿತ್ತು. ಪಂಚೆಯೆತ್ತಿ ತುರಿಸಿಕೊಳ್ಳಲು ಸಂಕೋಚ. ಅಂದಿನ ಅವರ ಅವಸ್ಥೆಗೆ ಅವರೊಬ್ಬರೇ ಸ್ವಗತದಲ್ಲಿ ಮರುಕಪಟ್ಟುಕೊಳ್ಳಬೇಕಿತ್ತು.

ಚಂದು ಪೂಜಾರಿ ವಾರದ ಮೇಲೆ ಒಳ್ಳೇ ಸ್ನಾನ ಮಾಡಿ ಇದ್ದುದರಲ್ಲಿ ಸ್ವಚ್ಛ ಕೋರಾ ಪಂಚೆ, ದೊಗಳೆ ಅಂಗಿಯನ್ನು ಧರಿಸಿ ಸಾಲಿನಲ್ಲಿ ನಿಂತಿದ್ದನು. ಅವನನ್ನು ಕಂಡ ಕುಳುವಾಡಿ ಕೆಂಪ "ಏನಾ, ಚಂದು, ಮಾಡಾಕೆ ಕೆಲ್ಸಿಲ್ಲೇನಾ ? ಹೊಟಾಲೆ ಮರದ ಲಡ್ಡು ಕೊರಡು ಅಂತ ಅವ್ವ ಬೇರೆ ದಿವ್ಸ ನಿನ್ನ ಮನಿಗ್ ಸೇರ್‍ಸಾದಿಲ್ಲ. ನೋಡಾಕೆ ಇದೇ ಅವಕಾಸ ಅಂತ ಹೊಂಟಿಯೇನಾ ?" ಎಂದು ಛೇಡಿಸಿ ದುಗ್ಗಾಣಿ ಹೆಗ್ಡೆಯ ಹೆಂಡದಂಗಡಿಗೆ ಹೆಜ್ಜೆ ಹಾಕಿದ. ಹಿಂದೆಯೇ ನಿಂತಿದ್ದ ಚೌಕುಳಿ ಸೀರೆಯ ಹೆಂಗಸು ಕೆಂಪನ ಗೇಲಿಯ ಒಳಾರ್ಥವನ್ನು ಗ್ರಹಿಸಿ ಕಿಲಕಿಲನೆ ನಕ್ಕು ತನ್ನ ಕೆಂಬಲ್ಲು ಗಳನ್ನು ಢಾಳಾಗಿ ಪ್ರದರ್ಶಿಸಿದಳು. ಚಂದು ಪೂಜಾರಿಗೆ ಹೇಗೆ ಹೇಗೋ ಆಯಿತು.

ಕೆಂಪನಿಗೆ ಹಾರುವರ ದೇವರುಗಳಲ್ಲಿ ವಿಶ್ವಾಸವಿರಲಿಲ್ಲ. ಕುಕ್ಕುಟಕುಕ್ಕುಟಗಳೇ ಬೇಕೆಂದು ಹಪಹಪಿಸುವ ಬನದ ಚೌಡಿಯನ್ನು ಬಿಟ್ಟು ಜಗತ್ತಿನಲ್ಲಿ ಬೇರೆ ಯಾವ ದೇವರ ಬಗ್ಗೆಯೂ ಅವನಿಗೆ ಆಸ್ಥೆ ಇರಲಿಲ್ಲ. ಗಣಪತಿಗಾಗಿ ಬೆಳಗಿನಿಂದ ಒಂದು ಹನಿ ಬೈನೆ ಕಳ್ಳನ್ನೂ ಮುಟ್ಟದಿದ್ದ ಚಂದು ಪೂಜಾರಿ ಕೆಂಪ ಹೋದತ್ತಲೆ ಬಯಕೆಗಣ್ಣಿನಿಂದ ನೋಡುತ್ತಿದ್ದ. ದರ್ಶನದ ನಂತರ ತಾನೂ ಅವನ ಹಾದಿಯನ್ನೇ ಹಿಡಿಯೋದು ಎಂದು ಸಮಾಧಾನಿಸಿಕೊಂಡ (ಕೆಂಪನಿಗೆ ಆ ಹೆಸರು ಬರಲು ಕಾರಣ ವಿಚಿತ್ರವಿತ್ತು. ವಾಸ್ತವದಲ್ಲಿ ಅವನು ಕದ್ದಿಂಗಳಿನಷ್ಟು ಕಪ್ಪು. ಅವನು ಹುಟ್ಟಿದ ದಿನ ಬ್ರಿಟಿಷ್ ಅಧಿಕಾರಿಯೊಬ್ಬ ಪಟ್ಟಣಕ್ಕೆ ಭೇಟಿ ಕೊಟ್ಟಿದ್ದನಂತೆ. ಆತನ ವಿಶೇಷ ಭೋಜನಕ್ಕಾಗಿ ಕೆಂಪನ ಅಪ್ಪ ಬೇಟೆಯಾಡಿದ ಕೊಬ್ಬಿದ ಕಬ್ಬೆಕ್ಕನ್ನೇ ಬೇಯಿಸಲಾಗಿತ್ತಂತೆ. ಆ ಅಧಿಕಾರಿ ಕಂಠಮಟ್ಟ ಉಂಡು 'ಡರ್‍ರ್...ರ್...ರ್' ಎಂದು ತೇಗಿ ಸಂತೃಪ್ತನಾಗಿ ಕೆಂಪನ ಅಪ್ಪನಿಗೆ ವಿಕ್ಟೋರಿಯಾ ರಾಣಿಯ ಬೆಳ್ಳಿ ರೂಪಾಯಿಯನ್ನು ಇನಾಮು ನೀಡಿದ್ದನಂತೆ. ಜೀವನದಲ್ಲಿ ಪಡೆದ ಮೊದಲ ಇನಾಮಿನ ನೆನಪು ಮತ್ತು ಅಧಿಕಾರಿಯ ಕೆಂಪು ಮುಸುಡಿಯ ಚೆಲುವಿಗೆ ಮಾರುಹೋಗಿ ಮಗನಿಗೆ ಅವ ಕೆಂಪ ಅಂತ ಹೆಸರಿಟ್ಟನಂತೆ).

* * *

ಊರಿಗೆ ಊರೇ ದೇವರ ದರ್ಶನಕ್ಕೆ ಮುಗಿಬಿದ್ದದ್ದು ಯಾಕೆ? ತೇರು ಬೀದಿಯ ಕೊನೆಯಲ್ಲಿದ್ದ ನಾಡಹೆಂಚಿನ ಮನೆಯ ಮಲಗುವ ಕೋಣೆಯ ಉತ್ತರದ ಗೋಡೆಯ ಮೇಲೆ ಬಹುತೇಕ ಗಣಪತಿಯಂತೆ ಕಾಣುವ ಆಕೃತಿಯೊಂದು ಮೂಡಿಬಿಟ್ಟಿತ್ತು. ಮನೆಯೊಡತಿ ನವರಂಗಸಾನಿ ಅದನ್ನು ಗಮನಿಸಿ ದಿಗ್ಭ್ರಮೆಗೊಂಡಿದ್ದಳು. ತನ್ನಂತಹ ಪತಿತೆಯ ಮೇಲೆ ದೇವರು ಕೃಪೆ ಸುರಿಸಿದ್ದಕ್ಕಾಗಿ ಹಿರಿ ಹಿರಿ ಹಿಗ್ಗಿ ಹೋಗಿದ್ದಳು. ವಿಧಿವತ್ತಾಗಿ ವಿಧ ವಿಧ ವೇದಮಂತ್ರ ಗಳಿಂದ ದೇವರನ್ನು ನಿತ್ಯ ಪೂಜಿಸುವ ದೇಶ ಪ್ರಸಿದ್ಧ ಮಠದ ಜಗದ್ಗುರುವಿಗೇ ದಕ್ಕದ ಭಾಗ್ಯ ತನ್ನನ್ನು ಅರಸಿಬಂದದ್ದಕ್ಕಾಗಿ 'ಅಬ್ಬಾ! ಜನ್ಮ ಸಾರ್ಥಕ' ಎಂದು ಗಣಪತಿಗೆ ಸಾಷ್ಟಾಂಗವೆರಗಿದ್ದಳು.




ಬೆಳಿಗ್ಗೆ ಮಡಿಸ್ನಾನ ಮಾಡಿ ಅವಳೇ ಪೂಜೆ ಮಾಡಿದಳು. ಅರಿಷಿಣ, ಕುಂಕುಮ ಮೆತ್ತಿದಳು. ಗಂಧ ತೇಯ್ದು ಸವರಿದಳು. ದೂರ್ವೆಯ ಪುಟ್ಟ ಹಾರವನ್ನು ಆಚೀಚೆ ಹೊಡೆದ ಎರಡು ಮೊಳೆಗಳಿಗೆ ಸಿಕ್ಕಿಸಿದಳು. ಆ ಹೊತ್ತಿಗೆ ಹಾಜರಿದ್ದ 'ಅಂತರಂಗದ ಅತಿಥಿ'ಯೊಬ್ಬರಿಂದ ದೇವರೋದ್ಭವದ ವರ್ತಮಾನ ಸೋರಿಹೋಗಿತ್ತು. ಅದು ದಿನವಿಡೀ ಕೊತಕೊತ ಮಾತುಕತೆಯ ರೂಪ ಪಡೆದು ಎಲ್ಲೆಡೆ ದೈವಭಕ್ತಿ ಸ್ಫೋಟಿಸುವ ಲಕ್ಷಣಗಳು ತೋರತೊಡಗಿದ್ದವು. ವೇಶ್ಯೆಯ ಮನೆಯಲ್ಲಿ ದೇವರು ಅವತರಿಸುವುದೆಂದರೆ...!? ಜನರಿಗೆ ಒಂಥರಾ ಗಾಬರಿಯೇ ಆಗಿತ್ತೆನ್ನಬೇಕು. ಆದರೂ ದೇವರು ದೇವರೆ ತಾನೆ ? ನೋಡದಿದ್ದರೆ ಅಪಚಾರವಾದೀತು.

ಮೊದಲು ಹಿಂಜರಿಯುತ್ತಲೇ ಅಕ್ಕಪಕ್ಕದವರು ನವರಂಗಸಾನಿಯ ಮನೆಗಾಗಮಿಸಿ ಗಣಪತಿಯನ್ನು ಕಂಡರು. ಗಂಡಂದಿರೆಲ್ಲಿ ಅವಳ ವಯ್ಯಾರ ಮತ್ತು ಶೃಂಗಾರಕ್ಕೆ ಮರುಳಾಗಿಬಿಡುವರೋ ಎಂದು ಮಡದಿಯರೂ ಜೊತೆಗೂಡಿ ಬಂದರು. ಆಮೇಲೆ ಹಿಂದು ಮುಂದಿನ ಬೀದಿಯವರೆಲ್ಲ ಬಂದರು. ಮಾರನೆ ದಿನ ಪಟ್ಟಣದ ಮೂಲೆಮೂಲೆಯಿಂದಲೂ ಜನ ಬರತೊಡಗಿದರು. ಸುತ್ತಮುತ್ತಲ ಹಳ್ಳಿ, ಗ್ರಾಮಗಳಿಗೆ ಗಾಳಿಯೂ ನಾಚುವಂತೆ ಸುದ್ದಿ ತಲುಪಿತು. ಎಷ್ಟೋ ಮಂದಿ ಮೈಲಿಗಟ್ಟಲೆ ನಡೆದೇ ಬಂದರು. ವಿಷಯ ಮಠದವರ ಕಿವಿಗೂ ಬಿದ್ದು 'ನಾವಿನ್ನು ನೊಣ ಹೊಡೆಯೋದ, ಎಂಥ...!' ಎಂದು ಆತಂಕಪಟ್ಟರು. ಬಗೆಬಗೆಯ ಸೇವೆಗಳಿಗೆಂದು ಸಿದ್ಧಪಡಿಸಿದ್ದ ಕೇಜಿಗಟ್ಟಲೆ ಪ್ರಸಾದಗಳು ಉಳಿದು ಹಳಸದಿದ್ದರೆ ಸಾಕು ಎಂದು ಭಗವಂತನಿಗೆ ಮೊರೆಯಿಟ್ಟರು.

ಸೌಭಾಗ್ಯವತಿಯಲ್ಲದ ತಾನು ಪೂಜೆ ಮಾಡುವುದು ಶುದ್ಧವಲ್ಲವೆಂದು, ನಿತ್ಯ ಪೂಜೆಗೊಬ್ಬ ಅಧಿಕೃತ ಅರ್ಚಕನಿದ್ದರೆ ಚೆನ್ನ ಎಂದು ನವರಂಗಸಾನಿಗೆ ಅನ್ನಿಸಿತು. ಸ್ಥಳೀಯ ಅರ್ಚಕರಾರೂ ಅಪವಿತ್ರ ವೃತ್ತಿಯ ಅವಳ ಆಹ್ವಾನವನ್ನು ಒಪ್ಪಿಕೊಳ್ಳಲಿಲ್ಲ. ತಾನು ವಿಶೇಷ ಭರವಸೆ ಇಟ್ಟಿದ್ದ ಸ್ತಂಭ ಲಿಂಗೇಶ್ವರ (ಕಂಬವನ್ನು ಕೊರೆದು ಒಳಗಿರಿಸಿದ ಲಿಂಗ) ದೇಗುಲದ ಅರ್ಚಕ ತ್ರಯಂಬಕ ಸ್ವಾಮಿಗೆ ಚೀಟಿ ಕಳುಹಿಸಿದಳು. ಕ್ರಮಬದ್ಧ ಮಂತ್ರೋಚ್ಚಾರದೊಂದಿಗೆ ಮಂಗಳಾರತಿ ಎತ್ತಿ ಹಣ್ಣುಕಾಯಿ ಅರ್ಪಿಸಿ ತೀರ್ಥ ಪ್ರಸಾದ ಹಂಚಲು ಒಪ್ಪಿದರೆ ಒಂದೇ ರಕಮಿನಲ್ಲಿ ದೊಡ್ಡ ದಕ್ಷಿಣೆಯನ್ನು ಕೊಡುವ ಆಮಿಷ ಒಡ್ಡಿದ್ದಳು. ಚೀಟಿ ಓದಿ ತ್ರಯಂಬಕ ಸ್ವಾಮಿ ಹುಬ್ಬೇರಿಸಿದ. 'ಎಲಾ ಇವಳ...! ಇಲ್ಲಿತನಕ ನನ್ನಿಂದ ಕಿತ್ತ ಕಾಸನ್ನೇ ಈಗ ನನಗೆ ಕೂಡಿಸಿ ಕೊಡೋಹಾಂಗಿದೆಯಲ್ಲ' ಎಂದು ಗೊಣಗಿಕೊಂಡ. ಅವನ ಪುರುಷಹಂಕಾರ ಪುಟಿದೆದ್ದಿತು. 'ಆಗೋದೆ ಇಲ್ಲ ಅಂತ ಅವಳಿಗೆ ಹೇಳು' ಎಂದು ಧಾರ್ಷ್ಟ್ಯದಿಂದ ಪರಿಚಾರಕ ಪುಟ್ಟನಿಗೆ ಹೇಳಿ ಕಳುಹಿಸಿದ. ಪೂಜೆ ಪ್ಯಾಕೇಜಿಗಿಂತ ಅವಳ ಪಲ್ಲಂಗದ ಸಖನಾಗಿಯಷ್ಟೆ ಮುಂದುವರಿಯಲು ಅವನು ನಿರ್ಧರಿಸಿದಂತಿತ್ತು. ಈ ಸ್ಥಳೀಕರ ಗೊಡವೆಯೇ ಬೇಡವೆಂದು ಕಾಳಹಸ್ತಿಯಿಂದ ಬಂದು ಹಳೆಯ ಕಾಪಾಲಿಕ ಮಠದಲ್ಲಿ ನೆಲೆಸಿದ್ದ ವಿಧುರ ಮೂರ್ತಿಯನ್ನೇ ನವರಂಗಸಾನಿ ಕೊನೆಗೆ ಅರ್ಚಕ ಹುದ್ದೆಗೆ ಒಪ್ಪಿಸಿದಳು.

ಮೊದಲೆರಡು ದಿನ ದೇವರ ಮಹಿಮೆಯನ್ನು ಮನಸಾರೆ ನೆನೆದು ಮೈಮರೆತಿದ್ದ ನವರಂಗಸಾನಿ ಮೂರನೇ ದಿನ ತನ್ನ ವ್ಯವಹಾರ ಕುಶಲತೆಗೆ ಮರಳಿದಳು. ರಶೀದ್ ಬ್ಯಾರಿಯ ಪಾತ್ರೆ ಅಂಗಡಿಯಿಂದ ಕೆಲವು ಆರತಿಗಳು ಮತ್ತು ದೊಡ್ಡ ತಾಮ್ರದ ಹಂಡೆಯನ್ನು ಕೊಂಡುತಂದಳು. ಹಂಡೆಯ ಬಾಯಿಗೆ ತಗಡು ಕಟ್ಟಿಸಿ ಕಾಣಿಕೆ ಡಬ್ಬಿ ಮಾಡಿ ಗಣಪತಿಯ ಕೆಳಗಿಟ್ಟಳು. ಅದರೊಳಗೆ 'ಟಣ್...ಟಣ್...ಟಳ್' ಎನ್ನುತ್ತ ನಾಣ್ಯಗಳು ಬೀಳುವ ಸದ್ದು ಕೇಳಿದಾಗಲೆಲ್ಲ ತನ್ನ ಹುನಾರು ಫಲಿಸಿತೆಂದು ಖುಷಿಪಟ್ಟಳು. ಜನ ರಾತ್ರಿ ಸರಿಹೊತ್ತಿನವರೆಗೂ ದರ್ಶನಾಕಾಂಕ್ಷಿಗಳಾಗಿ ಬರುತ್ತಿದ್ದರಿಂದ ಅವಳ ಕಸುಬಿಗೆ ಕುತ್ತು ಬಂದಿತ್ತು. ಆದರೆ ಅದರ ಕೊರತೆಯನ್ನು ಕಾಣಿಕೆ ಹಂಡೆ ಕೊಂಚಮಟ್ಟಿಗೆ ನೀಗಲಿತ್ತು. ವಾರ ಕಳೆಯುವುದರೊಳಗೆ ಹದಿನೈದಿಪ್ಪತ್ತು ಸಾವಿರ ಜನರಾದರೂ ಗಣಪತಿಗೆ ತಲೆಬಾಗಿದ್ದರು. ಮಠದಿಂದ ಜಗದ್ಗುರುಗಳು ತಮ್ಮ ಪರವಾಗಿ ಮುಖ್ಯ ಪಾರುಪತ್ಯೆದಾರನನ್ನು ಕಳುಹಿಸಿಕೊಟ್ಟರು. ಜಾರೆಯ ಮನೆಯಲ್ಲವಾಗಿದ್ದರೆ ಇಷ್ಟು ಹೊತ್ತಿಗೆ ಖುದ್ದಾಗಿ ಅವರೇ ಪಾದ ಬೆಳೆಸಿರುತ್ತಿದ್ದರು. ಏನು ಮಾಡುವುದು ? ಕೆಲವೊಮ್ಮೆ ಅಸಹಾಯಕತೆ ಎಷ್ಟು ಬಲಾಢ್ಯವಾಗಿರುತ್ತದೆ ಎಂದರೆ ಈ ತನಕ ಮಾಡಿದ ಯಜ್ಞ, ಯಾಗ, ಹೋಮ, ಹವನ, ಪೂಜೆ, ಅರ್ಚನೆಗಳ ಪುಣ್ಯವೆಲ್ಲ ಹೊಳೆಗೆ ತೊಳೆದ ಹುಣಸೆಹಣ್ಣಾಗಿ ಬಿಡುತ್ತದೆ.

ಪಾಪ, ಜಗದ್ಗುರುಗಳ ಸದ್ಯದ ಸಂದಿಗ್ಧತೆ ಹೊಳೆ ಹುಣಸೆಹಣ್ಣಿಗಿಂತ ಭಿನ್ನವಾಗಿರಲಿಲ್ಲ.

✶ ✶ ✶

"ಏನ್ರೋ, ಕತೆ ಕೇಂದ್ರೆಯ ?" ತುಸು ಕುಂಟುತ್ತ ಬಂದು ಕೋಲನ್ನು ಹಲಗಣೆಗಾನಿಸಿ ಕಂಬಳಿ ಹಾಸಿಕೊಂಡು ಮಕ್ಕಿಕಾನಿನ ದಡಿಗೆ ಗೌಡ ಜಗುಲಿಯ ಅಂಚಿನಲ್ಲಿ ಕುಳಿತ. ಥಟ್ಟನೆ ಅವನ ಕಣ್ಣು ಎಲೆ ಅಡಕೆ ತಟ್ಟೆಯ ಕಡೆ ತಿರುಗಿತು. ಅಲ್ಲಿಟ್ಟ ಹೊಚ್ಚ ಹೊಸ ಹೊಗೆಸೊಪ್ಪಿನ ಎಸಳು ಕಂಡು ಬಾಯಲ್ಲಿ ನೀರೂರಿತು.

"ಎಂತದೋ ಅದು !?" ಮಂಜಪ್ಪಯ್ಯನವರಿಗೆ ಕುತೂಹಲ ಕೆರಳಿತು.

"ಅದೇ, ಪ್ಯಾಟೆ ತುಂಬಾ ಜನವೋ ಜನ ಕಣ್ರೋ !"

"ಓ...ಅದಾ, ಗೊತ್ತು ಬಿಡು. ನಿನ್ನೆ ಹೈಗನ ಹಾಡ್ಯದಲ್ಲಿ ಕುಳುವಾಡಿ ಕೆಂಪ ಸಿಕ್ಕಿದ್ದ..."

"ಓಹೋ...! ಬಿಡಿ ಹಂಗಾರೆ. ಅಲ್ಲಾ, ಹೋಗಿ ಹೋಗಿ ಗಣಪಯ್ಯಂಗೆ ಮಾಡೋಕೆ ಬ್ಯಾರೆ ಮನೆ ಸಿಕ್‌ಲಿಲ್ವ , ಅಯ್ನೋರೆ...?"

"ಅದು ದೇವ್ರು ಅಂತಿಯೇನಾ ನೀನು?"

"ಸಮಾ ಈ ಕಣ್ಣಿಂದ ನಾನೇ ಕಂಡೀನಿ... ಸೊಂಡ್ಲಂತೂ ದಿಟವೇ ಆನೆ ಸೊಂಡ್ಲು ಕಣ್ರೋ...!"

"ಹೌದೇನಾ ? ನಂಗೇನೋ ನಂಬಿಕೆ ಇಲ್ಲ."

ನಿಜ, ಮಾನಂಗಿಯ ಮಂಜಪ್ಪಯ್ಯ ವಿಶಿಷ್ಟ ವ್ಯಕ್ತಿ. ಅಂತರಂಗದ ದೇವರನ್ನು ನಂಬುತ್ತಿದ್ದರಾದರೂ ವಿಗ್ರಹದ ದೇವರನ್ನು ನಂಬುತ್ತಿರಲಿಲ್ಲ. ದೇವಸ್ಥಾನಗಳಿಗೆ ಹೋಗುತ್ತಿರಲಿಲ್ಲ. ಪೂಜೆ ಪುನಸ್ಕಾರ ಅಂತ ದೇವರ ಗೂಡಿನ ಮುಂದೆ ಅಂಡೂರುವ ಬದಲು ಅಡಕೆ ತೋಟದಲ್ಲಿ ಒಂದು ಗಂಟೆ ಜಾಸ್ತಿ ಕೆಲಸ ಮಾಡಿದರೆ ತೋಟವೂ ಚೆಂದ, ಆದಾಯವೂ ಉಂಟು ಅಂತ ನಂಬಿದೋರು. ಅವರು ಹೀಗಾಗಲು ಕಾರಣ ಸ್ವಾಮಿ ವಿವೇಕಾನಂದ. ಜನರ ಡಾಂಭಿಕತೆಯನ್ನು ಸಂದರ್ಭ ಸಿಕ್ಕಾಗಲೆಲ್ಲ ವಿವೇಕಾನಂದರಂತೆ ಟೀಕೆ ಮಾಡಿದವರಿಲ್ಲ. 'ಏಳಿ ಎದ್ದೇಳೀ' ಎಂದು ಅವರು ಕರೆ ಕೊಟ್ಟದ್ದು ದಾಸ್ಯ ಮತ್ತು ತಾರತಮ್ಯವಿಲ್ಲದ ಬಲಿಷ್ಠ ಸಮಾಜ ಕಟ್ಟೋಕೆ ಸಿದ್ಧರಾಗಿ ಅಂತ. ದೇವಸ್ಥಾನ ಕಟ್ಟಿ ಅಂತಲ್ಲ ಎಂದು ಮಂಜಪ್ಪಯ್ಯ ನಂಬಿದ್ದರು. ಹಿಂದೊಮ್ಮೆ ತಾಲೋಕು ಹರಿಕಥಾ ಸಮ್ಮೇಳನದಲ್ಲಿ ಅವರಿಗೆ 'ಹರಿಕಥಾ ವಿದ್ವಾನ್ ಮಂಜಪ್ಪ ದಾಸ' ಎಂದು ಮಠವೇ ಪ್ರಾಯೋಜಿಸಿದ್ದ ಬಿರುದು ಸಂದಿತ್ತು. ಆದರೆ ಅದು ವಿವೇಕಾನಂದರನ್ನು ಓದುವ ಮೊದಲು. ಓದಿದ ಮೇಲೆ ಅವರ ಜೀವನಕ್ರಮವೇ ಬದಲಾಗಿತ್ತು. ಬಿರುದು, ಹೆಸರುಗಳೆಲ್ಲ ಅಷ್ಟಕ್ಕಷ್ಟೆ ಎನಿಸಿಬಿಟ್ಟಿತ್ತು. ನಾಲ್ಕು ಜನರಿಗೆ ನೆರವಾಗುವ ನಿಸ್ಪೃಹ ಬದುಕು ಸಂತೃಪ್ತಿ ತರುವುದೆಂದು ಅರಿವಾಗಿತ್ತು. ನಿರುಪಯುಕ್ತ ಕಾಲಹರಣಕ್ಕೆ ಅವರಲ್ಲಿ ಎಡೆಯೇ ಇರಲಿಲ್ಲ. ಜಾಗೃತಪ್ರಜ್ಞೆ ಅವರಿಗೆ ಹೊಸ ಹೊಸ ಪ್ರಯೋಗ ಕೈಗೊಳ್ಳಲು ಪ್ರಚೋದನೆ ನೀಡುತ್ತಿತ್ತು. ಹೊಸ ಹೊಸ ಬೆಳೆ, ತರಕಾರಿಗಳನ್ನು ಬೆಳೆಯಲು ಅವರಿಗೆ ಉತ್ಸಾಹ ನೀಡಿತ್ತು. ಮೊದಲ ಬಾರಿಗೆ ಮಲೆನಾಡಿನ ಆ ಸೀಮೆಗೆ ದೊಡ್ಡ ಕಾಯಿ ಬಿಡುವ ಯಾಲಕ್ಕಿ ಕೃಷಿಯನ್ನು ಪರಿಚಯಿಸಿದ್ದು ಅವರೇ. ತಾವೂ ನೆಟ್ಟು ಬೇರೆಯವರಿಗೂ ಉಚಿತವಾಗಿ ಸಸಿಗಳನ್ನು ಕೊಟ್ಟು ನೂರಾರು ಜನರ ಕೈಯಲ್ಲಿ ಕಾಸು ಓಡಾಡಲು ಕಾರಣರಾಗಿದ್ದ ಮಂಜಪ್ಪಯ್ಯನವರಿಗೆ 'ಯಾಲಕ್ಕಿ ದಾಸ' ಎಂಬ ಅಡ್ಡ ಹೆಸರೂ ಇತ್ತು. ಹರಿಕತೆ ಮತ್ತು ಯಾಲಕ್ಕಿಗಳೆರಡೂ ಏಕಕಾಲಕ್ಕೆ ಅವರ ಐಡೆಂಟಿಟಿ ಆಗಿದ್ದವು. ಈಗಲೂ–ಎಪ್ಪತ್ತರ ಇಳಿವಯಸ್ಸಿನಲ್ಲಿ–ಕರೆ ಬಂದರೆ ಹರಿಕತೆಗೆ ಅವರು ಅಣಿಯಾಗುತ್ತಿದ್ದರು. ಗಗ್ಗರ ಮತ್ತು ಚಪ್ಪಣಿಗಳ ಸದ್ದಿಗೆ ಅವರ ಶರೀರ ಲಯಬದ್ಧವಾಗಿ ಸ್ಪಂದಿಸುತ್ತಿತ್ತು. ದಾಸರ ಕೀರ್ತನೆಗಳನ್ನು ಅವರ ಅಸ್ಖಲಿತ ದನಿಯಲ್ಲಿ ಕೇಳುವುದೇ ಒಂದು ವಿಶಿಷ್ಟ ಅನುಭವ.

ಬೇರೆಯವರಂತೆ ಮಂಜಪ್ಪಯ್ಯನವರ ಹರಿಕತೆಗಳು ಪುರಾಣ ಪ್ರಸಿದ್ಧ ಪಾತ್ರಗಳ ಸುತ್ತ ಮರ ಸುತ್ತುತ್ತಿರಲಿಲ್ಲ. ಕಸ್ತೂರಿ ಮತ್ತು ಸುಧಾ ಪತ್ರಿಕೆಗಳ ಖಾಯಂ ಓದುಗರಾದ್ದರಿಂದ ಅವರು ಅನೇಕ ಹೊಸ ವಿಷಯಗಳನ್ನು ತಿಳಿದಿರುತ್ತಿದ್ದರು. ಆಸಕ್ತಿದಾಯಕ ಮತ್ತು ಉಪಯುಕ್ತವೆನಿಸುವ ವಿಚಾರಗಳನ್ನು ಹರಿಕತೆಯ ಮಧ್ಯೆ ಉಪಕತೆಗಳಂತೆ ತಂದು ಕೇಳುಗರನ್ನು ಹಿಡಿದಿಡುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಕತೆಗಳೂ ಅಲ್ಲಿ ಹಣಕುತ್ತಿದ್ದವು. ದೊಡ್ಡ ಸಾಧಕರ ಕತೆಗಳೂ ಇರುತ್ತಿದ್ದವು. ಸದಭಿರುಚಿಯ ನಗೆಹನಿಗಳೂ ಇರುತ್ತಿದ್ದವು. ಬದುಕಿನಲ್ಲಿ ವಿವೇಕಾನಂದರ ಪ್ರವೇಶವಾದ ಮೇಲಂತೂ ಸಮಾಜದ ಕಹಿಸತ್ಯಗಳನ್ನು ಕಟುವಾಗಿ, ನಿಷ್ಠುರವಾಗಿ ಹೇಳಲು ಅವರು ಹಿಂಜರಿಯುತ್ತಿರಲಿಲ್ಲ. ಒಮ್ಮೆ ಹೊಲೇರ ಕೇರಿಯಲ್ಲಿ ಸರ್ಕಾರಿ ಶಾಲೆ ಆರಂಭಗೊಂಡಾಗ ಅದರ ಉದ್ಘಾಟನೆಯನ್ನು ಮಂಜಪ್ಪಯ್ಯನವರ ಹರಿಕತೆಯಿಂದಲೇ ನೆರವೇರಿಸಲಾಯಿತು. ಆ ಸುದ್ದಿ ಕೇಳಿ ಮಠದವರ ಕಣ್ಣು ಕೆಂಪಗಾಯಿತು. 'ನಾವು ಕೊಟ್ಟ ಬಿರುದಿನ ಬಿನ್ನವತ್ತಳೆಯನ್ನು ವಾಪಾಸು ಕೊಡಬೇಕು' ಎಂಬ ತಾಕೀತು ಅವರಿಂದ ಬಂತು. 'ಯಾರಿಗಾದರೂ ನಾನು ಒಳ್ಳೇದು ಹೇಳೋಕೆ ಜಾತಿ ಮತಗಳ ಹಂಗು ಯಾಕಿರಬೇಕು' ಎಂಬ ನಿಲುವಿಗೆ ಬಂದಿದ್ದ ಮಂಜಪ್ಪಯ್ಯ ಬಿನ್ನವತ್ತಳೆಯನ್ನು ಮಠಕ್ಕೆ ವಾಪಾಸು ಮಾಡಿದರು. ಹಾಗೆಂದು ಹರಿಕತೆಯನ್ನು ಕೈಬಿಡಲಿಲ್ಲ. ಇಂತಹ ಮಂಜಪ್ಪಯ್ಯನವರಿಗೆ ಗಣಪತಿ ಮೂಡಿದ ವಿಷಯ ಅಚ್ಚರಿಯನ್ನೇ ತಂದಿರಲಿಲ್ಲ. ಅದಕ್ಕೇ ಅವರು ದಡಿಗೆ ಗೌಡನ ಮಾತಿಗೆ ತಣ್ಣಗೆ ಪ್ರತಿಕ್ರಿಯಿಸಿದ್ದು. ಅವರಿಗೆ ಇಷ್ಟವಿಲ್ಲದ್ದನ್ನು ಹೆಚ್ಚು ಚರ್ಚಿಸಿ ಪ್ರಯೋಜನವಿಲ್ಲವೆಂದು ದಡಿಗೆ ಗೌಡ ತಾನು ಬಂದ ಕಾರಣವನ್ನು ಪ್ರಸ್ತಾಪಿಸಿದ.

"ಅಯ್ನೋರೆ, ನೋವಿನ್ ಮಾತ್ರೆ ಅದಿಯೇನ್ರೋ ? ಎಡ ಹಿಮ್ಮಡಿ ಸಿಕ್ಕಾಪಟ್ಟೆ ನೋಯ್ತಾ ಅದೆ. ನಿನ್ನೆ ಕಾಡುಕೋಳಿ ಹಿಡ್ಕಳಕೆ ಅಂತ ಅಗಳಿಗೆ ನೆಗ್ದೆ. ಉಳುಕಿದ್ದಂಗದೆ. ನೋವೋ ನೋವು... ಕೋಳಿನೂ ತಪ್ಪಿಸ್‌ಗಂಡು ಹ್ವಾತು...ಥತ್."

"ಇರು, ತನ್ಕೊಡ್ತೀನಿ" ಮಂಜಪ್ಪಯ್ಯ ಟ್ರಂಕಿನಂತಹ ಸಣ್ಣ ಡಬ್ಬ ತಂದು ನೋವಿನ ಮಾತ್ರೆಯನ್ನು ಹುಡುಕಿಕೊಟ್ಟರು. ಪೇಟೆ ಮೂರು ಮೈಲಿ ದೂರದಲ್ಲಿತ್ತು. ಮೈಲಿಗೊಂದರಂತೆ ಬೆಟ್ಟ ಹತ್ತಿಳಿಯಬೇಕಿತ್ತು. ಯಾರಿಗಾದರು ಏನಾದರು ಬೇನೆ ಆದರೆ ತುರ್ತಾಗಿ ಡಾಕ್ಟ್ರಷಾಪಿಗೆ ಹೋಗಿ ಬರೋದು ತ್ರಾಸವಿತ್ತು. ತಲೆನೋವು, ಹೊಟ್ಟೆ ಕಿವಿಚು, ಶೀತ, ನೆಗಡಿ, ಕೆಮ್ಮು, ಮೈಕೈ ನೋವು, ಮಲಬದ್ಧತೆ, ವಾಂತಿ, ಭೇದಿಗೆಲ್ಲ ಮಂಜಪ್ಪಯ್ಯನವರ ಬಳಿ ಮಾತ್ರೆ ತಕ್ಷಣಕ್ಕೆ ಲಭ್ಯವಿರುತ್ತಿತ್ತು. ಪೇಟೆಗೆ ಹೋದಾಗಲೆಲ್ಲ ಸ್ಟಾಕಿಲ್ಲದ ಮಾತ್ರೆಗಳನ್ನು ತಂದು ಬೇರೆ ಬೇರೆ ಕಾಗದದ ಕವರಿನೊಳಗಿಟ್ಟು ಅವುಗಳ ದರ, ಉದ್ದೇಶ ಮತ್ತು ಎಕ್ಸ್ಪೈರಿ ದಿನಾಂಕ ಬರೆದಿಡುವುದು ಅವರ ಅಭ್ಯಾಸವಾಗಿತ್ತು. ಮಾನಂಗಿ ಮತ್ತು ಸುತ್ತಮುತ್ತಲ ಊರಿನವರು ಅವರ ಬಳಿ ಮಾತ್ರೆ ಪಡೆಯುತ್ತಿದ್ದರು. ಕೆಲವರು ಮುಖಬೆಲೆಯನ್ನು ತೆರುತ್ತಿದ್ದರು. ತೆರದೇ ಹೋದವರಿಂದ ಮಂಜಪ್ಪಯ್ಯ ಬೆನ್ನುಬಿದ್ದು ಕೇಳಲು ಹೋಗುತ್ತಿರಲಿಲ್ಲ. ಆದರೆ ಬಡವರು, ಕೂಲಿಯಾಳುಗಳು ಮತ್ತು ಇತರ ಕಷ್ಟಜೀವಿಗಳು ಕೊಡಲು ಬಂದರೂ ಅವರು ಸುತರಾಂ ಹಣ ಪಡೆಯುತ್ತಿರಲಿಲ್ಲ. ಕೃತಜ್ಞತೆಯಿಂದ ಅವರೆಲ್ಲ ಅವರನ್ನು 'ಮಾತ್ರೆ ಮಂಜಪ್ಪಯ್ಯ' ಅಂತ ಕರೆಯುತ್ತಿದ್ದುದೂ ಇತ್ತು. ಹೀಗೆ ಅವರ ಮಾತ್ರೆ ಸೇವೆಗೆ ಎರಡು ದಶಕಗಳೇ ಸಂದುಹೋಗಿದ್ದವು.

ಮಾತುಕತೆ ಸಾಗಿದ್ದಂತೆ ಮಂಜಪ್ಪಯ್ಯನವರ ಮಡದಿ ಎಮ್ಮೆ ಹಾಲಿನ ಗಟ್ಟಿ ಕಾಫಿಯನ್ನು ದೊಡ್ಡ ಲೋಟಗಳಲ್ಲಿ ತಂದು ಇಬ್ಬರಿಗೂ ಕೊಟ್ಟರು. ಅವರ ಧಾರಾಳತನ ಕಾಫಿಗೆ ವಿಶಿಷ್ಟ ರುಚಿ ನೀಡಿತ್ತು.

"ನಿಮ್ ಕೈಗುಣ ದೊಡ್ಡದು ಮಾರಾಯರೆ. ಈ ಮಾತ್ರೆಯಿಂದ ಇವತ್ತು ಬೈಗಿನ ಹೊತ್ತಿಗೆ ನೋವು ಪರಾರಿಯಾಗ್‌ದಿದ್ರೆ ನಾನು ದಡಿಗೆ ಗೌಡನೇ ಅಲ್ಲ ಕಣ್ರೋ" ಎಂದು ಅವನು ಎದ್ದು ನಿಂತ. ಉಣುಗೋಲು ಹಾಕುತ್ತ ಒಂದು ಸಾರಿ ಮಂಜಪ್ಪಯ್ಯನವರ ಕಡೆ ತಿರುಗಿ "ಆ ಸೂಳೆಮನಿಗೆ ಉಂದ್ ಸರ್ತಿ ಹೊಕ್ಕಿ ಬನ್ರೋ. ಗಣಪತಿನಾ ನೋಡ್‌ಬನ್ನಿ. ನೋಡ್ದೆ ನಂಬಿಕಿಲ್ಲ ಅನ್ನೋದು ಕ್ರಮ ಅಲ್ಲ ಕಣ್ರೋ" ಎಂದು ಗೌಡ ಅರಿಕೆ ಮಾಡಿಕೊಂಡ. ಚೀಲದಿಂದ ಚೂರು ಅಡಕೆ, ಸುಣ್ಣ, ಹೊಗೆಸೊಪ್ಪನ್ನೆಲ್ಲ ತೆಗೆದು ಕುಡಿಎಲೆಯಲ್ಲಿ ಸುತ್ತಿ ಕಾಳಜಿಯಿಂದ ಬಾಯಲ್ಲಿರಿಸಿಕೊಂಡು ಅಗಿಯುತ್ತರಸ ಸವಿಯುತ್ತ ಉಗಿಯುತ್ತ ಗದ್ದೆ ಕೋಗಿನಲ್ಲಿ ಅವನು ಬಿಂದು ಗಾತ್ರವಾದ.

ಗೌಡನ ಸಮಾಧಾನಕ್ಕಾದರೂ ಬರೋ ಶನಿವಾರ ಪೇಟೆಗೆ ಹೋದಾಗ ಗಣಪತಿ ಮೂಡಿದ್ದನ್ನು ಕಂಡರಾಯಿತು ಅಂತ ಮಂಜಪ್ಪಯ್ಯ ನಿರ್ಧರಿಸಿದರು.

✶ ✶ ✶

ಎರಡನೇ ವಾರದಲ್ಲಂತೂ ಭಕ್ತರ ಸಂಖ್ಯೆ ಇಮ್ಮಡಿಸಿತು. ನವರಂಗಸಾನಿಯ ಮನೆ ಗೌಜಿನ ಮದುವೆಮನೆಯಾಗಿಬಿಟ್ಟಿತು. ಹನ್ನೆರಡನೆಯ ದಿನ ಗಣಪತಿ ಕೊಂಚ ಮಂಕಾದಂತೆ ಕಂಡುಬಂತು. ಸೊಂಡಿಲ ತುದಿ ಮುರಿದುಹೋದಂತಿತ್ತು. ಕಿವಿಯ ಭಾಗಗಳು ಕಂದುಗಪ್ಪಿಗೆ ತಿರುಗಿದ್ದವು. ಪೂಜೆ ಭಟ್ಟನೇ ಆ ವ್ಯತ್ಯಾಸಗಳನ್ನು ಮೊದಲು ಗುರ್ತಿಸಿದ್ದು. 'ಗಣಪತಿಯ ಮೇಲೆ ಯಾರದ್ದಾದರೂ ಕೆಟ್ಟ ದೃಷ್ಟಿ ಬಿತ್ತಾ, ಹಾಗಿದ್ರೆ ನನ್ನ ದಕ್ಷಿಣೆಗೆ ಎಳ್ಳುನೀರೇ ಗತಿ' ಎಂಬ ಸಣ್ಣ ಆತಂಕ ಮನಸಲ್ಲಿ ಇಣುಕಿಹೋಯಿತು. ತಹಸೀಲ್ದಾರರಿಗೆ ಪುಷ್ಪಪ್ರಸಾದ ಕೊಡುವ ಸಂದರ್ಭದಲ್ಲಿ ಕಮಲ (ಡೇಲಿಯಾ)ದ ಹೂವಿನ ಒಂದು ಎಸಳನ್ನು ಸೊಂಡಿಲಿಗಿಟ್ಟು ಭಿನ್ನಗೊಂಡ ಭಾಗವನ್ನು ಮುಚ್ಚಿದನು.

ದೀಪಗಳನ್ನು ಸ್ವಲ್ಪ ದೂರಕ್ಕರಿಸಿ ಗಣಪತಿಗೆ ಬೆಳಕು ಕಡಿಮೆ ಮಾಡಿದನು. ಈಗ ಸೊಂಡಿಲಿನ ಮೊಂಡು ಕಾಣುತ್ತಿರಲಿಲ್ಲ.

ಹದಿನಾಲ್ಕನೇ ದಿನ ಬಂತು. ಮಂಜಪ್ಪಯ್ಯನವರೂ ಬಂದರು. ಫಕ್ಕನೆ ಯಾರೂ ಗುರುತು ಹಿಡಿಯ ಬಾರದೆಂದು ಗಡ್ಡ ಮೀಸೆಗಳನ್ನು ಬೋಳಿಸಿಕೊಂಡು ಬಂದಿದ್ದರು. ಕಲ್ಲಟ್ಟಿಯ ಶಂಕರ ಬೆಳಿಗ್ಗೆಯೇ ಬಂದು ನೆತ್ತಿಯ ನಾಲ್ಕು ಕೂದಲುಗಳನ್ನೂ ಟ್ರಿಮ್ ಮಾಡಿ ಹೋಗಿದ್ದ. ಅವರು ಗಣಪತಿಯನ್ನು ಸುಮ್ಮನೆ ಅವಲೋಕಿಸಿದರು. 'ಒಂದ್ನಿಮಿಷ ಇರಿ, ಬಂದೆ' ಎಂದು ಪೂಜೆ ಭಟ್ಟ ಹುಲಿ ಬೆರೆಸಿಕೊಂಡು ಬಂತೇನೋ ಎಂಬಂತೆ ಹೊರಗೋಡಿದ. ಬಹಳ ಹೊತ್ತಿನಿಂದ ಕಟ್ಟಿಕೊಂಡಿದ್ದ ಮೂತ್ರ ಹೊರಹೋಗಲು ಕಾತರಿಸುತ್ತಿತ್ತು. ಇತ್ತ ಕುತೂಹಲ ಕೆರಳಿದ ಮಂಜಪ್ಪಯ್ಯನವರಿಗೆ ದೇವರನ್ನು ಒಮ್ಮೆ ಮುಟ್ಟಿ ನೋಡಬೇಕೆನಿಸಿತು. ಸೊಂಡಿಲನ್ನು ತುಸು ಕೆರೆದರು. ಅನಾಹುತವಾಗಿಬಿಟ್ಟಿತು. ಅದು ಪೂರ್ತಿ ಉದುರಿಯೇಹೋಯಿತು. ಕೈಗಷ್ಟು ಪುಡಿ ಮೆತ್ತಿತು. ನೆಲಕ್ಕಷ್ಟು ಉದುರಿತು. ಸೊಂಡಿಲಿಲ್ಲದ ಮೇಲೆ ಗಣಪತಿಗೆ ಅಸ್ತಿತ್ವವೇ ಇಲ್ಲವಲ್ಲ. ಥಟ್ಟನೆ ಅವರಿಗೆ ವಿಷಯ ಸ್ಪಷ್ಟವಾಯಿತು, ತಾನು ಮುಟ್ಟಿದ್ದು ದೇವರನ್ನಲ್ಲ, ಅಳಿಬಿ (ಅಣಬೆ)ಯೊಂದರ ಕಾಡು ಜಾತಿ ಅಂತ. ಮಳೆಗಾಲದಲ್ಲಿ ಗಾಳಿಯೊಂದಿಗೆ ಎಲ್ಲಿಂದಲೋ ಹಾರಿಬಂದ ಅಳಿಬಿಯ ಬೀಜ ಗೋಡೆಯ ತೇವಾಂಶದ ನೆರವು ಪಡೆದು ಬೆಳೆದಿತ್ತು. ಆ ಹಳೆಯ ಗೋಡೆಯ ಸಣ್ಣ ಸಂದಿನೊಳಗೆ ಬೇರಿಳಿಸಿ ಜೀವ ಹಿಡಿದುಕೊಂಡಿತ್ತು. ಕಾಡಿನಲ್ಲಾದರೆ ಬೃಹತ್ ಮರಗಳ ಕೊಳೆತ ತೊಗಟೆಗಳ ಮೇಲೆ ಮೂರ್ನಾಲ್ಕು ವಾರ ತಾಜಾ ಆಗಿರುವ ಅದು ಇಲ್ಲಿ ಕತ್ತಲ ಕೋಣೆಯಲ್ಲಿ ದೀಪಗಳು ಮತ್ತು ಭಕ್ತರ ಶರೀರ ಶಾಖಕ್ಕೆ ಕರಗುತ್ತಿತ್ತು. ಸದಾ ನಿಸರ್ಗದ ನಡುವೆ ದುಡಿಯುವ ಮಂಜಪ್ಪಯ್ಯನವರಿಗೆ ಅಳಿಬಿಗಳ ಪರಿಚಯ ಚೆನ್ನಾಗಿಯೆ ಇತ್ತು. ಕೈಯನ್ನು ಸರಸರ ಪಂಚೆಗೊರಸಿ ಪೂಜೆ ಭಟ್ಟನಿಂದ ತೀರ್ಥ ಪ್ರಸಾದ ಪಡೆದು ತಟ್ಟೆಗೆ ಎರಡು ರೂಪಾಯಿ ದಕ್ಷಿಣೆ ಹಾಕಿ ಹೊರಕ್ಕೆ ನುಸುಳಿಕೊಂಡರು. ಬೇಗ ಬೇಗ ದೌಡಾಯಿಸಿ ಪೇಟೆ ಜನಗಳ ನಡುವೆ ಅಂತರ್ಧಾನರಾದರು.

✶ ✶ ✶

ಸೊಂಡಿಲಿಲ್ಲದ ಗಣಪತಿ ಈಗ ಗೋಡೆಗೆ ಒರೆದಿಟ್ಟ ಪುಟ್ಟ ಬೆರಣಿಯ ತುಣುಕಿನಂತೆ ಕಾಣುತ್ತಿತ್ತು. ಪೂಜೆ ಭಟ್ಟ ಕಂಗಾಲಾಗಿಹೋದ. ಗಾಬರಿಯಿಂದ ನವರಂಗಸಾನಿಯನ್ನು ಕರೆದ. ಅವಳು ದಂಗುಬಡಿದುಹೋದಳು. 'ಗಣಪತಿ ಎಲ್ಲಿ ಹೋದ ? ತನ್ನ ಕಡೆಯಿಂದ ಏನಾದರು ಲೋಪವಾಯಿತೆ ? ತಾನು ಒಳ್ಳೆಯವಳಾಗಿದ್ದುದರಿಂದಲೇ ಅಲ್ಲವೆ ಅವನು ನನ್ನ ಮನೆಯಲ್ಲಿ ಮೂಡಿದ್ದು. ಆದರೀಗ ಈ ನಾಪತ್ತೆಗೇನು ಅರ್ಥ ?' ಅವಳು ಕಳವಳದ ಕೊಳಕ್ಕೆ ಬಿದ್ದಳು.

ಹೊರಗಡೆ ಜನರ ನೂಕು ನುಗ್ಗಲು. ಸೂಚನೆ ಕಾಯುತ್ತ ಒಳಬರಲು ಸಣಕಲು ವ್ಯಕ್ತಿಯೊಬ್ಬ ಕೊಸರಾಡುತ್ತಿದ್ದ. ಅದೊಂದು ಮಹಾ ಬಿಕ್ಕಟ್ಟಿನ ಸನ್ನಿವೇಶ.

"ಇದರ ಮರ್ಮವೇನು ಭಟ್ರೆ ?"

"ನಂಗೆ ಅರ್ಥ ಆಗ್ತಿಲ್ಲ. ಎಲ್ಲೋ ಏನೋ ಭಯಂಕರ ಮುಡುಚಿಟ್ಟು ಆಗಿರಬೇಕು...!"

"ಹಂಗಂತೀರಾ...!? ಹೊರಗಿರೋ ಜನಕ್ಕೆ ಏನ್ ಹೇಳೋದು ? ನೀವೇ ಹ್ಯಾಂಗಾದ್ರೂ ನಿಭಾಯಿಸಿ ಭಟ್ರೆ. ದಕ್ಷಿಣೆ ಜಾಸ್ತಿ ಕೊಡ್ತೀನಿ" ನವರಂಗಸಾನಿಯ ದನಿ ಕಂಪಿಸುತ್ತಿತ್ತು.

"ಈಗೇನಪ್ಪಾ ಮಾಡೋದು, ಹ್ಞಾಂ... ಇರಿ...! ಹೋಗಿ ಈಗ್ಲೆ ಇಪ್ಪತ್ತೊಂದು ದೀಪಗಳ ಗೋಪುರಾರತಿಯನ್ನು ತನ್ನಿ..."

ಇಬ್ಬರೂ ಕೂಡಿ ಸರಸರನೆ ಬತ್ತಿಗಳನ್ನಿರಿಸಿ ಎಣ್ಣೆ ಹೊಯ್ದು ಹೊತ್ತಿಸಿದರು.

ಇದ್ದಕ್ಕಿದ್ದಂತೆ ಕೈಗಂಟೆ ಹೆಚ್ಚೇ ಅನ್ನುವಷ್ಟು ವೇಗದಿಂದ ಸದ್ದು ಮಾಡಿತು. ಅಸ್ಪಷ್ಟ ಮಂತ್ರಗಳ ಪಠಣ ಉದ್ವೇಗಭರಿತವಾಗಿತ್ತು. ನವರಂಗಸಾನಿ ಜಾಗಟೆಯನ್ನು ಶಕ್ತಿಪೂರಾ ಬಿಟ್ಟು ಯರ್ರಾಬಿರ್ರಿ ಬಾರಿಸಿದಳು. ಹೊರಗಿದ್ದವರಿಗೆ ಒಳಗೇನೋ ವಿಲಕ್ಷಣ ನಡೆಯುತ್ತಿದೆ ಅನಿಸಿತು. ಅವರ ಮನಃಸ್ಥಿತಿ ದೈವ ಸಾಕ್ಷಾತ್ಕಾರವಾಗಿಯೇಬಿಟ್ಟಿತೆಂಬ ಭಾವಪರವಶತೆಗೆ ತಲುಪಿತು.

ಪೂಜೆ ಭಟ್ಟ ಆರತಿಯೊಂದಿಗೆ ಹೊರಬಂದ. ಮುಖಭಾವವನ್ನು ಸಾಧ್ಯವಾದಷ್ಟು ಗಡಸು ಗಂಭೀರತೆಗೆ ವರ್ಗಾಯಿಸಿಕೊಂಡಿದ್ದ. ಆರತಿಯ ಬೆಳಕು ಅವನ ಮೋರೆಗೆ ವಿಶೇಷ ಮೆರಗನ್ನು ತಂದಿತ್ತು.

"ಭಕ್ತ ಜನರೇ, ಶಾಂತವಾಗಿರಿ. ಇಲ್ಲೊಂದು ಪವಾಡ ನಡೆದುಬಿಟ್ಟಿದೆ..."

"ಏನು...ಏನು...ಎಂತದು...!?" ಹಲವಾರು ಉದ್ರಿಕ್ತ ದನಿಗಳು ದಾಳಿಯಿಟ್ಟವು.

"ದೇವರು ಅಂತರ್ಧಾನನಾಗಿಬಿಟ್ಟಿದ್ದಾನೆ...!"

"ಅಂದ್ರೆ...!?"

"ಆಗಮನ ಎಷ್ಟು ಅನಿರೀಕ್ಷಿತವಿತ್ತೋ ಅವನ ನಿರ್ಗಮನವೂ ಅಷ್ಟೇ ಅನಿರೀಕ್ಷಿತವಾಗಿದೆ..."

"ನಿಮ್ಮ ಒಗಟು ನಮ್ಮಂತ ಪುಟುಗೋಸಿಗಳಿಗೆ ಅರ್ಥವಾಗೋಲ್ಲ...ಬಿಡಿಸಿ ಹೇಳಿ ಭಟ್ರೆ...!"

"ಗಣಪತಿ ಮಾಯವಾಗಿದ್ದಾನೆ, ಸೊಂಡಿಲ ಜೊತೆ...!"

"ಅಯ್ಯೋ, ಹೌದಾ...!? ಮತ್ತೀಗ...?"

"ಮತ್ತೇನು...? ದೇವರಿಲ್ಲ...!"

"ಹೋಗ್ಲಿ, ಇಲ್ದಿದ್ದನ್ನೇ ನೋಡ್ತೀವಿ...!"

"ಹಂಗಾ...!? ಸರಿ...ಹಾಗೇ ಮಾಡಿ"

"ಛೇ...! ಎಂತ ಕೆಲ್ಸ ಆಯ್ತು...ಭಟ್ರೆ ! ನಮಗೆ ದಕ್ಕಿದ್ದು ಇಷ್ಟೇ ಅನ್ಕೋತೀವಿ..."

"ಒಂದು ಪ್ರಶ್ನೆ ಭಟ್ರೆ, ಇದ್ದಕ್ಕಿದ್ದಂತೆ ಯಾಕ್ ಹೀಗಾಯ್ತು ?" ಯಾರಿಗೋ ಸಮಾಧಾನವಾಗಿರಲಿಲ್ಲ.

"ಯಾವನೋ ಪರಮಪಾಪಿಯ ಆಗಮನದಿಂದ ಈ ಸ್ಥಳ ಶುದ್ಧೀಕರಿಸಲಾಗದಷ್ಟು ಅಪವಿತ್ರಗೊಂಡಿರುವಂತಿದೆ. ಭಗವಂತನೇ ಕ್ರುದ್ಧನಾಗಿದ್ದಾನೆ" ದೇವರ ದಳ್ಳಾಳಿಯ ತೀರ್ಮಾನ ಆಖೈರಾಗಿ ಹೊರಬಿತ್ತು.

ಜನರ ನಡುವೆ ಗುಸುಗುಸು ಶುರುವಾಯಿತು.

"ಸರಿ, ಸರಿ... ಗಲಾಟೆ ಮಾಡ್ದೆ ಖಾಲಿ ದೇವರ ದರ್ಶನ ಮಾಡಿ ಹೋಗಿ. ನಾಳೆಯಿಂದ ದರ್ಶನ ಇರೋಲ್ಲ. ಬೇರೆಯೋರಿಗೆಲ್ಲ ತಿಳಿಸಿಬಿಡಿ... ಹಂಗೆ. ಸರ್ವರಿಗೂ ಸನ್ಮಂಗಳವಾಗಲಿ" ಪೂಜೆ ಭಟ್ಟನ ಘೋಷಣೆಯಾಯಿತು.

ನವರಂಗಸಾನಿ 'ಅಯ್ಯಪ್ಪಾ...!' ಎಂದು ಉದ್ಗರಿಸಿ ನೆಮ್ಮದಿಯಿಂದ ಕುಸಿದು ಕುಳಿತಳು. ಎದೆಯ ಭಾರ ಕಡಿಮೆಯಾಗಿತ್ತು. ಉಸಿರಾಟ ಸಹಜ ಸ್ಥಿತಿಗೆ ಬಂದಿತ್ತು. ಹದಿನಾಲ್ಕು ದಿನಗಳ ದರ್ಶನ ಭಾಗ್ಯ ಕೊನೆಗೊಂಡಿತ್ತು. ಕಾಣಿಕೆ ಹಂಡೆಯ ಕಡೆ ನೋಡಿದಳು. ಪ್ರಾಯಶಃ ಅದು ಮುಕ್ಕಾಲು ಪಾಲು ತುಂಬಿರಬೇಕು. ನಾಳೆಯಿಂದ ಕುಲಕಸುಬಿಗೆ ಅಡೆತಡೆಯಿರುವುದಿಲ್ಲ. ಕಾಣಿಕೆಯ ಹಂಡೆಯನ್ನು ಇನ್ನು ಮುಂದೆ ಅಕ್ಕಿ ತುಂಬಿಡಲು ಬಳಸಬಹುದು. ಕೈಲಿ ಹೆಚ್ಚು ಕಾಸು ಓಡಾಡದ ಕೆಲವು ಗಿರಾಕಿಗಳು ಪಲ್ಲಗಟ್ಟಲೆ ಅಕ್ಕಿಯನ್ನೇ ಅವಳಿಗೆ ಕೊಟ್ಟು ಕಳಿಸುತ್ತಿದ್ದುದುಂಟು. ಹೊಟ್ಟೆಗೂ ಆಗಬೇಕಲ್ಲ.

✶ ✶ ✶

'ಮಹಾಪಾಪಿ' ಮಂಜಪ್ಪಯ್ಯ ಹೆಗಲಿನಿಂದ ಸಾಮಾನಿನ ಚೀಲವನ್ನು ಹಗುರಾಗಿ ನೆಲಕ್ಕಿಳಿಸಿದರು. ರಸ್ಕಿನ ಪೊಟ್ಟಣವನ್ನು ಹೊರತೆಗೆಯುತ್ತಿದ್ದಂತೆ ಮೊಮ್ಮಕ್ಕಳಿಬ್ಬರು ಓಡಿ ಬಂದು ಆಚೀಚೆ ಬಗಲಿಗೆ ಜೋತುಬಿದ್ದರು. ಕರಕರ ಸದ್ದು ಮಾಡುತ್ತ ಅವು ರಸ್ಕು ತಿನ್ನುವಾಗ ಮಂಜಪ್ಪಯ್ಯ "ಮಕ್ಕಳಾ...s...s... ಅಲ್ನೋಡ್ರೋ. ಏಣಿ ಮೆಟ್ಟಲ ಮೇಲೆ ಕಾಳಿ ಬೆಕ್ಕು ಕೂತ್ಗಂಡು ಆಸೆಗಣ್ಣಲ್ಲಿ ನೋಡ್ತಾ ಅದೆ. ಅದಕ್ಕೂ ಒಂಚೂರು ಕೊಡ್ರೋ..." ಎಂದರು.

ಕೆ. ಎಸ್. ರವಿಕುಮಾರ್
ಭಾರತೀಯ ಜೀವ ವಿಮಾ ನಿಗಮ, ಅಂಚೆ ಪೆಟ್ಟಿಗೆ ಸಂಖ್ಯೆ ೯, ಹಾಸನ – ೫೭೩ ೨೦೧

## ಜಾಣತನ

ಕೆಲವರು
ಚಾಪೆಯ ಕೆಳಗೆ ನುಸಿದರೆ,
ಮತ್ತೆ ಕೆಲವರು
ರಂಗೋಲಿಯ ಕೆಳಗೆ;
ಇನ್ನು ಕೆಲವರು
ಜಾಣರಂತೂ
ನೆಲದ ಕೆಳಗೇ !

ಸಿಪಿಕೆ
ಮೈಸೂರು

# ಭಾರತಕ್ಕೊಂದು ಹೊಸ ದಾರಿ ನಿರ್ಮಿಸಿದ ದಾರಿದೀಪ

# ಪ್ರೊಫೆಸರ್ ಯು. ಆರ್. ರಾವ್

ಬಿ. ಎಸ್. ಶೈಲಜಾ

ಬಾಹ್ಯಾಕಾಶ ವಿಜ್ಞಾನಿ, ತಂತ್ರಜ್ಞಾನಿ, ಎಡರು ತೊಡರುಗಳನ್ನೆಲ್ಲಾ ಧೈರ್ಯವಾಗಿ ಮೆಟ್ಟಿನಿಂತ ಛಲಗಾರ, ಇಂದಿನ ಮತ್ತು ಮುಂದಿನ ಹೊಸ ಆವಿಷ್ಕಾರಗಳನ್ನು ಅರ್ಥೈಸಿ ಕರಾರುವಾಕ್ಕಾಗಿ ವಿಶ್ಲೇಷಿಸಬಲ್ಲ ಮೇಧಾವಿ – ಹೀಗೆ ಹಲವಾರು ಉಪಾಧಿಗಳನ್ನು ಪಡೆದ ಒಬ್ಬರೇ ವ್ಯಕ್ತಿ ಪ್ರೊಫೆಸರ್ ಯು. ಆರ್. ರಾವ್ ಅವರು. ಅವರು ಭಾರತದ ಹೆಸರನ್ನು ಬಾಹ್ಯಾಕಾಶ ವಿಜ್ಞಾನದ ವಿಭಾಗದಲ್ಲಿ ಉನ್ನತ ಶೃಂಗಕ್ಕೇರಿಸಲು ಮಾಡಿದ ಸಾಹಸಗಾಥೆ ಅತಿ ದೊಡ್ಡದು. ಹಲವಾರು ದಶಕಗಳ ಈ ರೋಚಕ ಯಾತ್ರೆಯ ಕೆಲವು ಮುಖ್ಯ ಅಂಶಗಳನ್ನು ಮಾತ್ರ ಹೇಳುವುದಾದರೂ ಪುಟಗಳಷ್ಟು ವಿಸ್ತರಿಸುತ್ತದೆ.

ಪೀಣ್ಯದಲ್ಲಿ ಷೀಟು ಹೊದ್ದು ನಿಂತಿದ್ದ ಷೆಡ್‌ಗಳಲ್ಲಿ ತಯಾರಾದ ಉಪಗ್ರಹಗಳು ಇಂದು ನಮ್ಮ ದೇಶದ ಪ್ರತಿಯೊಬ್ಬ ಪ್ರಜೆಗೂ ಬಲಗೈ ಆಗಿವೆ. ಆರ್ಯಭಟ ಮೊದಲ ಪ್ರಯತ್ನ – ಸೀಮಿತ ಸೌಕರ್ಯ ಮತ್ತು ಧನಬಲ, ಅನನುಭವಿಗಳ ಮೊದಲ ಹೆಜ್ಜೆಗಳು, ಜೊತೆಗೆ ಗುರಿ ಮುಟ್ಟಲು ನಿಗದಿಯಾಗಿದ್ದ ಅಲ್ಪಾವಧಿ – ಈ ಎಲ್ಲ ಸವಾಲುಗಳನ್ನೂ ಎದುರಿಸಿ, ಆರ್ಯಭಟ ಮುಗಿಲಿಗೇರಿದ್ದು ಇತಿಹಾಸ. ಅದರ ಹಿಂದೆಯೇ ಭಾಸ್ಕರ ೧ ಮತ್ತು ೨, ರೋಹಿಣಿ ಎಂಬ ಉಪಗ್ರಹ ಮುಂದೆ ದೂರಸಂವೇದಿ ಉಪಗ್ರಹಗಳ ಶೃಂಖಲೆಗೆ ನಾಂದಿ ಹಾಡಿದವು. ಹಾಗೆಯೇ ಆ್ಯಪಲ್ ಎಂಬ ಪ್ರಯೋಗ ಇನ್‌ಸ್ಯಾಟ್ ಸರಣಿಯನ್ನು ಆರಂಭಿಸಿತು. ಈ ಎಲ್ಲ ಯೋಜನೆಗಳ ರೂವಾರಿಯಾಗಿ ಪ್ರೊಫೆಸರ್ ಯು. ಆರ್. ರಾವ್ ಅವರು ಹೊಸಪೀಳಿಗೆಯ ಎಂಜಿನಿಯರ್‌ಗಳನ್ನೂ ತಯಾರಿ ಮಾಡಿದರು. ಈಗ ಪಿ.ಎಸ್. ಎಲ್.ವಿ., ಜಿ.ಎಸ್. ಎಲ್.ವಿ., ಕ್ರಯೋಜೆನಿಕ್ ಲಾಂಚರ್‌ಗಳ ಮೂಲ ಯಂತ್ರವಾಗಿ ಎ.ಎಸ್.ಎಲ್.ವಿ. ಸಿದ್ಧವಾಯಿತು.

ಈ ಉಪಗ್ರಹಗಳಿಂದ ಪ್ರಯೋಜನವೇನು ಎಂದು ಮೂಗೆಳೆಯುತ್ತಿದ್ದವರಿಗೆ ಅದರ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಟ್ಟವರೇ ಪ್ರೊಫೆಸರ್ ಯು. ಆರ್. ರಾವ್ ಅವರು. ಕುಡಿಯುವ ನೀರಿನ ಯೋಜನೆಗಳು, ಕೃಷಿ, ಮೀನುಗಾರಿಕೆ, ಹವಾಮಾನ ಮುನ್ಸೂಚನೆ, ಪರಿಸರ ರಕ್ಷಣೆಯೇ ಅಲ್ಲದೆ ನೈಸರ್ಗಿಕ ವಿಕೋಪಗಳ ನಿರ್ವಹಣೆಯಲ್ಲೂ ರಾಷ್ಟ್ರೀಯ ಮಟ್ಟದಲ್ಲಿ ಸಂಚಾಲನೆ ಮೂಡಿಸಿದರು.

೬೦ರ ನಿವೃತ್ತಿ ಅವರ ಕಾರ್ಯಕ್ಷೇತ್ರವನ್ನು ಮೊಟಕುಮಾಡಲಿಲ್ಲ. ಅಂತರರಾಷ್ಟ್ರೀಯ ಮಟ್ಟದಲ್ಲಿ ಸಲಹೆಗಾರರಾದರು. ಚಂದ್ರಯಾನ, ಮಂಗಳಯಾನ – ಈ ಎಲ್ಲ ಹೊಸ ಯೋಜನೆಗಳಿಗೂ ಮುಖ್ಯ ಸಲಹೆಗಾರರಾದರು. ಇತರ ದೇಶಗಳು ಸಾಧಿಸಿದ್ದಕ್ಕಿಂತ ಒಂದು ಹೆಜ್ಜೆ ಮುಂದೆ ನಾವಿರಬೇಕು ಎಂಬ ಹಂಬಲ ಈಗ ಸಿದ್ಧವಾಗುತ್ತಿರುವ 'ಆದಿತ್ಯ' ಎಂಬ ಸೌರ ಅಧ್ಯಯನಕ್ಕೆ ಮೀಸಲಾದ ಉಪಗ್ರಹದ ಯೋಜನೆಯಲ್ಲೂ ಸೇರಿದೆ. ಅದು ಹಿಂದೆ ಯಾವ ಉಪಗ್ರಹವೂ ತಲುಪಿಲ್ಲದ ಸ್ಥಳದಿಂದ ವೀಕ್ಷಣೆ ನಡೆಸಲಿದೆ.

ತಂತ್ರಜ್ಞಾನದಲ್ಲಿ ನಾವು ಸಾಧಿಸಿದ ಯಶಸ್ಸು ಇತರ ದೇಶಗಳನ್ನು ಆಕರ್ಷಿಸುವುದು ಎಂಬುದನ್ನು ಮನಗಂಡ ಅವರು ಆಂತ್ರಿಕ್ಸ್ ಎಂಬ ಸಂಸ್ಥೆಯನ್ನೂ ಹುಟ್ಟುಹಾಕಿ ಗಗನಯಾನವು ಉತ್ಕೃಷ್ಟ ವಾಣಿಜ್ಯೋದ್ಯಮವಾಗ ಬಲ್ಲದು ಎಂದು ನಿರೂಪಿಸಿದರು. ಈಚೆಗೆ ಇಸ್ರೋ ೧೦೪ ಉಪಗ್ರಹಗಳನ್ನು ಒಂದೇ ಉಡಾವಣೆಯಲ್ಲಿ ಕಕ್ಷೆಗೆ ಸೇರಿಸಿತು. ಇವುಗಳಲ್ಲಿ ಮೂರು ಮಾತ್ರ ಭಾರತದ್ದು. ೯೬ ಅಮೆರಿಕದ್ದು!

ಉಡುಪಿಯ ಸಮೀಪದ ಅದಮಾರುವಿನಿಂದ ಬಂದ ಬಡಕುಟುಂಬದ ಹುಡುಗ ಹೀಗೆ ಇತಿಹಾಸವನ್ನೇ ಸೃಷ್ಟಿ ಮಾಡಿದ್ದು ನಮಗೆಲ್ಲ ಹೆಮ್ಮೆಯ ವಿಷಯ.

**ಪ್ರೊಫೆಸರ್ ಯು. ಆರ್. ರಾವ್ – ಇನ್ನೊಂದು ಮುಖ**

ತಾರಾಲಯಕ್ಕೂ ಪ್ರೊಫೆಸರ್ ರಾವ್ ಅವರಿಗೂ ಬೆಸೆದ ನಂಟು ೩೦ ವರ್ಷಗಳಿಗೂ ಹಳೆಯದು. ಅವರು ೧೯೭೨ರಲ್ಲಿ ಬೆಂಗಳೂರಿಗೆ ಬಂದಾಗ ಸತೀಶ್ ಧವನ್ ಅವರೊಡನೆ ನಡೆಸಿದ ಒಡನಾಟ ಮುಂದೆ ಭಾರತ ಬಾಹ್ಯಾಕಾಶ ಯುಗಕ್ಕೆ ಪದಾರ್ಪಣ ಮಾಡಿದುದರ ಜೊತೆಯಲ್ಲಿಯೇ ಬೆಳೆದು ಬಂದು ಇನ್ನೊಂದು ಕುಡಿ ತಾರಾಲಯ.

ತಾರಾಲಯ ಎಂಬುದು ಸತೀಶ್ ಧವನ್ ಅವರ ಕನಸು. ಅದಕ್ಕಾಗಿ ಅವರು ಸೂಕ್ತ ಸ್ಥಳ, ಉಪಕರಣ ಅಲ್ಲದೆ ಸಮರ್ಥ ವ್ಯಕ್ತಿಗಳನ್ನೂ ಕಲೆಹಾಕಿದರು. ಯು. ಆರ್. ರಾವ್ ಅವರು ಆ ಸಂದರ್ಭದಲ್ಲಿ ಜೊತೆಗೂಡಿದರು. ಇತ್ತೀಚೆಗಷ್ಟೇ ದಿವಂಗತರಾದ ಪ್ರೊಫೆಸರ್ ಸಿ. ವಿ. ವಿಶ್ವೇಶ್ವರ ಅವರನ್ನು ಆರಿಸಿ ನಿರ್ದೇಶಕರನ್ನಾಗಿ ಜವಾಬ್ದಾರಿ ಹೊರಿಸಿದರು. ತಾರಾಲಯದಲ್ಲಿ ನಕ್ಷತ್ರ ಲೋಕದ ಅನಾವರಣ ವಾಯಿತು. ಆದರೆ, ಅಲ್ಲಿಗೆ ಕೆಲಸ ಮುಗಿಯಲಿಲ್ಲ. ಅದನ್ನು ಸ್ಥಾಪಿಸಿದ ಬೆಂಗಳೂರು ಮಹಾನಗರ ಪಾಲಿಕೆ (ಆಗಿನ್ನೂ ಬೃಹತ್ ಆಗಿರಲಿಲ್ಲ), ಇದರ ನಿರ್ವಹಣೆ ನಡೆಸಲು ಪರ್ಯಾಯ ವ್ಯವಸ್ಥೆ ಮಾಡಬೇಕೆಂದಿತ್ತು. ಬೆಂಗಳೂರು ಅಸೋಸಿಯೇಷನ್

ಫಾರ್ ಸೈನ್ಸ್ ಎಜುಕೇಷನ್ ಎಂಬ ಸ್ವಾಯತ್ತ ಸಂಸ್ಥೆ ರೂಪುಗೊಂಡಿತು. ಯು. ಆರ್. ರಾವ್ ಅವರೇ ಅದರ ಅಧ್ಯಕ್ಷರಾದರು. ಈ ಆಡಳಿತ ಮಂಡಳಿಯಲ್ಲಿ ಪ್ರೊಫೆಸರ್ ರೊದ್ದಂ ನರಸಿಂಹ, ಜೆ. ಸಿ. ಭಟ್ಟಾಚಾರ್ಯ, ಎಚ್. ನರಸಿಂಹಯ್ಯ ಮುಂತಾದ ವಿಜ್ಞಾನಿಗಳಲ್ಲದೆ, ಅಂದಿನ ಪದನಿಮಿತ್ತ ಅಧಿಕಾರಿಗಳಾಗಿ ಶ್ರೀ ಎ. ರವೀಂದ್ರ ಅವರೂ ಸೇರಿದ್ದರು. ರಾವ್ ಅವರ ಅಧ್ಯಕ್ಷತೆಯಲ್ಲಿ ಸ್ವಾಯತ್ತ ಸಂಸ್ಥೆ ರೂಪಿಸಿದ ಗುರಿಗಳು ಎರಡು – ವಿಜ್ಞಾನವನ್ನು ಜನಪ್ರಿಯಗೊಳಿಸುವುದು ಮತ್ತು ಅಸಾಂಪ್ರದಾಯಿಕ ಪದ್ಧತಿಯಲ್ಲಿ ವಿಜ್ಞಾನ ಶಿಕ್ಷಣ. ಈ ೨೫ ವರ್ಷಗಳಲ್ಲಿ ತಾರಾಲಯ ಒಂದು ಅದ್ವಿತೀಯ ಸ್ಥಾನ ಗಳಿಸಿಕೊಂಡಿರುವುದಕ್ಕೆ ಈ ಎಲ್ಲ ರೂವಾರಿಗಳೂ ಕಾರಣ.



ತಾರಾಲಯ ಬೆಳೆದು ಬಂದ ಹಾದಿಯ ಹೆಗ್ಗುರುತುಗಳಲ್ಲಿ ಪ್ರೊಫೆಸರ್ ರಾವ್ ಅವರ ಪಾತ್ರ ಹಿರಿದು. ಆಡಳಿತಾತ್ಮಕ ನಿರ್ಧಾರಗಳಲ್ಲದೆ ತಂತ್ರಜ್ಞಾನ ಹಾಗೂ ಶೈಕ್ಷಣಿಕ ವಿಷಯಗಳಲ್ಲಿಯೂ, ಅವರ ಸಲಹೆಗಳು ಇಲ್ಲಿ ಅತ್ಯಮೂಲ್ಯವಾದವು. ಪ್ರತಿಯೊಂದು ಕಾರ್ಯಕ್ರಮವನ್ನೂ ವೀಕ್ಷಿಸಿ, ಸಲಹೆ, ಸೂಚನೆಗಳನ್ನು ಕೊಡುತ್ತಿದ್ದರು. ಆರ್ಥಿಕವಾಗಿ ಸಂಕಷ್ಟದಲ್ಲಿದ್ದ ಕಾಲದಲ್ಲಿ ಕರ್ನಾಟಕ ಸರ್ಕಾರಕ್ಕೆ ತಾರಾಲಯದ ಶೈಕ್ಷಣಿಕ ಮೌಲ್ಯವನ್ನು ಮನದಟ್ಟು ಮಾಡಿಕೊಟ್ಟವರೇ ಅವರು. ಎರಡು ವರ್ಷಗಳ ಹಿಂದೆ ತಾರಾಲಯದ ಉಪಕರಣಗಳನ್ನು ನವೀಕರಣಗೊಳಿಸುವ ಸಂದರ್ಭದಲ್ಲಿಯೂ ಬಹಳ ಆಸಕ್ತಿವಹಿಸಿ ನಮ್ಮ ಕಾರ್ಯಕ್ರಮಗಳಿಗೆ ಅತ್ಯವಶ್ಯಕವಾದ ಪ್ರೊಜೆಕ್ಟರ್‌ಗಳನ್ನೇ ಖರೀದಿಸುವಂತೆ ಸಲಹೆ ನೀಡಿದರು. ಇದಕ್ಕೆ ಪೂರಕವಾಗಿ ಥಿಯೇಟರ್ ಒಳಗೆ ಮಾಡಬೇಕಾಗಿದ್ದ ಮಾರ್ಪಾಟುಗಳನ್ನು ಖುದ್ದಾಗಿ ಪರಿಶೀಲಿಸುತ್ತಿದ್ದುದು ಎಲ್ಲ ಸಿಬ್ಬಂದಿಗಳಿಗೂ ಸ್ಫೂರ್ತಿಯನ್ನೇ ಉಂಟುಮಾಡುತ್ತಿತ್ತು. ಕೇವಲ ಹತ್ತು ತಿಂಗಳ ದಾಖಲೆಯ ಅವಧಿಯಲ್ಲಿ ಹೊಸ ವ್ಯವಸ್ಥೆ ಸಜ್ಜಾಗಿ ಪ್ರದರ್ಶನದ ಉದ್ಘಾಟನೆಯೂ ಆಯಿತು. ಎಲ್ಲ ಹಂತಗಳಲ್ಲಿಯೂ ಅವರ ಮಾರ್ಗದರ್ಶನ ಅಮೂಲ್ಯವಾದದ್ದು.

ವೈಯಕ್ತಿಕವಾಗಿ ಅವರೊಡನೆ ಒಡನಾಟ ನನಗೆ ಲಭಿಸಿದ್ದು ಕಳೆದ ಆರೇಳು ವರ್ಷಗಳಲ್ಲಿ. ಅದಕ್ಕೆ ಮುಂಚೆ ಭೇಟಿ ಬಹಳ ಚುಟುಕಾಗಿ ಮುಗಿದುಹೋಗುತ್ತಿತ್ತು. 'ಗ್ರಹಣ' ಎಂಬ ಪುಸ್ತಕದ ಮುನ್ನುಡಿಗಾಗಿ ಅವರನ್ನು ಇಪ್ಪತ್ತು ವರ್ಷದ ಹಿಂದೆ ಸಂಪರ್ಕಿಸಿದ್ದೆ. ಆ ಸಂದರ್ಭದಲ್ಲಿ ಅವರು ೧೯೮೦ರಲ್ಲಿ ಹುಬ್ಬಳ್ಳಿಯಿಂದ ತಾವು ನಡೆಸಿದ್ದ ಪ್ರಯೋಗಗಳ ವಿವರಗಳನ್ನು ತಿಳಿಸಿದ್ದರು. ಮುಂದೊಮ್ಮೆ ಅವರ ಭೇಟಿ ಆಶ್ಚರ್ಯಕರ ರೀತಿಯಲ್ಲಿ ನಡೆಯಿತು. ಒಂದು ದಿನ ಅವರ ಕಛೇರಿಯಿಂದ ಒಂದು ದೂರವಾಣಿ ಕರೆ ಬಂದಿತು. ನನ್ನನ್ನು ಅಭಿನಂದಿಸುವುದೇ ಉದ್ದೇಶ. ಆಗ ಅವರು ಪ್ರಸಾರ ಭಾರತೀಯ ಅಧ್ಯಕ್ಷರಾಗಿದ್ದರು. ಕನ್ನಡದ ರೇಡಿಯೋ ಧಾರಾವಾಹಿಯೊಂದಕ್ಕೆ ಅಂತರರಾಷ್ಟ್ರೀಯ ಪ್ರಶಸ್ತಿ ಬಂದಿತ್ತು. ಆ ಧಾರಾವಾಹಿ 'ಸಮಯ'ದ ಸರಣಿಗೆ ನಾನೂ ಲೇಖನ–ಸಂಭಾಷಣೆಗಳನ್ನು ಬರೆದುಕೊಟ್ಟಿದ್ದೆ. ಆದ್ದರಿಂದ ಪಟ್ಟಿಯಲ್ಲಿ ನನ್ನ ಹೆಸರಿತ್ತು. ಅದಕ್ಕಿಂತ ಆಶ್ಚರ್ಯವೆಂದರೆ ಅವರು ನನ್ನ ಹೆಸರನ್ನು ಗುರುತಿಸಿ ಅಭಿನಂದಿಸಿದ್ದು. ಅದಾದ ಕೆಲವೇ ದಿನಗಳಲ್ಲಿ ಯವನಿಕಾದಲ್ಲಿ ಒಂದು ಸಭೆ ನಡೆಯಿತು. ಪ್ರೇಕ್ಷಕರ ನಡುವೆ ಇದ್ದ ನನ್ನನ್ನು ಗುರುತಿಸಿ, ನನ್ನ ವಂದನೆಗಳಿಗೆ ಪ್ರತಿಕ್ರಿಯಿಸಿದ್ದು ಇನ್ನೂ ಒಂದು ವಿಶೇಷ ಎನ್ನಬಹುದು.

ಆಡಳಿತಾತ್ಮಕವಾಗಿ ನಡೆಸುತ್ತಿದ್ದ ಭೇಟಿಗಳಲ್ಲಿ ಅವರ ತೀಕ್ಷ್ಣ ಮುಂದಾಲೋಚನೆಯ ಅರಿವು ಮೂಡಿಸಿತು. ಚುಟುಕಾದ ಭೇಟಿಗಳ ನಡುವೆ ಅವರು ಕೆಲವು ಅನುಭವ ಗಳನ್ನು ವಿವರಿಸುತ್ತಿದ್ದರು. ಯಾವ ನಿರ್ಧಾರದಿಂದ ಎಂಥ ತೊಂದರೆಗಳು ಎದುರಾಗುತ್ತವೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತಿದ್ದರು. ಗ್ರಾಮೀಣ ಶಾಲೆಗಳ ಶಿಕ್ಷಕರ ಕುರಿತು ಅವರಿಗೆ ಬಹಳ ಕಾಳಜಿ ಇತ್ತು. ಆದ್ದರಿಂದ ಶಿಕ್ಷಕರಿಗಾಗಿಯೇ ಕೆಲವೊಂದು ಕಾರ್ಯಕ್ರಮಗಳನ್ನು ನಿಯೋಜಿಸಿದರು. ಅಂತಹ ಒಂದು ಕಾರ್ಯಕ್ರಮಕ್ಕೆ ಮಾಜಿ ರಾಷ್ಟ್ರಪತಿಗಳಾದ ಅಬ್ದುಲ್ ಕಲಾಂ ಅವರೂ ಬಂದಿದ್ದರು.

ಮಂಗಳಯಾನದ ಉಡಾವಣೆಯ ಸಂದರ್ಭದಲ್ಲಿ ತಾರಾಲಯದಲ್ಲಿ ಒಂದು ವಿಶೇಷ ಪ್ರದರ್ಶನ ಏರ್ಪಾಟು ಮಾಡಿದ್ದೆವು. ಅವರ ಸಲಹೆಯಂತೆ ಆಕರ್ಷಕವಾದ ಭಿತ್ತಿಚಿತ್ರಗಳು, ಕಮ್ಮಟಗಳು, ತಾರಾಲಯದ ವಿಶೇಷ ಪ್ರದರ್ಶನ – ಇವೆಲ್ಲವನ್ನೂ ಅಣಿಗೊಳಿಸಿದ್ದೆವು. ಜೊತೆಗೆ ಮಿನಿ ರಾಕೆಟ್ ಉಡಾವಣೆ ನಡೆಸಿದ್ದೆವು. ಅದಕ್ಕೊಂದು ಪುಟ್ಟ ಲಾಂಚ್ ಪ್ಯಾಡ್, ಕಂಟ್ರೋಲ್ ರೂಂ ಏರ್ಪಾಟು ಮಾಡಿ ಬಟನ್ ಒತ್ತಿದೊಡನೆ ರಾಕೆಟ್ ಚಿಮ್ಮುವ ವ್ಯವಸ್ಥೆ ಮಾಡಿದ್ದೆವು. ಈ ಮಕ್ಕಳಾಟಿಕೆ ಅವರಿಗೆ ಏನು ಭಾವನೆ ಮೂಡಿಸೀತೋ ಎಂದು ಅನುಮಾನವಿತ್ತು. ಮಕ್ಕಳೆಲ್ಲಾ ೧೦, ೯, ೮, ೭... ಹೀಗೆ ಎಣಿಸಿ ಕೊನೆಗೆ ರಾಕೆಟ್ ಚಿಮ್ಮಿದಾಗ ಪಟ್ಟ ಸಂಭ್ರಮದಲ್ಲಿ ಅವರೂ ಭಾಗಿಯಾದರು.

ಮಹಾನ್ ವಿಜ್ಞಾನಿಗಳೊಡನೆ ಮುಖಾಮುಖಿಗೆ ಅವಕಾಶ ಸಿಕ್ಕಿದೆ ಎಂದು ವಿದ್ಯಾರ್ಥಿಗಳಿಗೆಲ್ಲಾ ಏನೋ ಒಂದು ಖುಷಿ, ಸಂಭ್ರಮ. ಒಬ್ಬ ಹುಡುಗ ಕೇಳಿದ ಪ್ರಶ್ನೆಗೆ (ನೀವು ಸಣ್ಣವರಿದ್ದಾಗ ಚಂದ್ರನ ಮೇಲೆ ಇಳಿಯುವ ಕನಸು ಕಂಡಿದ್ದಿರಾ?) ಅವರು ಉತ್ತರಿಸಿದ್ದು, "ಚಂದ್ರನಿಗೆ ಹೋಗುವುದಿರಲಿ; ರೈಲಿನಲ್ಲಿ ಹೋಗಬಹುದೆಂದೂ ನನಗೆ ಗೊತ್ತಿರಲಿಲ್ಲ. ೧೮ ವಯಸ್ಸಾಗುವವರೆಗೆ ರೈಲನ್ನೇ ನೋಡಿರಲಿಲ್ಲ" ಎಂದು ! ಮಕ್ಕಳು ಆಶ್ಚರ್ಯದಿಂದ ಮೂಕರಾದರು.

ಪ್ರೊಫೆಸರ್ ಯು. ಆರ್. ರಾವ್ ಅವರು ತಾರಾಲಯದಲ್ಲಿ ನಡೆಸಿದ ಸಂವಾದದ ಒಂದು ತುಣುಕು ಇದು. ಕೆಲವೊಮ್ಮೆ ಅವರು ಕೆಲವು ಸ್ವಾರಸ್ಯಕರ ಘಟನೆಗಳನ್ನು ವಿವರಿಸುತ್ತಿದ್ದರು. ಈ ಘಟನೆ ಅಲಾಸ್ಕಾದಲ್ಲಿ ನಡೆದಿದ್ದು. ಭಾರತೀಯ ವಿಜ್ಞಾನಿಗಳ ತಂಡವೊಂದು (ಅದರಲ್ಲಿ ಒಬ್ಬ ಸರದಾರ್‌ಜೀ ಇದ್ದರು) ಅಲ್ಲಿಯ ಉಪಗ್ರಹ ಕೇಂದ್ರಕ್ಕೆ ಭೇಟಿ ನೀಡಿತು. ಈ ತಂಡ ಅಲ್ಲಿಳಿದ ಕೂಡಲೇ, ಅಲ್ಲಿ ಕೆಲಸದಲ್ಲಿ ನಿರತರಾಗಿದ್ದ ಸ್ಥಳೀಯರೆಲ್ಲಾ (ಭೂತ ಕಂಡವರಂತೆ) ಓಡಿ ಹೋಗಿಬಿಟ್ಟರು. ಇದರಿಂದ ಈ ತಂಡ ತಬ್ಬಿಬ್ಬಾಯಿತು; ಕರೆದುಕೊಂಡು ಹೋದ ಆತಿಥೇಯರಿಗೂ ಮುಜುಗರವಾಯಿತು. ಆದರೆ ಕೆಲವೇ ನಿಮಿಷಗಳಲ್ಲಿ ಎಲ್ಲರೂ ವಾಪಸ್ಸು ಬಂದರು. ಪ್ರತಿಯೊಬ್ಬನ ಕೈಯಲ್ಲೂ ಕ್ಯಾಮೆರಾ – ಕಾರಣ? ಅವರ್‍ಯಾರೂ ಎಂದೂ ಸರದಾರಜೀಯನ್ನು ನೋಡಿರಲೇ ಇಲ್ಲವಂತೆ !

ನಮ್ಮ ಉದ್ಯಾನದಲ್ಲಿ ಹೊಸದಾಗಿ ನಿರ್ಮಿಸಿರುವ "ಪ್ರತಿ ಗುರುತ್ವ ಕುಟೀರ"ವನ್ನು ವೀಕ್ಷಿಸಿದಾಗ ಅವರು ಏನೂ ಪ್ರತಿಕ್ರಿಯಿಸದಿದ್ದುದು ನಮಗೆ ಸ್ವಲ್ಪ ನಿರಾಶೆಯನ್ನುಂಟು ಮಾಡಿತು. ಏಕೆಂದರೆ ಭಾರತದಲ್ಲಿಯೇ ಮೊದಲ ಬಾರಿ ನಾವಿದನ್ನು ನಿರ್ಮಿಸಿದ್ದೇವೆ. (ಹಾಗೆಂದು ಹೆಮ್ಮೆಯೂ ಮೂಡಿದೆ.) ಆದರೆ ಸಭೆಯೊಂದರಲ್ಲಿ ಅವರು "ತಾರಾಲಯದಲ್ಲಿ ಗುರುತ್ವ ತತ್ವವನ್ನೇ ತಲೆಕೆಳಗು ಮಾಡುವ ಒಂದು ಕೋಣೆ ಕಟ್ಟಿದ್ದಾರೆ" ಎಂದು ಘೋಷಿಸಿದಾಗ ಬಹಳ ಹೆಮ್ಮೆ ಎನಿಸಿತು.

ನಮ್ಮ ಎಲ್ಲ ಕಾರ್ಯಕ್ರಮಗಳಿಗೂ ಸಲಹೆ ಸೂಚನೆ ನೀಡುತ್ತಿದ್ದ ಅವರು ಉದ್ಘಾಟನೆಯಾದ ಮೇಲೆ ಕಟುವಾಗಿ ಟೀಕೆ ಮಾಡುತ್ತಿದ್ದರು. ಯಾವ ತಪ್ಪುಗಳನ್ನು ತಿದ್ದಿಕೊಳ್ಳಬೇಕು ಎಂದು ವಿಮರ್ಶಿಸಿ ಹೇಳುತ್ತಿದ್ದರು. ಇದು ತಂದೆ–ತಾಯಿಗಳ ದೃಷ್ಟಿಯಂತೆ ಎನ್ನಬಹುದು. ಈ ಬುದ್ಧಿವಾದ ಬೇರೆ ಯಾರೂ ನೀಡುವಂತಹುದಲ್ಲ. ಹೊಗಳಿಕೆಯ ಮಾತಂತೂ ದೂರವೇ ಉಳಿಯಿತು. ಆದರೆ ಮೂರನೆಯವರ ಎದುರಿಗೆ "ನಮ್ಮ ತಾರಾಲಯ ತನ್ನದೇ ಸ್ವಂತ ಕಾರ್ಯಕ್ರಮಗಳನ್ನು ನಿರ್ಮಿಸುತ್ತಿರುವ ಏಕೈಕ ಸಂಸ್ಥೆ – ಅದರ ಗುಣಮಟ್ಟ ಇತರ (ಹೊರದೇಶಗಳಿಂದ ಕೊಂಡುಕೊಳ್ಳುವ) ಕಾರ್ಯಕ್ರಮಗಳಿಗೆ ಇರುವುದಿಲ್ಲ" ಎಂದು ಘೋಷಿಸುತ್ತಿದ್ದರು. ನಮ್ಮ ಭವಿಷ್ಯ ಮಕ್ಕಳ ಕೈಲಿದೆ – ಆದ್ದರಿಂದ ಮಕ್ಕಳಿಗೆ ಜ್ಞಾನಾರ್ಜನೆ ನೀಡುವ ಅತ್ಯುತ್ತಮ ಸಾಧನವೇ ತಾರಾಲಯ ಎಂದವರು ನಂಬಿದ್ದರು.

ತಂದೆಯಂತೆ ನೋಡಿಕೊಳ್ಳುತ್ತಿದ್ದ ಈ ಜೀವ ಇನ್ನಿಲ್ಲ. ಹೊಸ ಪ್ರೊಜೆಕ್ಟರ್‌ನ ಹೊಸ ಕಾರ್ಯಕ್ರಮಗಳನ್ನು ತಯಾರಿಸುವ ಈ ಸಂದರ್ಭದಲ್ಲಿ ಅವರ ನೆನಪಾಗುತ್ತದೆ. ಕಾರ್ಯಕ್ರಮದ ಕಟು ವಿಮರ್ಶೆ ಇನ್ನು ಮೇಲೆ ಸಿಗುವಂತಿಲ್ಲ. ಆದರೆ, ಅವರು ಏನು ಹೇಳಿದ್ದಿರಬಹುದು ಎಂದು ಊಹಿಸುವಷ್ಟು ಜ್ಞಾನವನ್ನು ಧಾರೆ ಎರೆದಿದ್ದಾರೆ. ಅದೇ ನಮ್ಮ ಮುಂದಿನ ಕಾರ್ಯಕ್ರಮಗಳಿಗೆ ಮಾರ್ಗದರ್ಶನವಾಗಲಿದೆ.

**ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

**ಹೋ**ರಾಟದ ಹಾದಿಯಲ್ಲಿ ನಿಸರ್ಗ ಸಹಜವಾದ ವಿವೇಕ, ಧರ್ಮದ ಹಾದಿಯಲ್ಲಿ ಆಧ್ಯಾತ್ಮಿಕವಾದ ಎಚ್ಚರ, ಸಮಾಜ ಸುಧಾರಣೆಯ ಹಾದಿಯಲ್ಲಿ ಜಾತಿಪದ್ಧತಿಯ ನಿರಾಕರಣೆ, ಬದಲಾಗದ ತತ್ವನಿಷ್ಠೆಯಲ್ಲಿ ಪ್ರಖರವಾದ ವೈಚಾರಿಕತೆ – ಇವುಗಳೆಲ್ಲ ಒಂದರೊಳಗೊಂದು ಹಾಸುಹೊಕ್ಕು ನೇಯ್ದ ಅರಿವೆಯಂತಿರುವುದನ್ನು ವಚನ ಚಳುವಳಿ ಮತ್ತು ವಚನ ಸಾಹಿತ್ಯದಲ್ಲಿ ನಿಚ್ಚಳವಾಗಿ ಮನಗಾಣಬಹುದು.

“ವಚನಸಾಹಿತ್ಯದಲ್ಲಿ ಜಾತಿನಿರಸನದ ಪ್ರಸ್ತಾಪ ಅಷ್ಟು ಪ್ರಖರವಾಗಿಲ್ಲ ಎಂಬ ಅಭಿಪ್ರಾಯವಿದೆ. ಸರಿಯೇ?” – ಇದು ಸಂದೇಹಿ ಮಾನವರ ಪ್ರಶ್ನೆಯೇ ಸರಿ! ಮರದ ತುಂಡೊಂದನ್ನು ಎರಡು ಮಾಡಿ, ನಡುವೆ ಹೊಸೆದಾಗ ಕಿಡಿಯಾಗಿ ಹೊಮ್ಮಿ, ಕಿಚ್ಚಾಗಿ ಬೆಳೆದು, ನಂತರ ಕಾಳ್ಗಿಚ್ಚಾಗುವ ಪರಿವರ್ತನೆಯನ್ನು ಗಮನಿಸಿದರೆ, ಕಿಡಿ–ಕಿಚ್ಚು–ಕಾಳ್ಗಿಚ್ಚುಗಳನ್ನು ಪ್ರತ್ಯೇಕಿಸಿ ನೋಡಲಾಗದು. ವಚನಸಾಹಿತ್ಯದಲ್ಲಿ ಜಾತಿಪದ್ಧತಿಯ ವಿರುದ್ಧ ಸಿಡಿದ ಕಿಡಿ, ಕಿಚ್ಚಾಗಿ ಬೆಳೆದು, ಕಾಳ್ಗಿಚ್ಚಾಗಿ ಹಬ್ಬಿರುವುದನ್ನು ಗಮನಿಸಬೇಕು :

*ನಿಡಿದೊಂದು ಕೋಲನು ಕಡಿದು ಎರಡು ಮಾಡಿ*
*ಅಡಿಯ ಹೆಣ್ಣ ಮಾಡಿ, ಒಡತಣದ ಗಂಡ ಮಾಡಿ*
*ನಡುವೆ ಹೊಸೆದಡೆ ಹುಟ್ಟಿದ ಕಿಚ್ಚು ಹೆಣ್ಣೋ*
*ಗಂಡೋ ರಾಮನಾಥ.*

ಅಲ್ಲಮನ ವಚನದಲ್ಲಿ “ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೆ?” ಎಂಬ ಪ್ರಶ್ನೆಯಿದೆ. ಬೆಂಕಿ ಒರಿಜಿನಲ್, ಬಿಸಿನೀರು ಡೂಪ್ಲಿಕೇಟ್ ಎಂದು ಅರ್ಥ ಮಾಡಿಕೊಳ್ಳಬೇಕು. ಬೆಂಕಿಯ ಪ್ರಮಾಣ ಎಷ್ಟು? ಬಿಸಿನೀರಿನ ಪ್ರಮಾಣ ಎಷ್ಟು? – ಎಂದು ಅಳತೆ ಮಾಡಲಾಗುತ್ತದೆಯೆ? ಒಂದು ಹಂಡೆ ಒಲೆಯ ಬೆಂಕಿ ಮತ್ತು ಒಂದು ಹಂಡೆ ಬಿಸಿನೀರು ಎಂದು ಹೇಳಬಹುದೆ? ಬೆಂಕಿಯು ಕಿಡಿಯಾದರೇನು? ಬಿಸಿನೀರು ಹನಿಯಾದರೇನು? – ಗುಣಾತ್ಮಕ ವ್ಯತ್ಯಾಸ ಬದಲಾಗುವುದಿಲ್ಲ. ಜಾತಿಸಂಬಂಧಿ ವಚನಗಳ ಪ್ರಮಾಣವನ್ನು ಇಟ್ಟುಕೊಂಡು ಜಾತಿಪರ ಮತ್ತು ಜಾತಿ ವಿರೋಧ ಎಂದು ತುಲಾಭಾರ ನ್ಯಾಯಮಾಡುವುದು ಅಪಾಯಕಾರಿ. ಏಕೆಂದರೆ, ವಚನಸಾಹಿತ್ಯದಲ್ಲಿ ಹುಸಿನುಸುಳುಗಳು ಸಮೃದ್ಧವಾಗಿವೆ.

ಹನ್ನೆರಡನೆಯ ಶತಮಾನದ ವಚನಸಾಹಿತ್ಯವು ನಿರಂಕುಶಮತಿಗಳ ಸೃಷ್ಟಿ. ನಂತರ ಎಂಟುನೂರು ವರ್ಷಗಳು ಮಾತ್ರವಲ್ಲ! ಇಂದಿಗೂ ಅಂಕುಶಮತಿಗಳ ಹಿಡಿತದಲ್ಲಿ ನಲುಗಿರುವ ವಚನಸಾಹಿತ್ಯವು ಮೀಡಿಯಾ ಕಂಟ್ರೋಲಿಗೆ ಒಳಪಟ್ಟಿದೆ. ಸಹಸ್ರಮಾನವನ್ನು ಮೀರಿದ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅತಿ ದೀರ್ಘಕಾಲದವರೆಗೆ ಮೀಡಿಯಾ ಕಂಟ್ರೋಲಿಗೆ ಒಳಪಟ್ಟ ಸಾಹಿತ್ಯವೆಂದರೆ ವಚನಸಾಹಿತ್ಯವೇ ಸರಿ! ‘ಮೀಡಿಯಾ ಕಂಟ್ರೋಲ್’ – ಎಂಬ ಶೀರ್ಷಿಕೆಯಲ್ಲಿ ನೋಮ್ ಚೋಮ್‌ಸ್ಕಿ ಮತ್ತು ಚೆ ಗವಾರ ಅವರ ಪುಸ್ತಕಗಳಿವೆ. ಇವೆರಡೂ ಕೃತಿಗಳಲ್ಲಿ ಮೀಡಿಯಾ ಕಂಟ್ರೋಲ್ ಎಂಬುದರ ವಿರಾಟ್ ಸ್ವರೂಪವನ್ನು ಇಬ್ಬರೂ ಎಳೆಎಳೆಯಾಗಿ ಬಿಡಿಸಿ ತೋರಿಸಿದ್ದಾರೆ.

‘ಜಾತಿಪದ್ಧತಿ’ಯು ಭಾರತದ ಸಾಮಾಜಿಕ ವ್ಯವಸ್ಥೆಯಾಗಿದೆ. ಇಂಥ ಸಾಮಾಜಿಕ ವ್ಯವಸ್ಥೆಯನ್ನು ಬಳಸಿಕೊಂಡು ಅಧಿಕಾರ ಕೇಂದ್ರ ಸ್ಥಾಪಿಸುವ ‘ಜಾತಿಪ್ರಭುತ್ವ’ವು ಸ್ವಯಂವೇದ್ಯ. ಎಡಪಂಥೀಯ ಪರಿಭಾಷೆಯಲ್ಲಿ ಹೇಳುವುದಾದರೆ ಜಾತಿಪದ್ಧತಿಯು ಬೇಸ್ ಸ್ಟ್ರಕ್ಚರ್ (= ತಳ ರಚನೆ) ಮತ್ತು ಜಾತಿಪ್ರಭುತ್ವವು ಸೂಪರ್ ಸ್ಟ್ರಕ್ಚರ್ (= ಮೇಲು ರಚನೆ). ತಳರಚನೆ ಮತ್ತು ಮೇಲುರಚನೆಗಳ ಸಾವಯವ ಸಂಬಂಧವನ್ನು ನಿರಾಕರಿಸುವಂತಿಲ್ಲ. ಮೇಲುರಚನೆಯಲ್ಲಿ ಎಲ್ಲ ಬಗೆಯ ಅಧಿಕಾರ ಕೇಂದ್ರಗಳು ಸೇರಿಕೊಳ್ಳುತ್ತವೆ. ರಾಜತ್ವ–ಪುರೋಹಿತಶಾಹಿ–ಆಡಳಿತಶಾಹಿ–ಪೊಲೀಸ್ ಶಾಹಿ–ಕಾನೂನುಶಾಹಿ–ಶಿಕ್ಷಣಶಾಹಿ ಮುಂತಾದವುಗಳೊಂದಿಗೆ ಸಾಹಿತ್ಯಶಾಹಿಯೂ ಸೇರ್ಪಡೆಯಾಗುವುದು. ಆದರೆ ವಚನ ಚಳುವಳಿ ಮತ್ತು ವಚನ ಸಾಹಿತ್ಯವು ತಳರಚನೆ ಮತ್ತು ಮೇಲುರಚನೆಗಳನ್ನು ಮೀರಿದ ಅಧಿಕರಚನೆ (ಮೆಟಾಸ್ಟ್ರಕ್ಚರ್) ಎಂಬುದನ್ನು ತಿಳಿಯಬೇಕು.

*ವೇದವೆಂಬುದು ಓದಿನ ಮಾತು*
*ಶಾಸ್ತ್ರವೆಂಬುದು ಸಂತೆಯ ಸುದ್ದಿ*
*ಪುರಾಣವೆಂಬುದು ಪುಂಡರ ಗೋಷ್ಠಿ*
*ತರ್ಕವೆಂಬುದು ಟಗರ ಹೋರಾಟ*
*ಭಕ್ತಿಯೆಂಬುದು ತೋರಿ ಉಂಬ ಲಾಭ*
*ಗುಹೇಶ್ವರನೆಂಬುದು ಮೀರಿದ ಘನವು.*

– ಮೇಲುರಚನೆಗೆ ಸೇರಿದ ವೇದ–ಶಾಸ್ತ್ರ –ಪುರಾಣ–ತರ್ಕ–ಭಕ್ತಿ ಮಾರ್ಗಗಳನ್ನು ಅಲ್ಲಮಪ್ರಭು ಒಪ್ಪುವುದಿಲ್ಲ, ಅವುಗಳೊಂದಿಗೆ ಗುರುತಿಸಿಕೊಳ್ಳುವುದಿಲ್ಲ. ಸಾಮಾಜಿಕ ವ್ಯವಸ್ಥೆಯ ತಳರಚನೆ ಮತ್ತು ಮೇಲುರಚನೆಗಳನ್ನು “ಮೀರಿದ ಘನವು” ಎಂಬುದು ಅಧಿಕ ರಚನೆಯಾಗಿದೆ. ಶರಣರ ವಚನಗಳಲ್ಲಿ ಅಧಿಕ ಎಂಬ ನುಡಿ ಮತ್ತೆ ಮತ್ತೆ ಪ್ರಯೋಗವಾಗಿದೆ. ಯಾವ ಸಾಮಾಜಿಕ ವ್ಯವಸ್ಥೆಯಲ್ಲಿ ಮಾನವಕುಲವನ್ನು ಉತ್ತಮ–ಮಧ್ಯಮ–ಅಧಮ ಎಂದು ಶ್ರೇಣೀಕರಣಗೊಳಿಸಲಾಗಿದೆಯೋ ಅಂಥ ಸಾಮಾಜಿಕ ವ್ಯವಸ್ಥೆಯ ತಳರಚನೆ, ಮೇಲು ರಚನೆಗಳನ್ನು ಶರಣರು ಒಪ್ಪುವುದಿಲ್ಲ.



# ಎಡಪಂಥೀಯ ನೆಲೆಯಿಂದ ವಚನ ಚಳುವಳಿ

ವಿ. ಚಂದ್ರಶೇಖರ ನಂಗಲಿ

ಕೆಂಡವನ್ನು ಜಾತಿಪದ್ಧತಿಯ ತಳರಚನೆ ಮತ್ತು ಜಾತಿಪ್ರಭುತ್ವದ ಮೇಲುರಚನೆಯ ಒರಲೆಗಳು ಮುಟ್ಟುವುದಿಲ್ಲ. ಕೆಂಡವನು ಒರಲೆ ಮುಟ್ಟಬಲ್ಲುದೆ ? – ಎಂಬ ಅಲ್ಲಮನ ವಚನವನ್ನು ಈ ದೃಷ್ಟಿಯಿಂದ ಗ್ರಹಿಸಬೇಕು. ಆದ್ಯವಚನಕಾರನಾದ ಜೇಡರ ದಾಸಿಮಯ್ಯನು ಅಧಿಕರಚನೆಯನ್ನು 'ದಾಸನ ಕುಲ' ಎಂದು ಕರೆದಿರುವುದನ್ನು ಡಾ|| ಎಲ್. ಬಸವರಾಜು ಅವರು ಖಚಿತವಾಗಿ ನಿರೂಪಿಸಿದ್ದಾರೆ :

"...ದಾಸಪಂಥ ಅಥವಾ ದಾಸಕುಲ ಬಲು ಹಿಂದೆಯೇ ಸಾಂಸ್ಥಿಕವಾಗಿ ಪ್ರವರ್ತಿತವಾಗಿ, ಕಡೆಯ ಪಕ್ಷ ಜೇಡರ ದಾಸಿಮಯ್ಯನ ಕಾಲಕ್ಕಾಗಲೇ ಸುಪ್ರತಿಷ್ಠಿತವಾಗಿ ಪ್ರಚಾರಕ್ಕೆ ಬಂದಿತ್ತೆಂಬುದು ಅವನ ಈ ಮುಂದಿನ ವಚನದಿಂದಲೇ ಗಮ್ಯವಾಗುವುದು :

*ದಾಸನ ಕುಲವಾದಾತ ಈಶಂಗಲ್ಲದೆ ಶರಣೆನ್ನ*
*ಆಸೆ ಮಾಡನೊಡ ಅನ್ಯ ದೈವಂಗಳಿಗೆ*
*ಆಸೆ ಮಾಡನೊಡ ದೇಶದ ಪಿಶಾಚಿಗಳಿಗೆ*
*ಆಸೆ ಮಾಡಿದನಾದಡೆ ಅವ ದಾಸನ ಕುಲವಲ್ಲ*
*ಅವನನ್ಯಕುಲ ಕಾಣಾ ರಾಮನಾಥ*

– ದೇವರ ದಾಸಿಮಯ್ಯನ ವಚನಗಳು, ಪುಟ ೧೯.

ದೇವರ ದಾಸಿಮಯ್ಯನಿಗಿಂತಲೂ ಮುಂಚಿನವರಾದ ಮಾದಾರ ಚನ್ನಯ್ಯ ಮತ್ತು ಡೋಹಾರ ಕಕ್ಕಯ್ಯ ಕೂಡ 'ದಾಸನ ಕುಲ'ಕ್ಕೆ ಸೇರಿದವರೇ ! ಎಲ್. ಬಸವರಾಜು ಅವರು ಹೇಳಿರುವಂತೆ, "... ಬಸವಣ್ಣನವರು ಭಕ್ತಿಪಂಥದ ಪರಂಪರೆಯನ್ನು ಸ್ಮರಿಸಿ, ಆ ಪಂಥದಲ್ಲಿ ತಮಗಿಂತ ಪೂರ್ವಿಕರಾದ (ದೋಹಾರ) ಕಕ್ಕಯ್ಯ, (ಮಾದಾರ) ಚನ್ನಯ್ಯ, (ಜೇಡರ) ದಾಸಯ್ಯ – ಇವರ ಭಕ್ತಿ ಭಿಕ್ಷದಿಂದಲೇ ತಮ್ಮ ದಿವ್ಯಜೀವನ ಪಾತ್ರೆ ತುಂಬಿತೆಂದು ಕೃತಜ್ಞತೆಯನ್ನು ವ್ಯಕ್ತಪಡಿಸಿರುವರು :

*ಭಕ್ತಿಯಿಲ್ಲದ ಬಡವ ನಾನಯ್ಯ*
*ಕಕ್ಕಯ್ಯನ ಮನೆಯಲು ಬೇಡಿದೆ*
*ಚೆನ್ನಯ್ಯನ ಮನೆಯಲು ಬೇಡಿದೆ*
*ದಾಸಯ್ಯನ ಮನೆಯಲು ಬೇಡಿದೆ*
*ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ*
*ಎನ್ನ ಪಾತ್ರೆ ತುಂಬಿತ್ತು. ಕೂಡಲಸಂಗಮದೇವ*

– ದೇವರ ದಾಸಿಮಯ್ಯನ ವಚನಗಳು, ಪುಟ ೮

ವಚನ ಚಳುವಳಿ – ವಚನಸಾಹಿತ್ಯದ ಅಧಿಕರಚನೆಯನ್ನು ಮೂರು ದಿಕ್ಕುಗಳಿಂದ ಒಳಹೊಕ್ಕು ಅರ್ಥಮಾಡಿಕೊಳ್ಳ ಬೇಕು. 'ದಾಸನ ಕುಲ'ವಾದವರಲ್ಲಿ ೧. ಆಂತರಂಗಿಕ ಸಮತಾವಾದ ೨. ಆಧ್ಯಾತ್ಮಿಕ ಸಮತಾವಾದ ೩. ಸಾಮಾಜಿಕ ಸಮತಾವಾದಗಳ ಮುಪ್ಪುರಿ ಬಂಧವಿದೆ.

**ಆಂತರಂಗಿಕ ಸಮತಾವಾದ :** ಜನ್ಮಾಧಾರಿತ ಅಸಮಾನತೆಯನ್ನು ಉಸಿರಾಡುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯರ ವ್ಯಕ್ತಿತ್ವ ಹೇಗಿರಬೇಕು ? – ಎಂಬುದು ಬಹುಮುಖ್ಯ ಪ್ರಶ್ನೆ. ಈ ದಿಸೆಯಲ್ಲಿ ಶರಣರ ಅಧಿಕ ರಚನೆಯು ಮಾರ್ಗದರ್ಶಕ ಸೂತ್ರ ವಾಗಿದೆ. ಮೇಲುಜಾತಿಯ ಮೇಲರಿಮೆ ಮತ್ತು ಕೀಳುಜಾತಿಯ ಕೀಳರಿಮೆ – ಇವೆರಡೂ ಮಾನಸಿಕ ವಾಗಿ ರೋಗಕಾರಕಗಳೇ. ಇವುಗಳಿಂದ ಹೇಗೆ ಪಾರಾಗ ಬೇಕೆಂಬುದನ್ನು ಬಸವಣ್ಣನ ಅಪವರ್ಗೀಕರಣದ ವಚನಗಳು ತೋರಿಸಿಕೊಡುತ್ತವೆ. "ಮಾದಾರ ಚನ್ನಯ್ಯನ ಮಗ ನಾನು" ಎಂದು ಹೇಳಿಕೊಳ್ಳುವ ಬಸವಣ್ಣ ತನ್ನ ಹುಟ್ಟನ್ನು ಮುರಿದು, ಮರುಹುಟ್ಟನ್ನು ಸ್ಥಾಪಿಸಿಕೊಳ್ಳುತ್ತಾನೆ. ಇದು ಏಕಕಾಲಕ್ಕೆ ಮೇಲರಿಮೆ ಮತ್ತು ಕೀಳರಿಮೆಗೆ ಮಾಡಿದ ಅಕ್ಷರಶಸ್ತ್ರಚಿಕಿತ್ಸೆಯಾಗಿದೆ. ಈ ಬಗೆಯ ಭಾವನಾ ಬಲವನ್ನು 'ಆಂತರಂಗಿಕ ಸಮತಾವಾದ' – ಎಂದು ಕರೆಯಬಹುದು.

**ಆಧ್ಯಾತ್ಮಿಕ ಸಮತಾವಾದ :** ಪಂಕ (= ಕೆಸರು) ಮತ್ತು ಪಂಕಜ (= ಕಮಲ) ಬೇರೆ ಬೇರೆ ! ಜಾತಿಪದ್ಧತಿಯ ಸಾಮಾಜಿಕ ವ್ಯವಸ್ಥೆಯ ಕೆಸರಿನಲ್ಲಿ ಸಿಲುಕದೆ, ಅಲ್ಲಿಂದ ಮೇಲೆ ಬಂದು ಅಧಿಕರಾದ ಶರಣರು, 'ಕಮಲಜಾತ ಪರಾಗ ಪರಮಾಣು ಕೀರ್ತಿ'ಗಳೇ ಹೊರತು ಕೆಸರಿನಲ್ಲಿ ಹೊರಳಾಡುವ ನರಕ್ರಿಮಿಗಳಲ್ಲ ! ಸಿದ್ಧರಾಮಯ್ಯನ ವಚನದಲ್ಲಿ ಕೊಳಚೆಯನ್ನು ಮೀರುವ ಘನವಿದೆ :

*ನರ ಸಮುದ್ರವೆಂಬುದೊಂದು ಕೊಳಚೆ*
*ಅದರೊಳಗಣ ಚಿಕ್ಕ ಮಹಾ ಕೊಳಚೆಯೊಳಗೆ*
*ಅಯ್ಯಾ ! ಲೋಕ ಬಿದ್ದು ತೇಕಾಡುತ್ತಿದೆ.*
*ಇದರಂದ ಹೊಲ್ಲ, ಕೈಯ ನೀಡು*
*ಕಪಿಲಸಿದ್ಧ ಮಲ್ಲಿಕಾರ್ಜುನ ನೀನು !*

ಹುಟ್ಟುಗೆಡುವುದು ಮತ್ತು ಮರು ಹುಟ್ಟು ಪಡೆಯುವುದು ವಚನಕಾರರ ವ್ಯಕ್ತಿತ್ವ ಸಿದ್ಧಿಯಾಗಿದೆ. "ತುಷವ ನೀಗಿದ ತಂಡುಲ" (= ಹೊಟ್ಟು ಕಳಚಿದ ಅಕ್ಕಿ) ಎಂಬ ರೂಪಕದಲ್ಲಿ ಜಾತ ಜನ್ಮವನ್ನು ನೀಗಿಕೊಂಡು ಮುಕ್ತರಾಗುವ ಆಶಯವಿದೆ.

**ಸಾಮಾಜಿಕ ಸಮತಾವಾದ :** ಸಾಮಾಜಿಕವಾಗಿ ಸಮತಾವಾದ ಅನುಷ್ಠಾನಗೊಳ್ಳಬೇಕೆಂದರೆ, ಅಸಂಗ್ರಹ ತತ್ವ ವ್ಯಕ್ತಿ ಮತ್ತು ಸಮಾಜ ಮಟ್ಟದಲ್ಲಿ ಬೇರೂರಬೇಕು. ಈ ದಿಸೆಯಲ್ಲಿ ಒಂದೇ ನಾಣ್ಯದ ಎರಡು ಮುಖ ಗಳೆಂದರೆ, ಕಾಯಕ ಮತ್ತು ದಾಸೋಹ ಭಾವ. ಶರಣರು ಪ್ರತಿಪಾದಿಸಿದ್ದು ಸತ್ಯ ಶುದ್ಧಕಾಯಕ ಮತ್ತು ನಿರಹಂಕಾರದ ದಾಸೋಹ ಭಾವ. ಕುಲ ಮತ್ತು ಕಾಯಕ (= ಜಾತಿ ಮತ್ತು ವೃತ್ತಿ) ಇವುಗಳ ನಂಟಿನ ಬಗ್ಗೆ ಶರಣರಿಗಿದ್ದ ಸೂಕ್ಷ್ಮತೆ ಬಹುಮುಖ್ಯ. ಬಸವಣ್ಣನ ಈ ವಚನವನ್ನು ಪರಿಭಾವಿಸಿ :

*ದೇವ ಸಹಿತ ಭಕ್ತ ಮನೆಗೆ ಬಂದರೆ*
*ಕಾಯಕವಾವುದೆಂದು ಬೆಸಗೊಂಡೆನಾದರೆ*
*ನಿಮ್ಮಾಣೆ, ನಿಮ್ಮ ಪುರಾತನರಾಣೆ, ತಲೆದಂಡ–*
*ತಲೆದಂಡ*
*ಕೂಡಲ ಸಂಗಮದೇವಾ, ಭಕ್ತರಲ್ಲಿ*
*ಕುಲವನರಸಿದರೆ*
*ನಿಮ್ಮ ರಾಣಿವಾಸದಾಣೆ*

– ಇದಕ್ಕೆ ಪೂರಕವಾಗಿ ಕನ್ನಡಿ ಕಾಯಕದ ಅಮ್ಮಿದೇವಯ್ಯನ ವಚನವಿದು :

*ಆವಾವ ಜಾತಿ ಗೋತ್ರದಲ್ಲಿ ಬಂದಡೂ*
*ತಮ್ಮ ತಮ್ಮ ಕಾಯಕ ಭಕ್ತಿಗೆ*
*ಸೂತಕವಿಲ್ಲದಿರಬೇಕು !*

ಶೂನ್ಯಸಂಪಾದನೆಯಲ್ಲಿರುವ ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮ ದಂಪತಿಗಳಿಗೆ ಸಂಬಂಧಪಟ್ಟಂತೆ, "ಈಸಕ್ಕಿಯಾಸೆ ನಿಮಗೇಕೆ ?" – ಪ್ರಸಂಗವನ್ನಿಲ್ಲಿ ನೆನಪು



**ಅಲ್ಲಮಪ್ರಭು**

ಮಾಡಿಕೊಳ್ಳಬಹುದು. ವ್ಯಕ್ತಿ ಮತ್ತು ಸಮಾಜ ಮಟ್ಟದಲ್ಲಿ ಸಮತಾವಾದದ ರಕ್ತಪರಿಚಲನೆ ಆಗಬೇಕಾದರೆ ಆಂತರಂಗಿಕ ಸಮತಾವಾದ ಮತ್ತು ಸಾಮಾಜಿಕ ಸಮತಾವಾದಗಳ ಬಂಧ ಅತ್ಯಗತ್ಯ. ಇದನ್ನರಿತು ಶರಣರು ಪರಸ್ಪರ ಉತ್ತರೋತ್ತರ ಅಭಿವೃದ್ಧಿ ಮತ್ತು ಸಾವಯವ ಸಂಬಂಧವುಳ್ಳ ಗುಣಾತ್ಮಕ ಸಮತಾವಾದ ವನ್ನು ಪ್ರತಿಪಾದಿಸಿ, ತಳರಚನೆ–ಮೇಲುರಚನೆಗಳನ್ನು ಮೀರಿದ ಅಧಿಕರಚನೆಯನ್ನು ಸಾಧಿಸಿ ತೋರಿಸಿದ್ದಾರೆ.

*ಮೇರುವ ಸಾರಿದ ಕಾಗೆ ಹೊಂಬಣ್ಣವಾಗದಿದ್ದರೆ*
*ಆ ಮೇರುವಿಂದತ್ತಣ ಹುಲುಮೊರಡಿಯೆ ಸಾಲದೆ ?*

– ಅಲ್ಲಮಪ್ರಭು

ಮೇರುಪರ್ವತವನ್ನು ಪುರಾಣಗಳಲ್ಲಿ 'ಹೇಮನಗ' (= ಚಿನ್ನದ ಬೆಟ್ಟ) ಎಂದು ಕರೆಯಲಾಗಿದೆ. ಮೇರುಗಿರಿಯನ್ನು ಮುಟ್ಟಿದ ಕಾಗೆಯು ಹೊಂಬಣ್ಣ ವನ್ನು ಪಡೆಯಬೇಕು, ಇದು ಸ್ಪರ್ಶದ ಪರಿಣಾಮ ರಮಣೀಯತೆ. ಇದು ಸಾಧ್ಯವಾಗದಿದ್ದರೆ ಕಾಗೆ ಮೇರುಗಿರಿಗೆ ಬರಲು ಎಡತಾಕುವುದು ಏಕೆ ? ತಾನು ಎಲ್ಲಿ ಹುಟ್ಟಿದೆಯೋ ಅಲ್ಲೇ ಇರುವ ಕ್ಷುದ್ರಗಿರಿ (ಹುಲುಮೊರಡಿ)ಯೇ ಸಾಕಲ್ಲವೆ ? ಜನ್ಮಜಾತ ಕ್ಷುದ್ರ ಗಿರಿಯಿಂದ ಮೇರುಗಿರಿಯ ಅತ್ಯುನ್ನತಿಗೆ (= ಪುರಾಣ ಗಳ ಪ್ರಕಾರ ಭೂಮಂಡಲದ ಅತ್ಯುನ್ನತ ಶಿಖರ ಮೇರುಗಿರಿಯಾಗಿದೆ.) ಏರಬೇಕೆಂಬ ತೀವ್ರವಾದ ತುಡಿತವಿಲ್ಲಿದೆ. ವಚನ ಚಳುವಳಿ – ವಚನಸಾಹಿತ್ಯದ ಪರಿವರ್ತನೆಯ ತತ್ವವಿಲ್ಲಿ ಅಡಗಿದೆ.

ನಿರಂಕುಶಮತಿಗಳಾದ ವಚನಕಾರರು ಸೃಷ್ಟಿಸಿದ್ದು 'ಕಾಡು'. ವಚನಸಾಹಿತ್ಯವೊಂದು ಶ್ರೀಶೈಲದ/ಉಳವಿಯ ದಟ್ಟ ಕಾನನವಿದ್ದಂತೆ. ಇದರಲ್ಲಿ ಹುಲ್ಲು–ಪೊದೆ–ಬಳ್ಳಿ–ಮಹಾವೃಕ್ಷವೆಂಬ ಭೇದಭಾವವಿಲ್ಲ. ಸಸ್ಯ ಪರಿಸರ–ಪ್ರಾಣಿ ಪರಿಸರ–ಮನುಷ್ಯ ಪರಿಸರದ ಅಭೇದದ ಕಟ್ಟಡವನ್ನು ವಚನಸಾಹಿತ್ಯದಲ್ಲಿ ಮನಗಾಣಬಹುದು. ಆದರೆ, ವಚನಸಾಹಿತ್ಯವನ್ನು ಸ್ವಾಧೀನ ಮಾಡಿಕೊಂಡವರು

ಸೃಷ್ಟಿಸಿದ್ದು ನೆಡುತೋಪುಗಳನ್ನು. ಕಾಡಿನ ಬಹುತ್ವವು ಲುಪ್ತವಾಗಿ ನೆಡುತೋಪುಗಳ ಏಕತ್ವವು ಪ್ರಾಪ್ತಿಯಾದದ್ದು ಬಳಕೆಗೆ ಬಂದ ಬಟ್ಟೆಯ (= ಮಾರ್ಗ) ದುರಂತವೇ ಹೊರತು ಇದರಿಂದ ವಚನ ಚಳುವಳಿಯ/ವಚನ ಸಾಹಿತ್ಯದ ಗುರಿಗೆ ಬಾಧೆ ಇಲ್ಲ. ಅನುಭವ ಮಂಟಪದಲ್ಲಿ ಸಿದ್ಧರಾಮಯ್ಯನಿಗೆ ಆದ ಇಷ್ಟಲಿಂಗ ದೀಕ್ಷಾ ಪ್ರಸಂಗವನ್ನೇ ತೆಗೆದುಕೊಳ್ಳಿ. ಈ ದಿಸೆಯಲ್ಲಿ 'ಇಷ್ಟಲಿಂಗ ದೀಕ್ಷೆಯೆಂಬ ಹುಸಿನುಸುಳು' – ಎಂಬ ಲೇಖನವನ್ನು ನಾನು ಡಾ॥ ಎಲ್. ಬಸವರಾಜು ಅವರ ಸಂಶೋಧನಾ ಮಾರ್ಗವನ್ನು ಅನುಸರಿಸಿ ಬರೆದಿದ್ದೇನೆ. ಶಿವಗಣ ಪ್ರಸಾದಿ ಮಹಾದೇವಯ್ಯನು ಮೊದಲ ಬಾರಿಗೆ ವಚನಕ್ರಮ ಸೇರುವೆಯಿಂದ ಹವಣಿಸಿದ ಪ್ರಥಮ ಶೂನ್ಯ ಸಂಪಾದನೆಯಲ್ಲಿ ಇಷ್ಟಲಿಂಗ ದೀಕ್ಷೆಯ ನಿರಾಕರಣೆಯಿದ್ದರೆ, ನಂತರ ರೂಪುಗೊಂಡ ಮೂರು ಶೂನ್ಯಸಂಪಾದನೆಗಳಲ್ಲಿ ಇಷ್ಟಲಿಂಗ ದೀಕ್ಷೆಯ ಪ್ರಸಂಗವಿದೆ. ಇಷ್ಟಲಿಂಗವೆಂಬುದು ನಮ್ಮ ಕೋಲಾರ ಜಿಲ್ಲೆಯ ನೀಲಗಿರಿ ಮರವಿದ್ದಂತೆ. ಪ್ರಥಮ ಶೂನ್ಯ ಸಂಪಾದನೆಯ ಕಾಡುಪ್ರಜ್ಞೆಯು, ಮಠಾಧೀಶರಿಂದ ರೂಪಿಸಲ್ಪಟ್ಟ ನಂತರದ ಮೂರು ಶೂನ್ಯ ಸಂಪಾದನೆಗಳಲ್ಲಿ ಕಾಣೆಯಾಗಿದ್ದು ಇಷ್ಟಲಿಂಗದೀಕ್ಷೆಗೆ ಎಡೆಗೊಟ್ಟು ತೋಪು ಪ್ರಜ್ಞೆಯಾಗುಳಿದಿದೆ. ಶರಣರ ಭಕ್ತಿಪಂಥವನ್ನು ಸೀಮಿತವಾಗಿ ನೋಡುವುದು ಸರಿಯಲ್ಲ. ಜನತೆಯ ಅಜ್ಞಾನವನ್ನು ಬಂಡವಾಳ ಮಾಡಿಕೊಳ್ಳುವುದರೊಂದಿಗೆ, ಭಕ್ತಿ ಎಂಬುದು ತೋರಿ ಉಂಬ ಲಾಭ ಎಂಬುದಕ್ಕೆ ಅಲ್ಲಮನ ಈ ವಚನವನ್ನು ಪರಿಭಾವಿಸಿರಿ :

*ಪಂಚಮಹಾ ಪಾತಕಂಗಳಾವುವೆಂದರಿಯರು?*
*ಭವಿಯ ತಂದು ಭಕ್ತನ ಮಾಡುವುದೇ ಪ್ರಥಮ ಪಾತಕ !*

ಶರಣರಲ್ಲಿ ಇಷ್ಟಲಿಂಗದೀಕ್ಷೆ ಕಡ್ಡಾಯವಲ್ಲ; ಮಾಂಸಾಹಾರ ಸೇವನೆ ನಿಷಿದ್ಧವಲ್ಲ ಎಂಬುದನ್ನು ಮೊದಲು ಅರಿತುಕೊಳ್ಳಬೇಕು. ಸ್ಥಾವರ ಲಿಂಗ ಪೂಜಿಸುವವರನ್ನು ಶೈವರೆಂದೂ ಇಷ್ಟಲಿಂಗ ಪೂಜಿಸುವವರನ್ನು ವೀರಶೈವರೆಂದೂ ಕರೆಯುವ ರೂಢಿಯಿದೆ. ಶೈವ ಪುರೋಹಿತಶಾಹಿ ಮತ್ತು ವೀರಶೈವ ಪುರೋಹಿತಶಾಹಿಯನ್ನು ಮೀರಿದವರೇ ಶರಣರು. ಈ ವಿಚಾರವನ್ನು ಡಾ॥ ಎಲ್. ಬಸವರಾಜು ಅವರು 'ಮುತ್ತಿನ ಹಾರ' ಮಾಲೆಯ ಕಿರು ಪುಸ್ತಕ 'ಶೂನ್ಯ ಸಂಪಾದನೆ'ಯ ಮುನ್ನುಡಿಯಲ್ಲಿ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಣೆ) ಸ್ಪಷ್ಟಪಡಿಸಿದ್ದಾರೆ : "...ಶಿವಗಣ ಪ್ರಸಾದಿ ಮಹಾದೇವಯ್ಯನನ್ನು ಹೊರತುಪಡಿಸಿ ಹಲಗೆಯಾರ್ಯ ಮುಂತಾದವರು ಯಾರೂ + ಬಸವಾದಿ ಪ್ರಮಥರ (= ಬಸವಣ್ಣ ಮುಂತಾದ ಆದಿ ಪ್ರಮಥರು) ಸಂದೇಶದ ಪ್ರಾಣ ಜೀವಾಳವಾದ ಅನ್ಯಧರ್ಮ ಸಹಿಷ್ಣುತೆಯನ್ನು ಒಂದು ಮತೀಯ ಲಾಂಛನಕ್ಕಾಗಿ ಬಲಿಕೊಡುವುದು ಲಾಂಛನಾಸ್ಪದವೆಂದು ತಿಳಿಯಲಿಲ್ಲ. ಅಷ್ಟೇ ಅಲ್ಲ, ಮೈಮೇಲೆ ಲಿಂಗ ಧರಿಸದ ಒಂದು ಗುಪ್ತ ಭಕ್ತಿಪಂಥವೂ ಶರಣಧರ್ಮದಲ್ಲಿ ಇತ್ತೆಂಬುದಾಗಲಿ ಅದಕ್ಕೆ ಪ್ರಬಲ ಸಾಕ್ಷಿಗಳಾಗಿ ಗುಪ್ತ ಮಂಚಣ್ಣ, ಅಜಗಣ್ಣ ಮುಂತಾದವರು ಇದ್ದರೆಂದಾಗಲಿ ತಿಳಿಯುವಷ್ಟು ಸಹನೆಯೂ ಅವರಿಗೆ ಇಲ್ಲದೇ ಹೋಯಿತು..." ಡಾ॥ ಎಲ್. ಬಸವರಾಜು ಅವರು ಹೇಳುವಂತೆ ಶರಣರಲ್ಲಿ ಎರಡು ವಿಧವಾದ ಲಿಂಗಾನುಭಾವಿಗಳಿದ್ದರು :

೧. **ದ್ರವ್ಯ ಲಿಂಗಿಗಳು :** ಸ್ಥಾವರಲಿಂಗ ಮತ್ತು ಇಷ್ಟಲಿಂಗವನ್ನು ಪೂಜಿಸುವವರು. ಇದನ್ನು 'ಗುಡಿಯಲ್ಲಿ ದೇವರು' ಮತ್ತು 'ಮೈಯ್ಯಲ್ಲಿ ದೇವರು' ಎಂದು ಕರೆಯಬಹುದು.

೨. **ಸರ್ವಾಂಗ ಲಿಂಗಮಯರು :** ಲಿಂಗವನ್ನು ಆಲಯದಲ್ಲಾಗಲಿ ಮತ್ತು ಅಂಗದಲ್ಲಾಗಲಿ ಕಟ್ಟಿಕೊಳ್ಳದೆ, ದೇಹವೇ ದೇವಾಲಯವೆಂದು ತಿಳಿದು ಸರ್ವಾಂಗವೂ ಲಿಂಗಮಯರಾದವರು.

ಇದು ಹನ್ನೆರಡನೇ ಶತಮಾನದ ಶರಣರ ನಿರಂಕುಶಮತಿಯ ಕಾಡುಪ್ರಜ್ಞೆಗೆ ಪ್ರತ್ಯಕ್ಷ ನಿದರ್ಶನ. ಆದರೆ ಈ ಬಹುತ್ವ ವಿಚಾರಸರಣಿಯು ಮೀಡಿಯಾ ಕಂಟ್ರೋಲಿಗೊಳಗಾಗಿ, ಇಷ್ಟಲಿಂಗದೀಕ್ಷೆಯ ಏಕತ್ವ ಪ್ರಾಪ್ತಿಗೊಳಗಾಗಿದ್ದು ತೋಪು ಪ್ರಜ್ಞೆಯಾಗಿದೆ. ಶರಣರು ಭಕ್ತಿಪಂಥದ ನೈತಿಕತೆಗೆ ಅಥವಾ ನೈತಿಕ ಶಕ್ತಿಗೆ ಪ್ರಥಮ ಆದ್ಯತೆಯನ್ನು ನೀಡಿದ್ದರು. ಭಾರತೀಯ ಸಮಾಜದ ತಳರಚನೆಯ ಜಾತಿ/ವರ್ಗ ವ್ಯವಸ್ಥೆ ಮತ್ತು ಮೇಲುರಚನೆಯ ಜಾತಿ/ವರ್ಗ ಹಿತಾಸಕ್ತಿಗಳನ್ನು ಪ್ರಜ್ಞಾಪೂರ್ವಕವಾಗಿ ಮೀರಿದ ಶರಣರು ಅಧಿಕ ರಚನೆಯ ಜಾತ್ಯತೀತ/ವರ್ಗರಹಿತ ಸಮಾಜದ ಕನಸು ಕಂಡವರು. ಆದ್ದರಿಂದ, ಶರಣರನ್ನು ಮಳೆಕಾಡುಗಳಂತೆ ಕಾಣಬೇಕೇ ಹೊರತು ನೀಲಗಿರಿಯ ನೆಡುತೋಪುಗಳಂತೆ ಕಾಣಬಾರದು :

*ರೂಪನೆ ಕಂಡರು, ನಿರೂಪಣೆ ಕಾಣರು !*
*ತನುವನೆ ಕಂಡರು, ಅನುವನೆ ಕಾಣರು !*
*ಆಚಾರವನೆ ಕಂಡರು, ವಿಚಾರವನೆ ಕಾಣರು !*
*ಗುಹೇಶ್ವರ ! ನಿಮ್ಮ ಕುರುಹನೆ ಕಂಡು*
*ಕೂಡಲರಿಯದೆ ಕೆಟ್ಟರು.*



**ಅಕ್ಕಮಹಾದೇವಿ**

ರೂಪದಿಂದ ನಿರೂಪಿಗೆ, ತನುವಿನಿಂದ ಅನುವಿಗೆ, ಆಚಾರದಿಂದ ವಿಚಾರಕ್ಕೆ, ಕುರುಹುಗಳಿಂದ ಅರಿವಿನೆಡೆಗೆ ನಡೆಯುವ/ನುಡಿಯುವ ಮಹಾಯಾನವನ್ನು ಗ್ರಹಿಸದಿದ್ದರೆ, ವಚನಸಾಹಿತ್ಯದ ಪ್ರವೇಶ ಮತ್ತು ಅಭ್ಯಾಸಗಳೇ ವ್ಯರ್ಥ ಪ್ರಯತ್ನವಾಗುತ್ತದೆ. "ಶಿರ ಹೊನ್ನ ಕಳಶವಯ್ಯ" (೪೪೮ ಎಲ್‌ಬಿ) ಎಂದು ಉಗ್ಗಡಿಸಿದ ಬಸವಣ್ಣನವರು ನಂತರ, "ಕಾಗೆ ವಿಷ್ಟಿಸುವ ಹೊನ್ನ ಕಳಶವಹುದರಿಂದ ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ" (೨೨೨ ಎಲ್‌ಬಿ) ಎಂದು ಹೇಳಿರುವುದು ಕೂಡ ಮೇಲ್ಕಂಡ ಜೀವನ ಮಹಾಯಾನದ ಅನುರಣನ. 'ಗಗನಚುಂಬಿ ಹೊನ್ನ ಕಳಶ'ದಿಂದ ನೆಲಮುಟ್ಟುವ ಪ್ರೀತಿಯ 'ಚಮ್ಮಾವುಗೆ'ಯ ಸಹಜಯಾನವಿದಾಗಿದ್ದು "ಮೇಲಾಗಲೊಲ್ಲೆ ಕೀಳಾಗಲೊಲ್ಲದೆ ! ಕೀಳಿಂಗಲ್ಲದೆ ಹಯನು ಕರೆವುದೆ ? (೨೨೧ ಎಲ್‌ಬಿ) – ಎಂಬ ನಿಲುವಿನ ಅಭಿವ್ಯಕ್ತಿಯಾಗಿದೆ.

ವಚನ ಚಳುವಳಿಯು ಪ್ರವಾಹದ ವಿರುದ್ಧ ಈಸುವ ಹೋರಾಟವೇ ಹೊರತು, ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಅಥವಾ ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಕನ್‌ವರ್ಟ್/ಮತಾಂತರಗೊಂಡುದಲ್ಲ. ಹನ್ನೆರಡನೇ ಶತಮಾನದ ನಂತರ ಶರಣರ ನಡೆ–ನುಡಿಗಳು ಮೀಡಿಯಾ ಕಂಟ್ರೋಲಿಗೊಳಗಾದಮೇಲೆ ಕಂಡುಬರುವ ಡೊಂಕುಬಾಲದ ಬುದ್ಧಿಗೆ ಶರಣರನ್ನು ಆಪಾದಿಸುವುದು ಸರಿಯಲ್ಲ. ಎತ್ತುಗಳಿಗೆ ಜ್ವರ ಬಂದಾಗ ಎಮ್ಮೆಗಳಿಗೆ ಬರೆ ಎಳೆಯುವುದೇಕೆ ? ಜೀವನ ಸಮುದ್ರದಲ್ಲಿ ಉಪ್ಪು–ವಾರಿಕಲ್ಲು–ಮುತ್ತು ಹುಟ್ಟುತ್ತವೆ. ಉಪ್ಪಿನಿಂದ ವಾರಿಕಲ್ಲಿಗೆ ಅಥವಾ ವಾರಿಕಲ್ಲಿನಿಂದ ಮುತ್ತಿಗೆ ಕನ್‌ವರ್ಟ್/ಮತಾಂತರ ಆಗಲು ಸಾಧ್ಯವಿಲ್ಲ :

*ಮುತ್ತೂ ನೀರಲಾಯಿತ್ತು !*
*ವಾರಿಕಲ್ಲೂ ನೀರಲಾಯಿತ್ತು !*
*ಉಪ್ಪೂ ನೀರಲಾಯಿತ್ತು !*
*ಉಪ್ಪು ಕರಗಿತ್ತು, ವಾರಿಕಲ್ಲು ಕರಗಿತ್ತು !!*
*ಮುತ್ತು ಕರಗಿದುದನಾರೂ ಕಂಡವರಿಲ್ಲ !?*

ಈ ಸಂಸಾರಿ ಮಾನವರು ಲಿಂಗವ ಮುಟ್ಟಿ ಭವಭಾರಿಗಳಾದರು. ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯ ಚೆನ್ನಮಲ್ಲಿಕಾರ್ಜುನಯ್ಯ !

ಜಾತಿಸೂತಕಿಗಳ, ಜಾತ್ಯಂಧಕರ ಡೊಂಕುಬಾಲದ ಬುದ್ಧಿಯನ್ನು ಶರಣರಿಗೆ ಹೊರಿಸದೆ, ಅರ್ಥಮಾಡಿಕೊಳ್ಳಬೇಕು. ಹುಟ್ಟು ಹೊರೆಯ ಕಟ್ಟಳೆಯ ಕಳೆದನವ್ವ (೭೯೧ ಎಲ್‌ಬಿ), ಹುಟ್ಟು ಮುರಿದು ಬಟ್ಟಬಯಲನಿತ್ತ (೨೮೭ ಎಲ್‌ಬಿ), ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ (೨೮೩ ಎಲ್‌ಬಿ) ಎಂಬ ಅಕ್ಕಮಹಾದೇವಿಯ ನುಡಿಗಳು ಜಾತಿಪದ್ಧತಿ ಮತ್ತು ಜಾತಿಪ್ರಭುತ್ವವನ್ನು ದಾಂಟಿದ ವಿಶ್ವಮಾನವತೆಯ ಜ್ಯೋತಿರ್ಲಿಂಗಗಳು ! ಜೀವನಸಮುದ್ರದ ಸ್ಪರ್ಶದಲ್ಲಿ ಜಾತಿ/ಧರ್ಮಗಳ ಉಪ್ಪು–ವಾರಿಕಲ್ಲು ಕರಗಿಹೋಗಬೇಕು. ಕರಿಗೊಂಡು ಮುತ್ತುಗಳಾಗಬೇಕು.

ವಿ. ಚಂದ್ರಶೇಖರ ನಂಗಲಿ
ನಂ. ೧೬, ಶ್ರೀಗೌರಿ, ೩ನೇ ಕ್ರಾಸ್, ಕನಕನಗರ
ಹೊಸಕೋಟೆ – ೫೬೨ ೧೧೪, ಬೆಂ. ಗ್ರಾಮಾಂತರ ಜಿಲ್ಲೆ







**ಬುದ್ಧ ಚರಿತೆ** *(ಖಂಡ ಕಾವ್ಯ)*

*ಡಾ|| ಎಚ್. ಎಸ್. ಅನುಪಮಾ*

**ಪುಟ : ೧೨೨**

**ಬೆಲೆ : ರೂ. ೯೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ–೫೮೨ ೧೦೧

*ಯಾವಾಗಲೂ ಚರಿತ್ರೆಯನ್ನು ಸಿದ್ಧಮಾದರಿಯಲ್ಲೇ ಒಪ್ಪಿಕೊಳ್ಳಲಾಗಿದ್ದು ಯಾರು ಅದನ್ನು ಬರೆದರೂ ಒಂದರ ಪಡಿಯಚ್ಚು ಇನ್ನೊಂದಾಗಿರುತ್ತದೆ. ಆದರೆ ಇಲ್ಲಿನ ಕಥನ ಕವನಗಳು ಸ್ವಲ್ಪ ಭಿನ್ನವಾಗಿದ್ದು ಬುದ್ಧನನ್ನು ಇನ್ನಷ್ಟು ಪ್ರಬುದ್ಧನನ್ನಾಗಿಸಿ ಹೊಸ ವ್ಯಾಖ್ಯಾನದೊಂದಿಗೆ ಅರ್ಥೈಸಿ ನೆಲೆಗೊಳಿಸಲು ಮಾಡಿದ ಪ್ರಯತ್ನ ಶ್ಲಾಘನೀಯ. ಅರ್ಧರಾತ್ರೆಯಲ್ಲಿ ಮಡದಿ – ಮಗುವನ್ನು ತೊರೆದು ಹೋದ ಸಿದ್ಧಾರ್ಥ ಗೌತಮ ಬುದ್ಧನಾಗಿ ಸತ್ಯಗಳನ್ನರಿತ ಪರಿಯನ್ನು ಸಂಕಲನದ "ಸಾಕ್ಷಾತ್ಕಾರದ ದಾರಿಯಲ್ಲಿ" ಕವನ ಸಮರ್ಥವಾಗಿ ಹಿಡಿದಿಟ್ಟಿದೆ. ಅಲ್ಲಿನ 'ಆಹಾ ಝುಗ್ಗನೆ ಬೆಳಕಾಯಿತು' ಎಂಬ ಸಾಲು ಎಲ್ಲವನ್ನೂ ಹೇಳುತ್ತದೆ. ಇಲ್ಲಿ ಬುದ್ಧನನ್ನು ಎಲ್ಲಿಯೂ ಅಪರಿಚಿತ – ಅಪರಾಧಿಯನ್ನಾಗಿಸಿಲ್ಲ. ಅವನು ಇಲ್ಲಿ ಇನ್ನಷ್ಟು ಆತ್ಮೀಯನಾಗಿ ಅರ್ಥವಾಗುತ್ತಾ ಹೋಗುತ್ತಾನೆ. ಸಿದ್ಧಾರ್ಥ ಎಲ್ಲ ಮಕ್ಕಳಂತೆ ಬಾಲ್ಯದಿಂದಲೇ ಅದೇನು, ಇದೇನು ಎಂದು ಪ್ರಶ್ನೆ ಕೇಳುತ್ತಲೇ ಬೆಳೆದವ. ಯುವಕನಾದರೂ ಪ್ರಶ್ನೆ ಕೇಳುವ ಗೌತಮ ನಿಜವಾಗಿಯೂ ಅನ್ವೇಷಕ, ಕುತೂಹಲಿ. ವಿಚಾರವಂತನಾಗಿದ್ದ ಆತ ಕೊನೆಗೂ ಈ ಜಗತ್ತಿನಲ್ಲಿ ಯಾಕಿಷ್ಟು ದುಃಖ ತುಂಬಿದೆ ಎಂಬ ಮಹಾಪ್ರಶ್ನೆಯನ್ನೇ ಕೇಳಿ ಅದರ ಬೆನ್ನು ಹತ್ತಿ ಉತ್ತರ ಹುಡುಕಿ ಸತ್ಯ ಅರಿಯಲು ಹೋಗಿದ್ದ. "ನೃಪ ಯಾ ಮುನಿಶ್ರೇಷ್ಠ" ಆಗುವನೆಂದು ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಜ್ಯೋತಿಷ್ಯ ಹೇಳುವವರು ಅಂದೂ ಇದ್ದರು. ಆದರೆ ಹಾಗೇನೂ ಆಗದೆ ಗೌತಮ ಬುದ್ಧ ಜಗತ್ತಿನ ಎಲ್ಲ ಸತ್ಯಗಳನ್ನೂ ಅರಿತು ಪ್ರಬುದ್ಧನಾದ.*




**ಯುದ್ಧವೆಂದರೆ ಹುಡುಗಾಟವಲ್ಲ....** *(ಆಯ್ದ ಪತ್ರಿಕಾ ಬರಹಗಳು)*

*ವಿಶ್ವ ಕುಂದಾಪುರ*

**ಪುಟ : iv + ೧೭೬** **ಬೆಲೆ : ರೂ. ೧೦೦**

**ಬಂಡಾಯ ಪ್ರಕಾಶನ,** ಕೆರೆಕೋಣ, ಅರೇಅಂಗಡಿ, ಹೊನ್ನಾವರ, ಉತ್ತರ ಕನ್ನಡ

*ಇವು ಈಗಾಗಲೇ ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡ ಲೇಖಕರ ಬರಹಗಳ ಸಂಕಲನ. ಪತ್ರಕರ್ತರಾಗಿ ಉದ್ಯೋಗದಲ್ಲಿದ್ದು ಸುಮಾರು ಮೂವತ್ತು ವರ್ಷಗಳ ಅನುಭವವುಳ್ಳ ವಿಶ್ವ ಕುಂದಾಪುರ ಅವರು ನಾಡಿನ ಹೆಚ್ಚಿನ ಪತ್ರಿಕೆಗಳಲ್ಲಿ ವರದಿಗಾರರಾಗಿ ಸಂಪಾದಕರಾಗಿ ದುಡಿದವರು. ಬರವಣಿಗೆಯಲ್ಲಿ ಎಡಪಂಥೀಯ ಒಲವು. ಪತ್ರಿಕೆಗಳಿರುವುದು ಬಂಡವಾಳಗಾರರಿಗೆ, ಶೋಷಕರಿಗಾಗಿ ಮಾತ್ರ ಅಲ್ಲವೇ ಅಲ್ಲ; ದೀನರ–ದಲಿತರ–ಶೋಷಿತವರ್ಗಗಳ ನೋವು, ದನಿಗಳಿಗೂ ಅಲ್ಲಿ ಪ್ರಾತಿನಿಧ್ಯವಿರಬೇಕೆಂದು ಶ್ರಮಿಸಿದವರು. ಹಾಗಾಗಿ ಅವರ ಬರಹಗಳು ಹೆಚ್ಚಾಗಿ ಶೋಷಿತ ಸಮುದಾಯಗಳ ಪರವಾಗಿರುತ್ತವೆ. ದುಡಿಯುವ ಜನರಿಗಾಗಿ, ಜನಸಾಮಾನ್ಯರಿಗಾಗಿ ಇವರ ಲೇಖನಿ ಹೆಚ್ಚು ಸವೆದಿದೆ ಎನ್ನಲಡ್ಡಿಯಿಲ್ಲ. ಇವರ ಬರಹಗಳ ಹರಹು ಬಹುದೊಡ್ಡದಾಗಿದ್ದು ವಿಷಯ ವೈವಿಧ್ಯತೆಯಿಂದಲೂ ಕೂಡಿದ್ದು. ಎಲ್ಲ ಕ್ಷೇತ್ರಗಳಲ್ಲಿನ ಅನುಭವವಿದ್ದವರು ಮಾತ್ರ ಇಂಥ ಪ್ರಬುದ್ಧ ಲೇಖನಗಳನ್ನು ಬರೆಯಬಲ್ಲರು. ಇಲ್ಲಿ ಪ್ರೌಢಿಮೆ ಕೂಡಾ ಎದ್ದು ಕಾಣುತ್ತಿದೆ. ಸಾಮಾನ್ಯ ಜ್ಞಾನವೂ ಹತ್ತು ಹಲವು ದಿಶೆಗಳಲ್ಲಿ ಗಮನವೂ ಇರಲೇಬೇಕಾದ್ದು. ಅವೆಲ್ಲವನ್ನೂ ಮೈಗೂಡಿಸಿಕೊಂಡಿರುವ ವಿಶ್ವ ಅವರಿಂದ ಈ ಅಪೂರ್ವ ಲೇಖನಗಳು ಮೂಡಿವೆ.*




**ಮೊಳಕೆಯೊಡೆಯದ ಬೀಜ** *(ಕವನಗಳು)* *ಡಾ|| ವಸು ಮಳಲಿ*

**ಪುಟ : ೧೨೮** **ಬೆಲೆ : ರೂ. ೯೦**

**ಲಡಾಯಿ ಪ್ರಕಾಶನ,** ನಂ.೨೧, ಪ್ರಸಾದ್ ಹಾಸ್ಟೆಲ್, ಗದಗ–೫೮೨ ೧೦೧

*ಮೊಳಕೆಯೊಡೆಯದ ಬೀಜ – ಎಂದರೇನೇ ಒಂದು ಕ್ಷಣ ಮೈ ಜುಂ ಎನಿಸುತ್ತದೆ. ಏನಾಗಬೇಕಿತ್ತೋ ಅದು ಆಗಿಲ್ಲ; ಏನಾಗಬೇಕಾಗಿದೆಯೋ ಅದೂ ಆಗುತ್ತಿಲ್ಲ. ಸಹಜವಾಗಿ ಚಿಗುರೊಡೆದು ಯಾವುದೂ ಫಲ ನೀಡುತ್ತಿಲ್ಲ. ಜಗತ್ತೇಕೆ ಹೀಗೆ ಮಾರ್ಪಾಡಾಗಿದೆ? ಮನಸ್ಸಿಗೆ ಮುದನೀಡುವ ಘಟನೆಗಳು ಯಾವುವೂ ಇಲ್ಲದಂತಾಗಿದ್ದು ಹೇಗೆ? ಮೊಳಕೆಯೊಡೆದು ಚಿಗುರಾಗಿ ಗಿಡವಾಗಿ ಮರವಾಗಿ ಫಲ ನೀಡುವ ಕ್ರಿಯೆ ತಡೆದವರಾರು? ಹೀಗೆ ಇಲ್ಲಿನ ಕವನಗಳಲ್ಲೆಲ್ಲ ವಿಷಾದ, ಹತಾಶೆ, ನೋವು ಮಡುಗಟ್ಟಿದೆ. ಒಂದೊಂದರ ಸೋಲುವಿಕೆಗೂ ಒಂದೊಂದು ಕವನ ಕನ್ನಡಿಯಂತಿದೆ. ಸಹಜವಾದ ಯಾವೊಂದೂ ಇಲ್ಲದ ಈ ಜಗತ್ತಿಗೇನು ಅರ್ಥ? ಅದು ಎಷ್ಟು ದಿನ ಮುಂದುವರಿಯಬಹುದು? ಪ್ರಕೃತಿ ಸಹಬಾಳ್ವೆ ಹೇಳಿಕೊಟ್ಟಷ್ಟೂ ಮನುಷ್ಯ ಮಾತ್ರ ಯಾಕೆ ಎಲ್ಲವನ್ನೂ ಕೊಡವಿ ನಿಂತು ತಾನೇ ತಾನಾಗಿ ಮೆರೆಯುತ್ತಿದ್ದಾನೆ? ಉತ್ತರವನ್ನು ಮನುಷ್ಯನೇ ಕೊಡಬೇಕು. ಬಾಳು ಭವ್ಯವಾಗಿದ್ದಲ್ಲಿ ಸುಂದರ ಕವನಗಳು ರಚನೆಯಾದಾವು. ಭವ್ಯ–ಸುಂದರ–ಸಮೃದ್ಧ–ಸೌಖ್ಯ ಇಂಥ ಪದಗಳು ಅರ್ಥ ಕಳೆದುಕೊಂಡಾಗ ಅಸಹನೆ ಮೇರೆ ಮೀರಿ ಪ್ರತಿಭಟನೆಯ ಇಂಥ ಕವನಗಳು ಹೆಡೆ ಎತ್ತಿ ನಿಲ್ಲುತ್ತವೆ. ಸುಖದ ಸುಪ್ಪತ್ತಿಗೆಯ ತುತ್ತತುದಿಯಲ್ಲಿದ್ದೇನೆಂದು ಭ್ರಮಿಸುವ ಮಾನವನಿಂದು ಓದಲೇಬೇಕಾದ ಪದ್ಯಗಳು.*

**ಕಾಡಿನ ಚಿತ್ರಗಳು** *ಡಾ|| ಸಿ. ಎಚ್. ಬಸಪ್ಪನವರ*

**ಪುಟ : xviii + ೨೨೨=೨೪೦** **ಬೆಲೆ : ರೂ. ೨೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಕಾಡು ಅದ್ಭುತ ರಮ್ಯ ಪ್ರದೇಶ. ಅಂತೆಯೇ ನಿಸರ್ಗದ ರುದ್ರ ರಮಣೀಯತೆಯ ಚಿತ್ರಣವೂ ಹೌದು. ಕಾಡಿಲ್ಲದೆ ನಾಡಿಲ್ಲ ಎಂದು ನಮ್ಮ ಹಿರಿಯರು ಒಂದೇ ಮಾತಿನಲ್ಲಿ ಹೇಳಿದ್ದಾರೆ. ಪ್ರಕೃತಿಯಲ್ಲಿ ಎಷ್ಟು ವಿಧದ ಸಸ್ಯ ಸಂಕುಲವಿರುವುದೋ ಅವೆಲ್ಲಾ ಕಾಡಿನಲ್ಲಿವೆ. ಅದನ್ನೇ ನಂಬಿಕೊಂಡು ಎಷ್ಟು ವಿಧದ ಜೀವಿ ಸಂಕುಲವಿದೆಯೋ ಅವುಗಳ ಆವಾಸಸ್ಥಾನವೂ ಕಾಡೇ ಆಗಿದೆ. ಸೂರ್ಯರಶ್ಮಿ ನೆಲ ಸೋಕದಂತಹ ದಟ್ಟ ಹಸುರೆಲೆ ಕಾಡುಗಳು ಈ ಭೂಮಿಯ ಮೇಲಿದ್ದುವಂತೆ. ಜೀವಿ ಸಂಕುಲದ ಸಮತೋಲನವೆಂಬಂತೆ ಧಾರಾಳವಾಗಿ ವನ್ಯಜೀವಿಗಳೂ ಇದ್ದುವಂತೆ. ಇಂದು ಅವೆಲ್ಲ ನಶಿಸುತ್ತಿರುವ ಸಂದರ್ಭ ದಲ್ಲಿ "ಕಾಡಿನ ಚಿತ್ರಗಳು" ಒಂದು ಅಪರೂಪದ ಪುಸ್ತಕ. ಕಾಡು ಬೋಳಾದರೆ ವನ್ಯಮೃಗಗಳಿಗೆ ಉಳಿಗಾಲವಿಲ್ಲ. ಕಾಡಿನಲ್ಲಿ ಜೀವಿತಕ್ಕಾಗಿ ಪರಸ್ಪರ ಸಂಘರ್ಷ ನಡೆಯುತ್ತಲೇ ಇರುತ್ತದೆ. ಆದರೆ ಮಾಂಸಾಹಾರಿ ಪ್ರಾಣಿಗಳು ಬೇಟೆಯಾಡಿ ಇತರ ಪ್ರಾಣಿಗಳನ್ನು ಆಹಾರಕ್ಕಾಗಿ ಕೊಲ್ಲದಿದ್ದರೆ ಅವು ಬದುಕಲಾರವು. ಹುಲಿ ಹುಲ್ಲು ತಿಂದೀತೆ? ಹೀಗೆ ಕಾಡಿನ ಪ್ರಾಣಿಗಳ ವರ್ತನೆ, ಅವುಗಳ ಬದುಕು, ಅವು ಪರಸ್ಪರ ಕಲಿಸುವ ಸಂಕೇತ, ಯಾವುದೋ ಪ್ರಾಣಿಗೆ ಆಹಾರವಾಗಲೆಂದೇ ಬದುಕುವ ಸಸ್ಯಾಹಾರಿ ಪ್ರಾಣಿ, ಒಂದನ್ನು ಇನ್ನೊಂದು ತಿಂದು ಬದುಕುವ ಇಂಥ ವ್ಯವಸ್ಥೆಯ ಒಂದು ಚಿತ್ರಣ ಇಲ್ಲಿದೆ. ಕಾಡಿನ ಕ್ರೌರ್ಯದ ನಡುವೆ ಹೂಬಿಡುವ ಮರ–ಗಿಡಗಳ ಮನಮೋಹಕ ದೃಶ್ಯ, ಹಣ್ಣು–ಹೂವುಗಳಿಂದ ಕಂಗೊಳಿಸುವ ವೃಕ್ಷಸಮೂಹ, ದುಂಬಿಗಳ ಹಾರಾಟ – ಓಹ್ ಕಾಡು ಆಪ್ಯಾಯಮಾನ ಎನ್ನಿಸದಿರದು.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

ಮ. ಶ್ರೀ. ಮುರಳಿ ಕೃಷ್ಣ



# ಮಹಿಳಾ ಕೇಂದ್ರಿತ

# ಲಿಪ್‌ಸ್ಟಿಕ್ ಅಂಡರ್ ಮೈ ಬುರ್ಖಾ

**ಹಿಂ**ದಿ ಚಲನಚಿತ್ರರಂಗದಲ್ಲಿ ತೆರೆಕಂಡ ಚಲನಚಿತ್ರಗಳ ಪೈಕಿ ಮಹಿಳಾ ಕೇಂದ್ರಿತ ಚಲನಚಿತ್ರಗಳ ಸಂಖ್ಯೆ ಕಡಿಮೆ ಎಂದೇ ಹೇಳಬಹುದು. ಹೆಚ್ಚಿನ ಹಿಂದಿ ಚಲನಚಿತ್ರಗಳಲ್ಲಿ ಮಹಿಳಾ ಪಾತ್ರಗಳು ಸ್ಟೀರಿಯೊ ಟೈಪಾಗಿ ಬಿಂಬಿತಗೊಳ್ಳುವುದೇ ಜಾಸ್ತಿ. ಅವುಗಳು ಸಿದ್ಧಸೂತ್ರಗಳ ಬಂಧಿಗಳಾಗಿ, ಯಥಾಸ್ಥಿತಿವಾದಿ ಆಯಾಮವನ್ನು ಹೊಂದಿರುತ್ತವೆ. ಆದರೆ 'ಮದರ್ ಇಂಡಿಯಾ', 'ಅರ್ಥ್', 'ದಾಮಿನಿ', 'ಬ್ಯಾಂಡಿಟ್ ಕ್ವೀನ್', 'ಮಿರ್ಚ್ ಮಸಾಲ', 'ಗಾಡ್‌ಮದರ್', 'ಫೈರ್', 'ವಾಟರ್', 'ಕಹಾನಿ' ಮುಂತಾದ ಅನೇಕ ಚಲನ ಚಿತ್ರಗಳು ಹೆಣ್ಣಿನ ಅಭಿವ್ಯಕ್ತಿಯ ಸಿದ್ಧಮಾದರಿಯನ್ನು ಮುರಿದು ತಮ್ಮ ಛಾಪನ್ನು ಮೂಡಿಸುವುದರಲ್ಲಿ ಸಫಲವಾಗಿವೆ.

ಇತ್ತೀಚೆಗೆ ಅಲಂಕೃತ ಶ್ರೀವತ್ಸ ನಿರ್ದೇಶಿಸಿರುವ ಎರಡನೇ ಹಿಂದಿ ಚಲನಚಿತ್ರ 'ಲಿಪ್‌ಸ್ಟಿಕ್ ಅಂಡರ್ ಮೈ ಬುರ್ಖಾ' ತೆರೆಕಂಡಿದೆ. ಇದರಲ್ಲಿ ಭೋಪಾಲಿನ ನಾಲ್ಕು ಸಾಮಾನ್ಯ ಮಹಿಳೆಯರ ಬದುಕಿನ ಎರಡು ಮುಖಗಳನ್ನು ಅನಾವರಣಗೊಳಿಸಲಾಗಿದೆ. ಅವರು ನಿಜಜೀವನದಲ್ಲಿ ಮಹಿಳೆಯರು ಪಿತೃಪ್ರಾಧಾನ್ಯತೆಯನ್ನೂ ಒಳಗೊಂಡಂತೆ ಅನೇಕ ಉಸಿರುಕಟ್ಟಿಸುವಂತಹ ನಿರ್ಬಂಧಗಳನ್ನು ಅನುಭವಿಸುತ್ತಿರುತ್ತಾರೆ. ಅವರು ತಮ್ಮ ರಹಸ್ಯ ಜೀವನದಲ್ಲಿ ತಾವು ಇಚ್ಛಿಸಿದ ರೀತಿಯಲ್ಲಿ ಸ್ವಾತಂತ್ರ್ಯವನ್ನು ಬೊಗಸೆಯಿಂದ ನೀರನ್ನು ಸೇವಿಸುವಂತೆ ಬಳಸಿ ಬದುಕುತ್ತಿರುತ್ತಾರೆ. ಇಲ್ಲಿಯೇ ಅವರ ಚೌಕಟ್ಟಿನಾಚಿನ ಜಗಿತಗಳು, ಸ್ವಾಧೀನತೆಯ ವಿರುದ್ಧದ ಪ್ರತಿರೋಧಗಳು ಜರುಗುತ್ತಿರುತ್ತವೆ. ಕಾಲೇಜಿನಲ್ಲಿ ಓದುತ್ತಿರುವ ಯುವತಿ ರಿಹಾನ ಅಬಿದಿ (ನಟಿ–ಪ್ಲಬಿತ ಬೋರ್‌ಥಾಕೂರ್)ಳಿಗೆ ಅಮೇರಿಕದ ಹಾಡುಗಾರ್ತಿ, ಗೀತರಚನೆಗಾರ್ತಿ ಹಾಗೂ ನಟಿ ಮಿಲೆ ರೇ ಸೈರಸ್ ಎಂದರೆ ಪಂಚಪ್ರಾಣ. ಇಂಗ್ಲೆಂಡಿನ ರಾಕ್ ಬ್ಯಾಂಡ್‌ನ 'ಸ್ಟೇರ್‌ವೇ ಟು ಹೆವೆನ್' ಎಂಬ ಹಾಡು ತುಂಬ ಅಚ್ಚುಮೆಚ್ಚು. ತನ್ನ ಚಿಕ್ಕ ಮನೆಯಲ್ಲಿ ತಾನು ಆರಾಧಿಸುವ ಹಾಡುಗಾರರ, ನಟರ ಪೋಸ್ಟರ್‌ಗಳನ್ನು ಕದ್ದುಮುಚ್ಚಿಹಾಕಿರುತ್ತಾಳೆ. ಮನೆಯಿಂದ ಹೊರಡುವಾಗ ಸಾಂಪ್ರದಾಯಿಕ ಬುರ್ಖಾ ಉಡುಗೆಯನ್ನು ತೊಡುವ ಆಕೆ ಕಾಲೇಜಿನಲ್ಲಿ ತನಗೆ ಇಷ್ಟವಾಗುವ ಜೀನ್ಸ್, ನವೀನ ಬಗೆಯ ಪಾದರಕ್ಷೆಗಳನ್ನು ಧರಿಸುತ್ತಾಳೆ. ಈ ಬಗೆಯ ಆಸೆಗಳಿಗಾಗಿ ಆಕೆ ಮಾಲ್‌ಗಳಲ್ಲಿ ಕಳ್ಳತನ ಮಾಡುತ್ತಾಳೆ. ಯುವಕರಿಗೆ, ಅದರಲ್ಲೂ ಮುಖ್ಯವಾಗಿ ಯುವತಿಯರಿಗೆ ಹೆಚ್ಚಿನ, ನೈಜ ಸ್ವಾತಂತ್ರ್ಯವಿರಬೇಕೆಂಬ ಪ್ರತಿಭಟನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರುತ್ತಾಳೆ. ಮನೆಗೆ ಹಿಂದಿರುಗಿದೊಡನೆ ತನ್ನ ಕಟ್ಟಾ ಸಂಪ್ರದಾಯಸ್ಥ ಅಪ್ಪನ ಬಟ್ಟೆ ಹೊಲಿಯುವ ಅಂಗಡಿಯಲ್ಲಿ ಬುರ್ಖಾ ಹೊಲಿಯುವ ಕಾರ್ಯದಲ್ಲಿ ನಿರತಳಾಗುತ್ತಾಳೆ. ಲೀಲಾ (ನಟಿ ಆಹಾನ ಕುಮ್ರ) ಒಂದು ಬ್ಯೂಟಿ ಪಾರ್ಲರನ್ನು ನಡೆಸುತ್ತಿರುತ್ತಾಳೆ. ಆಕೆಯ ಬಾಯ್‌ಫ್ರೆಂಡ್ ಹಾಗೂ ಛಾಯಾಗ್ರಾಹಕ ಅರ್ಷಾದ್ (ನಟ – ವಿಕ್ರಾಂತ್ ಮೆಸ್ಸಿ) ಜೊತೆಗೂಡಿ ತನ್ನ ವ್ಯಾಪಾರವನ್ನು ವಿಸ್ತರಿಸುವ, ಸ್ಥಿತಿವಂತಳಾಗುವ ಕನಸುಗಳನ್ನು ಕಾಣುತ್ತಿರುತ್ತಾಳೆ. ಆತನೊಡನೆ ಕಾಮಕೇಳಿಯಲ್ಲಿ ಭಾಗಿಯಾಗಲು, ತನಗೆ ಬೇರೊಬ್ಬ ಗಂಡಿನೊಡನೆ ಮದುವೆ ನಿಶ್ಚಯವಾಗಿದ್ದರೂ, ಆಕೆಗೆ ಯಾವ ಹಿಂಜರಿಕೆಯೂ ಇರುವುದಿಲ್ಲ. ಆಕೆಯ ತಾಯಿ ಹಲವು ವರ್ಷಗಳಿಂದ ನಗ್ನರೂಪದರ್ಶಿಯಾಗಿ ಹಣ ಸಂಪಾದಿಸಿ ಸಂಸಾರವನ್ನು ನಿರ್ವಹಿಸುತ್ತಿರುತ್ತಾಳೆ. ಎಲ್ಲ ತಾಯಿಯರಂತೆಯೆ ಆಕೆಗೂ ತನ್ನ ಮಗಳು ಸಂಸಾರಸ್ಥೆಯಾಗಿ, ಹಸನಾಗಿ ಬಾಳಬೇಕು ಎಂಬ ಮಹದಾಸೆ ಇರುತ್ತದೆ. ಮೂವತ್ತರ

ನಾಲ್ಕು ಸ್ತ್ರೀ ಪಾತ್ರಗಳು ಒಟ್ಟಿಗೆ ಸಿಗರೇಟು ಸೇದುತ್ತಿರುವಂತೆ ಕೊನೆಯ ದೃಶ್ಯದಲ್ಲಿ ತೋರಿಸಲಾಗಿದೆ. ಇದು ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವುದಕ್ಕಿಂತಲೂ ಒಂದು ಕ್ಲೀಷೆಯಾಗಿ ಕಂಡುಬರುತ್ತದೆ. ಇದಕ್ಕೆ ಮುನ್ನ ಉಷಾ ಬುವಾಜಿಯನ್ನು ಹೊರಹಾಕುವಾಗ ಆಕೆಯ ಬಳಿಯಿದ್ದ ರಂಜಕ ಕಾದಂಬರಿಗಳನ್ನೂ ಒಗೆಯಲಾಗುತ್ತದೆ. ಚೆಲ್ಲಾಪಿಲ್ಲಿಯಾಗುವ ಅವುಗಳನ್ನು ಇತರ ಮೂವರು ಮಹಿಳೆಯರು ಬುವಾಜಿ ಜೊತೆ ಸೇರಿ ಹೆಕ್ಕುತ್ತಾರೆ. ಇದು ಇತ್ಯಾತ್ಮಕವಾದ ಸಂದೇಶವನ್ನು ಸಾರುತ್ತದೆ. ನಾಲ್ಕು ಸ್ತ್ರೀ ಪಾತ್ರಗಳ ಪೈಕಿ ತಲಾ ಎರಡು ಮುಸಲ್ಮಾನ ಮತ್ತು ಹಿಂದೂ ಪಾತ್ರಗಳಿವೆ. ಇದರ ಹಿಂದೆ ಸಮತೂಕವಿರಲಿ ಎಂಬ ಲೆಕ್ಕಾಚಾರ ಅಡಗಿದೆಯೇ ? ಸಿಸಿ ಟಿವಿಗಳಿರುವ ಮಾಲ್‌ಗಳಲ್ಲಿ ರಿಹಾನ ಕಳ್ಳತನ ಮಾಡಿದರೂ, ಒಮ್ಮೆಯೂ ಸಿಕ್ಕಿಹಾಕಿಕೊಳ್ಳುವುದಿಲ್ಲ ! ಇಡೀ ಚಲನಚಿತ್ರದಲ್ಲಿ ಒಂದಾದರೂ ಪುರುಷಪಾತ್ರ ಸಕಾರಾತ್ಮಕವಾಗಿ ಬಿಂಬಿತಗೊಂಡಿಲ್ಲ.



ಆಸುಪಾಸಿನ ವಯೋಮಾನದ ಶಿರೀನ್ ಅಸ್ಲಾಂ (ನಟಿ ಕೊನ್‌ಕೊನ್ ಸೇನ್) ಮೂರು ಮಕ್ಕಳ ತಾಯಿ. ಆಕೆಯ ಗಂಡ ರಹೀಂ ಅಸ್ಲಾಂ (ನಟ ಸುಶಾಂತ್ ಸಿಂಗ್) ವಿದೇಶದಲ್ಲಿ ಕೆಲಸದಲ್ಲಿರುತ್ತಾನೆ. ಆದರೆ ಆತನ ಸಂಪಾದನೆ ಸಂಸಾರವನ್ನು ನಡೆಸಲು ಸಾಕಾಗುವುದಿಲ್ಲ. ಆದುದರಿಂದ ಶಿರೀನ್ ಒಬ್ಬ ಮಾರಾಟಗಾರ್ತಿ (ಸೇಲ್ಸ್ ವುಮನ್)ಯಾಗಿ ದುಡಿಯುತ್ತಾಳೆ. ಆಕೆಗೆ ತನ್ನ ಕಾರ್ಯಕ್ಷಮತೆಗಾಗಿ ಕಂಪನಿಯಿಂದ ಮನ್ನಣೆ ಹಾಗೂ ಪುರಸ್ಕಾರಗಳು ದೊರೆಯುತ್ತವೆ. ಗಂಡ ರಹೀಂನಿಗೆ ತನ್ನ ಹೆಂಡತಿ ಕೆಲಸಕ್ಕೆ ಹೋಗುವುದು ಸುತರಾಂ ಇಷ್ಟವಿರುವುದಿಲ್ಲ. ಪುರುಷ ಅಹಂನ ಪ್ರತೀಕವಾಗಿರುವ ಆತನಿಗೆ ವಿವಾಹೇತರ ಸಂಬಂಧವೂ ಇರುತ್ತದೆ. ಶಿರೀನ್ ದೇಹ ಒಪ್ಪಿಸಿಕೊಳ್ಳುವ ಯಂತ್ರ ಮಾತ್ರ ಆಗಿರುತ್ತಾಳೆ. ಆಕೆಯ ಭಾವನೆಗಳಿಗೆ ಗಂಡನಿಂದ ಸ್ಪಂದನ ಸಿಗುವುದಿಲ್ಲ. ಆದರೂ ಆಕೆ ತನ್ನತನವನ್ನು ಕಾಪಾಡಿಕೊಳ್ಳಲು ಹೆಣಗುತ್ತಿರುತ್ತಾಳೆ. ಇನ್ನು ನಾಲ್ಕನೆಯ ಮಹಿಳಾ ಪಾತ್ರವಾದ ಐವತ್ತೈದು ವರ್ಷದ ವಿಧವೆ ಉಷಾ ಬುವಾಜಿ (ನಟಿ – ರತ್ನ ಪಾತಕ್ ಷಾ) ಒಂದು ಹಳೆಯ ಹವೇಲಿ ಹಾಗೂ ಸಿಹಿ ತಿನಿಸುಗಳ ಮಾರಾಟದ ಅಂಗಡಿಯ ಒಡತಿ ಯಾಗಿರುತ್ತಾಳೆ. ಆಕೆ ತನ್ನ ದೈಹಿಕ ಕಾಮನೆಗಳನ್ನು ಪಲ್ಪ್ ಕಾದಂಬರಿಗಳ ಸ್ತ್ರೀ ಪಾತ್ರಗಳ ರೋಮಾಂಚನಗೊಳಿಸುವ ಸನ್ನಿವೇಶಗಳನ್ನು ಓದುವ ಮೂಲಕ ನೀಗಿಸಿಕೊಳ್ಳುತ್ತಿರುತ್ತಾಳೆ. ಅಂತಹ ಕಾದಂಬರಿಗಳನ್ನು ಆಕೆ ಆಧ್ಯಾತ್ಮಕ ಪುಸ್ತಕಗಳ ಒಳಗಡೆ ಗೋಪ್ಯವಾಗಿ ಇರಿಸಿಕೊಂಡು ಓದುತ್ತಿರುತ್ತಾಳೆ. ಹೀಗಿರಬೇಕಾದರೆ ಆಕೆಗೆ ಒಬ್ಬ ಯುವಕ ಈಜು ಬೋಧಕನ ಪರಿಚಯವಾಗುತ್ತದೆ. ಆತನಿಂದ ಆಕರ್ಷಿತಗೊಳ್ಳುವ ಆಕೆ ಆತನೊಡನೆ ಫೋನ್‌ರತಿಯಲ್ಲಿ ತೊಡಗುತ್ತಾಳೆ. ಈಜು ಕ್ಲಾಸುಗಳಿಗೆ ಹಾಜರಾಗಲು ಅನೇಕ ಸಬೂಬುಗಳನ್ನು ನೀಡಬೇಕಾಗುತ್ತದೆ. ಸಂಶಯಾತ್ಮಕ ಮನಸ್ಸುಗಳ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಹವೇಲಿಯ ಮೇಲೆ ಕಣ್ಣಿಟ್ಟಿರುವ ರಿಯಲ್ ಎಸ್ಟೇಟ್ ಏಜಂಟರನ್ನು ಸುಲಭವಾಗಿ ಸಂಭಾಳಿಸುವ ಆಕೆಗೆ ತನ್ನ ಅನುರಾಗದ ಬಯಕೆಗಳನ್ನು ಬಚ್ಚಿಟ್ಟುಕೊಳ್ಳುವುದು ಪ್ರಯಾಸಕರ ಕೆಲಸವಾಗುತ್ತದೆ. ಕೊನೆಗೆ ಆಕೆಯ ರಹಸ್ಯಗಳು ಬಹಿರಂಗಗೊಳ್ಳುತ್ತವೆ. ಮನೆಯಿಂದ ಹೊರಹಾಕಲ್ಪಡುತ್ತಾಳೆ.

ಈ ಚಲನಚಿತ್ರದಲ್ಲಿ ಲಿಪ್‌ಸ್ಟಿಕ್ ಮತ್ತು ಬುರ್ಖಾ ಎರಡನ್ನೂ ಮೆಟಫರ್‌ಗಳಾಗಿ ಬಿಂಬಿಸಲಾಗಿದೆ. ಲಿಪ್‌ಸ್ಟಿಕ್ ನಾಲ್ಕು ಮಹಿಳೆಯರ ಕನಸುಗಳು, ಆಕಾಂಕ್ಷೆಗಳು, ಆಶೋತ್ತರಗಳು, ಉತ್ತಮ ನಾಳೆಗಳ ನಿರೀಕ್ಷೆಗಳು ಹಾಗೂ ಒಂದರ್ಥದಲ್ಲಿ ಬಿಡುಗಡೆಯ ಹಾದಿಗಳನ್ನು ಸೂಚಿಸುತ್ತವೆ. ಲಿಪ್‌ಸ್ಟಿಕ್‌ಅನ್ನು ನಿತ್ಯವು ಅಳಿಸಿ ತೆಗೆದುಹಾಕುವುದರಿಂದ, ಅದು ನನಸಾಗದ ನಿರೀಕ್ಷೆಗಳನ್ನು ಹಾಗೂ ಪುನಃ ಪೂಸುವುದರಿಂದ ಅವು ಚಿಗಿಯುತ್ತವೆ ಎಂದೂ ಭಾವಿಸಬಹುದು. ಬುರ್ಖಾ ಅಧೀನತೆಯ, ಅತಂತ್ರತೆಯ ಭಾವನೆಗಳಿಗೆ ತೆರೆಹಾಕುವ ಪ್ರತೀಕವಾಗಿದೆ. ಪಿತೃಪ್ರಾಧಾನ್ಯತೆಯ ಅಂಶ ಢಾಳಾಗಿ ಮೂಡಿಬಂದಿದೆ. ನಾಲ್ಕು ಸ್ತ್ರೀ ಪಾತ್ರಗಳನ್ನು ಹೆಣೆದಿರುವ ಬಗೆ ಪರಿಣಾಮಕಾರಿಯಾಗಿದೆ. ರತ್ನ ಪಾತಕ್ ಷಾ ಮತ್ತು ಕೊನ್‌ಕೊನ್ ಸೇನ್‌ರಂತಹ ಅನುಭವಿ ನಟಿಯರು ತಮ್ಮ ಪಾತ್ರಗಳಿಗೆ ನ್ಯಾಯ ಒದಗಿಸಿದ್ದಾರೆ. ಹೊಸಬರಾದ ಆಹಾನ ಕುಮ್ರ ಮತ್ತು ಪ್ಲಬಿತ ಬೋರ್‌ಥಾಕೂರ್ ತಮ್ಮ ಪಾತ್ರಗಳಿಗೆ ತಕ್ಕಂತೆ ನಟಿಸಿದ್ದಾರೆ.

ನಾಲ್ಕು ಸ್ತ್ರೀ ಪಾತ್ರಗಳು ಒಟ್ಟಿಗೆ ಸಿಗರೇಟು ಸೇದುತ್ತಿರುವಂತೆ ಕೊನೆಯ ದೃಶ್ಯದಲ್ಲಿ ತೋರಿಸಲಾಗಿದೆ. ಇದು ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವುದಕ್ಕಿಂತಲೂ ಒಂದು ಕ್ಲೀಷೆಯಾಗಿ ಕಂಡುಬರುತ್ತದೆ. ಇದಕ್ಕೆ ಮುನ್ನ ಉಷಾ ಬುವಾಜಿಯನ್ನು ಹೊರಹಾಕುವಾಗ ಆಕೆಯ ಬಳಿಯಿದ್ದ ರಂಜಕ ಕಾದಂಬರಿಗಳನ್ನೂ ಒಗೆಯಲಾಗುತ್ತದೆ. ಚೆಲ್ಲಾಪಿಲ್ಲಿಯಾಗುವ ಅವುಗಳನ್ನು ಇತರ ಮೂವರು ಮಹಿಳೆಯರು ಬುವಾಜಿ ಜೊತೆ ಸೇರಿ ಹೆಕ್ಕುತ್ತಾರೆ. ಇದು ಇತ್ಯಾತ್ಮಕವಾದ ಸಂದೇಶವನ್ನು ಸಾರುತ್ತದೆ. ನಾಲ್ಕು ಸ್ತ್ರೀ ಪಾತ್ರಗಳ ಪೈಕಿ ತಲಾ ಎರಡು ಮುಸಲ್ಮಾನ ಮತ್ತು ಹಿಂದೂ ಪಾತ್ರಗಳಿವೆ. ಇದರ ಹಿಂದೆ ಸಮತೂಕವಿರಲಿ ಎಂಬ ಲೆಕ್ಕಾಚಾರ ಅಡಗಿದೆಯೇ ? ಸಿಸಿ ಟಿವಿಗಳಿರುವ ಮಾಲ್‌ಗಳಲ್ಲಿ ರಿಹಾನ ಕಳ್ಳತನ ಮಾಡಿದರೂ, ಒಮ್ಮೆಯೂ ಸಿಕ್ಕಿಹಾಕಿಕೊಳ್ಳುವುದಿಲ್ಲ ! ಇಡೀ ಚಲನಚಿತ್ರದಲ್ಲಿ ಒಂದಾದರೂ ಪುರುಷಪಾತ್ರ ಸಕಾರಾತ್ಮಕವಾಗಿ ಬಿಂಬಿತಗೊಂಡಿಲ್ಲ. ಅಂದರೆ ಇಲ್ಲಿ ಕಪ್ಪು ಹಾಗೂ ಬಿಳಿಯ ಚಿತ್ರಣವಿದೆ. ಬೂದು ಬಣ್ಣದ್ದೂ ಇಲ್ಲ. ನಿಜ, ಒಂದು ಸಿನೆಮಾದ ನಿರ್ದೇಶಕನಿಗೆ ತನ್ನದೇ ಆದ ರೀತಿಯಲ್ಲಿ ಅಭಿವ್ಯಕ್ತಿಗೊಳಿಸುವ ಹಕ್ಕು ಹಾಗೂ ಸ್ವಾತಂತ್ರ್ಯಗಳಿರುತ್ತವೆ. ಏಕೆಂದರೆ ಅದು ಆತನ / ಆಕೆಯ ಕಲ್ಪನೆಯ ಕೂಸು. ಮೇಲೆ ಪ್ರಸ್ತಾಪಿಸಿರುವ ಕೆಲವು ಅಂಶಗಳ ಹೊರತಾಗಿಯೂ ಈ ಚಲನಚಿತ್ರ ದಿಟ್ಟವಾಗಿ ಮಹಿಳಾ ಕೇಂದ್ರಿತ ಕಥೆಯೊಂದನ್ನು ದಾಟಿಸುತ್ತದೆ.

ಈ ಚಲನಚಿತ್ರ ಹನ್ನೊಂದು ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿದೆ. ಪ್ರಪಂಚದಾದ್ಯಂತ ಮೂವತ್ತೈದು ಚಲನಚಿತ್ರೋತ್ಸವಗಳಲ್ಲಿ ತೆರೆ ಕಂಡಿದೆ. ಇದು ಜನವರಿ ೨೦೧೭ರಲ್ಲೇ ನಮ್ಮ ದೇಶದ ಚಿತ್ರಮಂದಿರಗಳಲ್ಲಿ ತೆರೆಕಾಣಬೇಕಿತ್ತು. ಆದರೆ ಸೆಂಟ್ರಲ್ ಬೋರ್ಡ್ ಆಫ್ ಫಿಲ್ಮ್ ಸರ್ಟಿಫಿಕೇಶನ್ (ಸಿಬಿಎಫ್‌ಸಿ) ಕ್ಯಾತೆ ತೆಗೆಯಿತು. ಅದರ ಪ್ರಕಾರ ಈ ಚಲನಚಿತ್ರದ ಕಥೆ ಮಹಿಳಾ ಕೇಂದ್ರಿತವಾಗಿದೆ; ಜೀವನಕ್ಕೆ ಹೊರತಾದ ರಮ್ಯ ಕಲ್ಪನೆಗಳು, ಸೋಂಕುವ ಸೆಕ್ಸ್ ದೃಶ್ಯಗಳು, ಬಯ್ಗುಳಗಳು, ಆಡಿಯೋ ಪೋರ್ನೊಗ್ರಫಿ ಹಾಗೂ ಸಮಾಜದ ಒಂದು ವಿಭಾಗಕ್ಕೆ ಸೂಕ್ಷ್ಮವೆನಿಸುವ ಅಂಶಗಳಿವೆ. ಈ ಕಾರಣಗಳನ್ನು ಮುಂದೊಡ್ಡಿ ಅದು ದೃಢೀಕರಣ ಪತ್ರವನ್ನು ನೀಡಲಿಲ್ಲ. ಚಿತ್ರ ತಯಾರಕರು ಈ ನಿರ್ಣಯದ ವಿರುದ್ಧ ಫಿಲ್ಮ್ ಸರ್ಟಿಫಿಕೇಶನ್ ಅಪ್ಪೆಲೇಟ್ ಟ್ರಿಬ್ಯುನಲ್‌ಗೆ ಅಪೀಲನ್ನು ಸಲ್ಲಿಸಿದರು. ಕೊನೆಗೆ ೧೬ ಕಟ್‌ಗಳನ್ನು ಮಾಡಿದ ತರುವಾಯ ಈ ಚಲನಚಿತ್ರ ತೆರೆಕಂಡಿದೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧



# ನಾನು ಹೇಗೆ ಸಮಾಜವಾದಿಯಾದೆ!

## – ಹೆಲೆನ್ ಕೆಲ್ಲರ್

**ಡಾ॥ ಸುಧಾ ಕಾಮತ್**

ತನ್ನ ಅಂಗವೈಕಲ್ಯತೆಯನ್ನು ಮೆಟ್ಟಿನಿಂತ ಹೆಲೆನ್ ಕೆಲ್ಲರ್‌ರವರ ಹೋರಾಟದ ಜೀವನವು ಮಿಲಿಯಾಂತರ ಜನರಿಗೆ ಸ್ಫೂರ್ತಿಯ ಸೆಲೆಯಾಗಿದೆ. ಜಗತ್ತಿನಾದ್ಯಂತ ಶಾಲೆಗಳಲ್ಲಿ ಅವರ ಜೀವನಗಾಥೆಯನ್ನು ಹೇಳಿಕೊಡಲಾಗುತ್ತಿದೆ. ಆದರೆ ಪ್ರಪಂಚಕ್ಕೆ ಅಷ್ಟಾಗಿ ತಿಳಿದಿರದ ವಿಷಯವೇನೆಂದರೆ ಹೆಲೆನ್ ಕೆಲ್ಲರ್ ಒಬ್ಬ ಕ್ರಿಯಾಶೀಲ, ದೃಢಸಂಕಲ್ಪದ ಸಮಾಜವಾದಿಯಾಗಿದ್ದರು ಎಂಬುದು. ಹಾಗಾಗಿ ಅವರ ಜೀವನದ ಈ ಮಗ್ಗುಲನ್ನು ಓದುಗರಿಗೆ ಪರಿಚಯಿಸುವ ನಿಟ್ಟಿನಲ್ಲಿದೆ ಅವರದ್ದೇ ಆದ ಈ ಲೇಖನ, 'ಹೌ ಐ ಬಿಕೇಮ್ ಎ ಸೋಷಿಯಲಿಸ್ಟ್'ನ ಅನುವಾದ.

ಕೆಲ ತಿಂಗಳುಗಳಿಂದ ಪತ್ರಿಕೆಗಳಲ್ಲಿ ಹಲವಾರು ಬಾರಿ ನನ್ನ ಹೆಸರು ಹಾಗೂ ಸಮಾಜವಾದ ಜೊತೆ ಜೊತೆಯಾಗಿ ಕಾಣಿಸಿಕೊಂಡಿವೆ. ಪತ್ರಿಕೆಗಳ ಮೊದಲ ಪುಟಗಳನ್ನು ನಾನು ಬೇಸ್‌ಬಾಲ್, ಶ್ರೀ ರೂಸ್‌ವೆಲ್ಟ್ ಹಾಗೂ ನ್ಯೂಯಾರ್ಕ್ ಪೊಲೀಸು ಹಗರಣಗಳೊಡನೆ ಹಂಚಿಕೊಂಡಿದ್ದೇನೆಂದು ನನ್ನ ಗೆಳೆಯರು ಹೇಳುತ್ತಾರೆ. ಈ ನಂಟು ನನಗೇನೂ ಸಂತೋಷ ತರುವಂಥದಲ್ಲ. ಆದರೂ ಒಟ್ಟಾರೆಯಾಗಿ ಬಹಳ ಜನ ನನ್ನಲ್ಲಿ ಹಾಗೂ ನನ್ನ ಶಿಕ್ಷಕಿ ಶ್ರೀಮತಿ ಮ್ಯಾಸಿ (ಆನ್ನೆ ಸುಲ್ಲಿವನ್)ಯವರ ಶೈಕ್ಷಣಿಕ ಸಾಧನೆಗಳಲ್ಲಿ ಆಸಕ್ತಿ ಹೊಂದಿದ್ದಾರೆ ಎಂಬುದು ಖುಷಿಯ ವಿಷಯ. ಕುಪ್ರಸಿದ್ಧಿಯನ್ನು ಒಳಿತಿಗಾಗಿ ಬಳಸಿಕೊಳ್ಳಬಹುದು. ನನ್ನ ಚಟುವಟಿಕೆಗಳನ್ನು ದಾಖಲಿಸುವ ಪತ್ರಿಕೆಗಳ ವರ್ತನೆಯಿಂದ ಸಮಾಜವಾದ ಪದ ಅವುಗಳ ಕಾಲಂಗಳಲ್ಲಿ ಹೆಚ್ಚುಹೆಚ್ಚಾಗಿ ಬರುವಂತಾದರೆ ಅದರಿಂದ ನನಗೆ ಆನಂದವೇ. ಮುಂದೆ ನಾನು ಸಮಾಜವಾದದ ಕುರಿತು ಬರೆಯುವ ಆಕಾಂಕ್ಷೆ ಇಟ್ಟುಕೊಂಡಿದ್ದೇನೆ. ಹಾಗಾಗಿ ನನಗೆ ಮತ್ತು ನನ್ನ ಅಭಿಪ್ರಾಯಗಳಿಗೆ ಕೊಟ್ಟಿರುವ ಹೆಚ್ಚಿನ ಪ್ರಚಾರಕ್ಕೆ ಕೊಂಚಮಟ್ಟಿಗಾದರೂ ನ್ಯಾಯ ಒದಗಿಸಲು ಬಯಸುತ್ತೇನೆ. ಇಲ್ಲಿಯವರೆಗೆ ಈ ವಿಷಯದ ಕುರಿತು ನಾನು ಹೇಳಿದ್ದು, ಬರೆದದ್ದು ಬಹಳ ಕಡಿಮೆ. ನಾನು ಕೆಲ ಪತ್ರಗಳನ್ನು ಬರೆದಿದ್ದೇನೆ. ಅದರಲ್ಲಿ ಗಮನಾರ್ಹವಾದುದೆಂದರೆ ಕಾಮ್ರೇಡ್ ಫ್ರೆಡ್ ವಾರನ್ ಅವರಿಗೆ ಬರೆದದ್ದು. ಅದು 'ಅಪೀಲ್ ಟು ರೀಸನ್'ನಲ್ಲಿ ಪ್ರಕಟವಾಗಿದೆ. ಕೆಲವು ವರದಿಗಾರರೊಂದಿಗೆ ನಾನು ಮಾತನಾಡಿದ್ದೇನೆ. ಅವರಲ್ಲಿ ಒಬ್ಬರಾದ ನ್ಯೂಯಾರ್ಕ್ ವರ್ಲ್ಡ್‌ನ ಶ್ರೀ ಐರ್‌ಲ್ಯಾಂಡ್‌ರವರು ಒಂದು ಒಳ್ಳೆಯ ಮೆಚ್ಚುಗೆಯುಳ್ಳ ವರದಿ ನೀಡಿದರು. ಅದರಲ್ಲಿ ನಾನು ಹೇಳಿದ್ದನ್ನು ಸಂಪೂರ್ಣವಾಗಿ, ಸರಿಯಾಗಿ ಹೇಳಲಾಗಿತ್ತು. ನಾನು ಶೇನೆಕ್ಟೇಡಿಗೆ ಎಂದೂ ಹೋಗಿದ್ದಿಲ್ಲ, ಎಂದೂ ಮೇಯರ್ ಲನ್‌ರವರನ್ನು ಭೇಟಿ ಮಾಡಿದ್ದಿಲ್ಲ. ನನಗೆ ಅವರಿಂದ ಎಂದೂ ಪತ್ರವೂ ಬಂದಿದ್ದಿಲ್ಲ. ಆದರೂ ಅವರು ಶ್ರೀ ಮ್ಯಾಸಿಯವರ ಮೂಲಕ ಸಹಾನುಭೂತಿಯ ಸಂದೇಶಗಳನ್ನು ಕಳುಹಿಸಿರುತ್ತಾರೆ. ಶ್ರೀ ಮ್ಯಾಸಿಯವರ ಕಾಯಿಲೆಯ ಕಾರಣದಿಂದ ಶೇನೆಕ್ಟೇಡಿಯ ಕಾರ್ಮಿಕರನ್ನು ಭೇಟಿಮಾಡುವ ನನ್ನ ಯೋಜನೆಯನ್ನು ನಾನು ಕೈಬಿಡಬೇಕಾಯಿತು.

ಬಂಡವಾಳಶಾಹಿ ಮತ್ತು ಸಮಾಜವಾದಿ ಪತ್ರಿಕೆಗಳು ಇಂತಹ ನಕಾರಾತ್ಮಕ ಹಾಗೂ ಅಂತಹ ಮಹತ್ವವಿಲ್ಲದ ವಿಷಯಗಳ ಕುರಿತು ಅನೇಕ ಸಂಪಾದಕೀಯಗಳನ್ನು ಬರೆದಿವೆ. ಆ ವರದಿಗಳು ಡ್ರಾಯರ್ ತುಂಬ ತುಂಬಿವೆ. ನಾನು ಅದರಲ್ಲಿನ ಕಾಲುಭಾಗವನ್ನೂ ಓದಿಲ್ಲ, ಅವೆಲ್ಲವನ್ನೂ ನಾನು

ನಾನು ಯಾವುದೇ ಬಣ್ಣದ ಬಟ್ಟೆಯ ಆರಾಧಕಳಲ್ಲ. ಆದರೆ ನಾನು ಕೆಂಬಾವುಟವನ್ನು ಮತ್ತು ನನಗೆ ಹಾಗೂ ಇತರ ಸಮಾಜವಾದಿಗಳಿಗೆ ಅದು ಯಾವುದರ ಸಂಕೇತವೋ ಅದನ್ನು ಪ್ರೀತಿಸುತ್ತೇನೆ. ನನ್ನ ಅಧ್ಯಯನ ಕೋಣೆಯಲ್ಲಿ ಒಂದು ಕೆಂಬಾವುಟ ಹಾರಾಡುತ್ತಿದೆ ಮತ್ತು ನನಗೆ ಸಾಧ್ಯವಾದರೆ ನಾನು ಅದನ್ನು ಹಿಡಿದುಕೊಂಡು ಪಥ ಸಂಚಲನ ಮಾಡುತ್ತಾ ಟೈಮ್ಸ್ ಕಛೇರಿಯ ಮುಂದೆ ನಡೆಯುವೆ, ಈ ದೃಶ್ಯವನ್ನು ಕಾಣುವ ಎಲ್ಲಾ ವರದಿಗಾರರು, ಛಾಯಾಚಿತ್ರಗ್ರಾಹಕರು ಬೇಕಾದ್ದನ್ನು ಮಾಡಲಿ. ಟೈಮ್ಸ್ ಮಾಡಿದಂಥ ಖಂಡನೆಯ ಪ್ರಕಾರ ನಾನು ಗೌರವ ಹಾಗೂ ಸಹಾನುಭೂತಿಯ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡಿರುವೆ ಮತ್ತು ನನ್ನನ್ನು ಸಂಶಯದಿಂದಲೇ ಕಾಣಬೇಕು. ಆದಾಗ್ಯೂ ಟೈಮ್ಸ್‌ನ ಸಂಪಾದಕರಿಗೆ ನಾನೊಂದು ಲೇಖನ ಬರೆದುಕೊಡಬೇಕಂತೆ ! ನಾನೋರ್ವ ಸಂಶಯಗ್ರಸ್ತ ವ್ಯಕ್ತಿಯಾಗಿದ್ದರೆ ಅವರಿಗೊಂದು ಲೇಖನ ಬರೆದುಕೊಡಬಹುದೆಂದು ಅವರು ನನ್ನನ್ನು ನಂಬುವುದಾದರೂ ಹೇಗೆ ?

ಓದುವುದು ಸಂಶಯವೇ. ಇಂತಹ ಒಂದು ಸಣ್ಣ ವಿಷಯದ ಬಗ್ಗೆಯೇ ಅಷ್ಟೊಂದು ಟೀಕೆಗಳು ಬಂದವೆಂದರೆ, ನಾನು ಸಮಾಜವಾದದ ಕುರಿತು ಆಸ್ಥೆಯಿಂದ ಬರೆಯಲು, ಓದಲು ಪ್ರಾರಂಭಿಸಿದರೆ ಈ ಪತ್ರಿಕೆಗಳು ಇನ್ನೇನು ಮಾಡಿಯಾವು? ಪ್ರಸಕ್ತವಾಗಿ ನಾನು ನನ್ನ ನಿಲುವಿನ ಕುರಿತಾದ ಹೇಳಿಕೆಯನ್ನು ನೀಡಲು ಹಾಗೂ ಕೆಲವು ತಪ್ಪು ವರದಿಗಳನ್ನು ತಿದ್ದಲು ಮತ್ತು ನನಗೆ ಅನ್ಯಾಯಯುತ ಎಂದು ಕಂಡ ಕೆಲವು ಟೀಕೆಗಳಿಗೆ ಉತ್ತರ ನೀಡಲು ಬಯಸುತ್ತೇನೆ.

ಮೊದಲಿಗೆ – ನಾನು ಸಮಾಜವಾದಿಯಾದದ್ದು ಹೇಗೆ? ಓದಿನಿಂದ. ನಾನು ಮೊದಲಿಗೆ ಓದಿದ ಪುಸ್ತಕ ವೆಲ್ಸ್‌ರವರ ಹಳೆ ವಿಶ್ವದ ಬದಲಿಗೆ ಹೊಸ ವಿಶ್ವ. ನಾನು ಅದನ್ನು ಶ್ರೀಮತಿ ಮ್ಯಾಸಿಯವರ ಶಿಫಾರಸ್ಸಿನಿಂದಾಗಿ ಓದಿದೆ. ಆಕೆಗೆ ಅದರ ಕಲ್ಪನಾ ಸ್ವರೂಪ ಆಕರ್ಷಕವಾಗಿ ಕಂಡಿತ್ತು ಹಾಗೂ ಅದರ ವಿದ್ಯುತ್‌ಸಂಚಲನ ಮಾಡುವ ನಮೂನೆ ನನ್ನನ್ನು ಉತ್ತೇಜಿಸಬಹುದು ಮತ್ತು ನನ್ನಲ್ಲಿ ಆಸಕ್ತಿ ಉಂಟುಮಾಡಬಹುದು ಎಂದವರು ಆಶಿಸಿದ್ದರು. ನನಗೆ ಆ ಪುಸ್ತಕ ನೀಡಿದಾಗ ಅವರು ಸಮಾಜವಾದಿಯಾಗಿರಲಿಲ್ಲ ಮತ್ತು ಈಗಲೂ ಅವರು ಸಮಾಜವಾದಿ ಅಲ್ಲ. ಬಹುಶಃ ಶ್ರೀ ಮ್ಯಾಸಿ ಮತ್ತು ನಾನು ಅವರೊಡನೆ ಚರ್ಚಿಸಿ ಅವರನ್ನು ಒಪ್ಪಿಸಿದರೆ ಅವರು ಸಮಾಜವಾದಿ ಆಗಬಹುದೇನೋ.

**ಅಭಿನಂದನೆಗಳು...**

ಕನ್ನಡ ಸಾಹಿತ್ಯ ಪರಿಷತ್ತಿನವರು ನೀಡುವ ೨೦೧೧ನೇ ಸಾಲಿನ 'ದತ್ತಿ ಪ್ರಶಸ್ತಿ'ಗಳಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಆರೋಗ್ಯ ಆಶಯ' ಕೃತಿಯ ಲೇಖಕರಾದ ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ ಅವರಿಗೆ 'ಬಿಸಿಲೇರಿ ಜಯಣ್ಣ ಮತ್ತು ಬಿಸಿಲೇರಿ ಬ್ರದರ್ಸ್ ದತ್ತಿ ಪ್ರಶಸ್ತಿ' ಹಾಗೂ 'ಅಪರಾಧಿಯ ಅಂತರಂಗ' ಕೃತಿಯ ಲೇಖಕರಾದ ಡಾ॥ ಮಹಾಬಲೇಶ್ವರ ರಾವ್ ಅವರಿಗೆ 'ಡಾ॥ ಎ. ಎಸ್. ಧರಣೇಂದ್ರಯ್ಯ ಮನೋವಿಜ್ಞಾನ ದತ್ತಿ ಪ್ರಶಸ್ತಿ' ಲಭಿಸಿದೆ. ಇವರಿಬ್ಬರಿಗೂ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ನನ್ನ ಓದು ನಿಧಾನ ಹಾಗೂ ಅದು ಒಂದು ಮಿತಿಯಲ್ಲಿದೆ. ನಾನು ಅಂಧರಿಗಾಗಿ ಬ್ರೇಲ್ ಲಿಪಿಯಲ್ಲಿ ಪ್ರಕಟವಾಗಿರುವ ದ್ವೈಮಾಸಿಕ ಜರ್ಮನ್ ಸಮಾಜವಾದಿ ಪತ್ರಿಕೆಗಳನ್ನು ಓದುತ್ತೇನೆ (ನಮ್ಮ ಜರ್ಮನ್ ಕಾಮ್ರೇಡರು ಎಷ್ಟೋ ವಿಷಯಗಳಲ್ಲಿ ನಮಗಿಂತ ಬಹಳ ಮುಂದೆ ಇದ್ದಾರೆ). ನನ್ನ ಬಳಿ ಎರ್ಫುರ್ಟ್ ಪ್ರೋಗ್ರಾಮ್ ಬಗ್ಗೆಯ ಕೌಟ್ಸ್ಕಿಯ ಚರ್ಚೆ ಜರ್ಮನ್ ಬ್ರೇಲ್‌ನಲ್ಲಿ ಇದೆ. ಉಳಿದ ಸಮಾಜವಾದಿ ಲೇಖನಗಳನ್ನು ನಾನು ಓದಿರುವುದು ನನ್ನ ಗೆಳತಿಯೊಬ್ಬರ ಮೂಲಕ. ನಾನು ಓದಬೇಕೆನಿಸಿರುವುದನ್ನು, ವಾರಕ್ಕೆ ಮೂರು ಸಲ ಬರುವ ಅವರು ನನ್ನ ಕೈಯೊಳಗೆ ಉಚ್ಚರಿಸುತ್ತಾರೆ. ಅವರ ಚಲನಶೀಲ ಬೆರಳುಗಳ ಮೂಲಕ ನನ್ನ ಕಾತುರದ ಬೆರಳುಗಳಿಗೆ ರವಾನಿಸಲು ನಾನು ಬಹಳೊಮ್ಮೆ ಅವರನ್ನು ಕೇಳಿಕೊಂಡ ನಿಯತಕಾಲಿಕವೆಂದರೆ 'ದ ನ್ಯಾಷನಲ್ ಸೋಷಲಿಸ್ಟ್'. ಆಕೆ ನನಗೆ ಲೇಖನದ ತಲೆಬರಹ ತಿಳಿಸುತ್ತಾರೆ. ನಾನವರಿಗೆ ಯಾವುದನ್ನು ಓದಬೇಕು, ಯಾವುದನ್ನು ಬಿಡಬೇಕು ಎಂಬುದನ್ನು ಹೇಳುತ್ತೇನೆ. ಜೊತೆಗೆ ನಾನವರಿಗೆ ಅಂತರರಾಷ್ಟ್ರೀಯ ಸಮಾಜವಾದಿ ವಿಮರ್ಶಾಲೇಖನಗಳಿಂದ ಸಹ ಓದಲು ಕೇಳಿಕೊಂಡಿದ್ದೇನೆ. ಅವುಗಳ ತಲೆಬರಹಗಳು ಆಸಕ್ತಿದಾಯಕವಾಗಿವೆ. ಕೈಯಲ್ಲಿ ಉಚ್ಚಾರಣೆ ಮಾಡುವುದಕ್ಕೆ ಸಮಯ ಹಿಡಿಯುತ್ತದೆ. ಇಕಾನಾಮಿಕ್ಸ್ ಮೇಲಿನ ೫೦೦೦೦ ಪದಗಳ ಒಂದು ಪುಸ್ತಕವನ್ನು ಬೆರಳುಗಳ ಮೂಲಕ ಅಧ್ಯಯನ ಮಾಡುವುದು ಸುಲಭದ ಕೆಲಸವೂ ಅಲ್ಲ, ವೇಗದ ಕೆಲಸವೂ ಅಲ್ಲ. ಆದರೆ ಅದು ಖುಷಿಕೊಡುವಂಥದು ಹಾಗೂ ಎಲ್ಲಾ ಕ್ಲ್ಯಾಸಿಕ್ ಸಮಾಜವಾದಿ ಲೇಖಕರ ಪರಿಚಯ ಮಾಡಿಕೊಳ್ಳುವ ತನಕ ನಾನು ಈ ಕೆಲಸವನ್ನು ಮತ್ತೆ ಮತ್ತೆ ಮಾಡುವಲ್ಲಿ ಸಂತೋಷಪಡುತ್ತೇನೆ.

ಈ ಹಿನ್ನೆಲೆಯಲ್ಲಿ ನಾನು 'ದ ಕಾಮನ್ ಕಾಸ್'ನಲ್ಲಿ ಪ್ರಕಟನೆಗೊಂಡು ಬಳಿಕ 'ದ ಲೈವ್ ಇಷ್ಯೂ'ನಲ್ಲಿ ಪುನರ್ ಪ್ರಕಟವಾದ ನನ್ನ ಕುರಿತಾದ ಒಂದು ಲೇಖನದ ಬಗ್ಗೆ ನನ್ನ ಅಭಿಪ್ರಾಯವನ್ನು ಹೇಳಬಯಸುತ್ತೇನೆ. ಇವೆರಡೂ ಸಮಾಜವಾದ ವಿರೋಧಿ ಪ್ರಕಟಣೆಗಳು. ಆ ಲೇಖನದಿಂದ ಉದ್ಧರಿಸಲಾದ ತುಣುಕೊಂದು ಇಲ್ಲಿದೆ :

"೨೫ ವರ್ಷಗಳವರೆಗೆ ಮಿಸ್ ಕೆಲ್ಲರ್‌ರವರ ಶಿಕ್ಷಕಿ ಹಾಗೂ ಸದಾಕಾಲದ ಸಹಚರಿಯಾಗಿರುವವರು ಶ್ರೀಮತಿ ಜೇನ್ ಮ್ಯಾಸಿ, ಈ ಹಿಂದೆ ರೆನ್‌ಥಾಮ್ ಮಾಸ್‌ಗೆ ಸೇರಿದವರು. ಶ್ರೀಯುತ ಹಾಗೂ ಶ್ರೀಮತಿ ಮ್ಯಾಸಿ ಇಬ್ಬರೂ ಉತ್ಸಾಹಿ ಮಾರ್ಕ್ಸ್‌ವಾದಿ ಪ್ರಚಾರಕರು. ಹಾಗಾಗಿ ಜೀವನದ ಅತ್ಯಂತ ಆಪ್ತ ಜ್ಞಾನಕ್ಕಾಗಿ ತನ್ನ ಈ ಜೀವದ ಗೆಳತಿಯ ಮೇಲೆ ಅವಲಂಬಿತರಾಗಿರುವ ಮಿಸ್ ಕೆಲ್ಲರ್ ಇಂತಹ ಅಭಿಪ್ರಾಯಗಳನ್ನು ಗಳಿಸಿಕೊಂಡಿರುವುದು ಆಶ್ಚರ್ಯ ತರುವಂಥದೇನಲ್ಲ."

ಶ್ರೀಯುತ ಮ್ಯಾಸಿಯವರು ಉತ್ಸಾಹಿ ಮಾರ್ಕ್ಸ್‌ವಾದಿ ಪ್ರಚಾರಕರಿರಬಹುದು, ಆದರೆ ನನ್ನ ಬೆರಳುಗಳ ಮೂಲಕ ತನ್ನ ಮಾರ್ಕ್ಸ್‌ವಾದವನ್ನು ಪ್ರಚಾರ ಮಾಡಲು ಅವರು ಅಂತಹ ಉತ್ಸಾಹವನ್ನೇನೂ ತೋರಿಲ್ಲ ಎಂದು ಹೇಳಲು ನನಗೆ ಖೇದವೆನಿಸುತ್ತದೆ. ಶ್ರೀಮತಿ ಮ್ಯಾಸಿ ಮಾರ್ಕ್ಸ್‌ವಾದಿಯೂ ಅಲ್ಲ, ಸಮಾಜವಾದಿಯೂ ಅಲ್ಲ. ಹಾಗಾಗಿ 'ಕಾಮನ್ ಕಾಸ್' ಅವರ ಕುರಿತು ಹೇಳಿರುವುದು ಸತ್ಯವಲ್ಲ. ಸಂಪಾದಕರು ಇದನ್ನು ಹುಟ್ಟು ಹಾಕಿರಬೇಕು, ತಾವೇ ಸೃಷ್ಟಿಸಿರಬೇಕು. ಅವರ ಮನಸ್ಸು ಯೋಚಿಸುವುದು ಹೀಗೆಯೇ ಆಗಿದ್ದಲ್ಲಿ ಅವರು ಸಮಾಜವಾದದ ವಿರೋಧಿಯಾಗಿರುವಲ್ಲಿ ಅಚ್ಚರಿಪಡುವಂತಹುದೇನೂ ಇಲ್ಲ. ಸಮಾಜವಾದಿಯಾಗಲು ಬೇಕಿರುವ ವಾಸ್ತವತೆಯ ಪ್ರಜ್ಞೆ ಅವರಲ್ಲಿ ಸಾಕಷ್ಟಿಲ್ಲ ಅಥವಾ ಬೌದ್ಧಿಕವಾಗಿ ಮೌಲಿಕವಾಗಿರುವುದೂ ಅವರಲ್ಲಿಲ್ಲ.

ಅದೇ ಲೇಖನದ ಇನ್ನೊಂದು ಉಲ್ಲೇಖ ನೋಡಿ. ಅದರ ತಲೆಬರಹ ಹೀಗಿದೆ : "ಶೇನೆಕ್ಟೇಡಿಯ ಕೆಂಪು ಜನರು (ಸಮಾಜವಾದಿಗಳು – ಲೇ) ಪ್ರಚಾರ ಮಾಡುತ್ತಿದ್ದಾರೆ; ಅವರು ಪ್ರಚಾರಕ್ಕಾಗಿ ಅಂಧ ಹುಡುಗಿ ಹೆಲೆನ್ ಕೆಲ್ಲರ್‌ಳನ್ನು ಬಳಸುತ್ತಿದ್ದಾರೆ." ನಂತರ ಲೇಖನ ಹೀಗೆ ಶುರುವಾಗುತ್ತದೆ :

"ಶೇನೆಕ್ಟೇಡಿಯಾದ ಸಮಾಜವಾದಿಗಳು ಪ್ರಸಕ್ತವಾಗಿ ನಡೆಸುತ್ತಿರುವ ಪಾಪದ ಹೆಲೆನ್ ಕೆಲ್ಲರ್‌ರ ಶೋಷಣೆಗಿಂತ ಹೆಚ್ಚು ಶೋಚನೀಯವಾದುದನ್ನು ಕಲ್ಪನೆ ಮಾಡುವುದೂ ಅಸಾಧ್ಯ. ವಾರಗಟ್ಟಳೆ ಪಕ್ಷದ ಮುಖವಾಣಿಯ ಏಜೆಂಟ್‌ಗಳು ಅವರು ಸಮಾಜವಾದಿ ಹಾಗೂ ಅವರು ಶೇನೆಕ್ಟೇಡಿಯಾದ ಸಾರ್ವಜನಿಕ ಕಲ್ಯಾಣದ ಹೊಸ ಸಮಿತಿಯ ಸದಸ್ಯರಾಗುವವರಿದ್ದಾರೆ ಎಂಬುದನ್ನು ಘೋಷಿಸುತ್ತಲೇ ಬಂದಿದ್ದಾರೆ."

ಪಾಪದ ಹೆಲೆನ್ ಕೆಲ್ಲರ್‌ರ ಶೋಷಣೆ ಎಂಬುದರ ಬಗ್ಗೆ ವ್ಯಂಗ್ಯವಾಗಿ ಟೀಕಿಸಲು ಅವಕಾಶವಂತೂ ಇದೆ. ಆದರೆ ಇಷ್ಟನ್ನು ಮಾತ್ರ ಹೇಳಿ ಸುಮ್ಮನಿದ್ದುಬಿಡುತ್ತೇನೆ. ಅದೆಂದರೆ 'ದ ಕಾಮನ್ ಕಾಸ್'ನಂತಹ ಪತ್ರಿಕೆಗಳ ಆಷಾಢಭೂತಿ ಸಹಾನುಭೂತಿ ನನಗೆ ಇಷ್ಟವಿಲ್ಲದ್ದು. ಆದರೆ ಶೋಷಣೆ ಎಂಬ ಪದದ ಅರ್ಥವನ್ನು ಅದು ತಿಳಿದಿದೆ ಎಂಬುದು ಸಂತೋಷದ ವಿಷಯ.

ನಾವು ವಾಸ್ತವಾಂಶಕ್ಕೆ ಬರೋಣ. ಮೇಯರ್ ಲನ್‌ರವರು ನಾನು ಶೇನೆಕ್ಟೇಡಿಗೆ ಹೋಗಬಹುದು ಎಂದು ತಿಳಿದಾಗ ಸಾರ್ವಜನಿಕ ಕಲ್ಯಾಣ ಸಮಿತಿಯಲ್ಲಿ ನನಗೊಂದು ಸ್ಥಾನವನ್ನು ಕಾಯ್ದಿರಿಸಲು ಸಮಿತಿಗೆ ಸಲಹೆ ನೀಡಿದರು. ಮೇಯರ್ ಲನ್‌ರವರ ಪತ್ರಿಕೆಯಾದ 'ದ ಸಿಟಿಜನ್'ನಲ್ಲಿ ಈ ಕುರಿತು ಯಾವ ಪ್ರಕಟಣೆಯೂ ಬರಲಿಲ್ಲ. ವಾಸ್ತವದಲ್ಲಿ ನಾನು ಶೇನೆಕ್ಟೇಡಿಗೆ ಹೋಗುವ ತನಕ ಈ ಕುರಿತು ನನಗೆ ಏನನ್ನೂ ಹೇಳಬಾರದು ಎಂಬುದು ಸಮಿತಿಯ ಆಶಯವಾಗಿತ್ತು. ಆದರೆ ಬಂಡವಾಳಶಾಹಿ ಪತ್ರಿಕೆಯ ವರದಿಗಾರರಿಗೆ ಈ ಕುರಿತು ಸುಳಿವು ದೊರಕಿತು ಹಾಗೂ ಒಂದು ದಿನ ಮೇಯರ್ ಲನ್‌ರವರು ಶೇನೆಕ್ಟೇಡಿಯಲ್ಲಿ ಇಲ್ಲದಂದು ಆಲ್‌ಬೆನಿಯ ನಿಕರ್‌ಬೋಕರ್ ಪತ್ರಿಕೆ ಇದನ್ನು ಘೋಷಿಸಿತು. ಇದನ್ನು ದೇಶದಾದ್ಯಂತ ತಂತಿ ಮೂಲಕ ಪ್ರಸಾರ ಮಾಡಲಾಯಿತು, ಮತ್ತೆ ಅಂದಿನಿಂದ ನೈಜ ಪತ್ರಿಕಾ ಶೋಷಣೆ ಪ್ರಾರಂಭವಾಯಿತು. ಸಮಾಜವಾದಿ ಪತ್ರಿಕೆಗಳಿಂದಲೇ? ಅಲ್ಲ. ಬಂಡವಾಳಶಾಹಿ ಪತ್ರಿಕೆಗಳಿಂದ. ಸಮಾಜವಾದಿ ಪತ್ರಿಕೆಗಳು ಈ ಸುದ್ದಿಯನ್ನು ಪ್ರಕಟಿಸಿದವು ಹಾಗೂ ಕೆಲವು ಪತ್ರಿಕೆಗಳು ಇದನ್ನು ಸ್ವಾಗತಿಸಿ ಸಂಪಾದಕೀಯ ಬರೆದವು. ಆದರೆ ಮೇಯರ್ ಲನ್ ಅವರ ಪತ್ರಿಕೆ 'ದ ಸಿಟಿಜನ್' ಮೌನವಾಗಿ ಇದ್ದುಬಿಟ್ಟಿತು, ಹಾಗೂ ವರದಿಗಾರರು ಸಂದರ್ಶನಕ್ಕಾಗಿ ಫೋನ್ ಮಾಡಿದರೂ, ತಂತಿ ಕಳುಹಿಸಿದರೂ ಆ ಎಲ್ಲಾ ವಾರಗಳಲ್ಲಿ ನನ್ನ ಹೆಸರನ್ನು ಎಲ್ಲೂ ಬಳಸಲಿಲ್ಲ. ಶೋಷಣೆ ನಡೆಸಿದ್ದು ಬಂಡವಾಳಶಾಹಿ ಪತ್ರಿಕೆಗಳು. ಏಕೆ? ಸಾಧಾರಣ ಪತ್ರಿಕೆಗಳಿಗೆ ಸಮಾಜವಾದದ ಕುರಿತು ಕಾಳಜಿ ಇದೆ ಎಂದೇ? ಇಲ್ಲ, ಖಂಡಿತಾ ಇಲ್ಲ. ಅವುಗಳಿಗೆ ಅದರ ಬಗ್ಗೆ ದ್ವೇಷವಿದೆ. ಆದಾಗ್ಯೂ ದುರದೃಷ್ಟವಶಾತ್ ನಾನು ಪತ್ರಿಕಾ ಗಾಸಿಪ್‌ನ ವಸ್ತುವಾಗಿರುವುದೇ ಆ ಕಾರಣ. ನಾನು ಶೇನೆಕ್ಟೇಡಿಯಲ್ಲಿ ಇದ್ದೆ ಎಂಬುದನ್ನು ನಿರಾಕರಿಸುತ್ತಾ ನಾವು ಎಷ್ಟು ಸುಸ್ತಾದೆವೆಂದರೆ ಮೊದಲು ಈ "ಸುದ್ದಿ"ಯನ್ನು ಪ್ರಕಟಿಸಿದ ವರದಿಗಾರರನ್ನು ನಾನು ಅಸಹ್ಯಿಸಿಕೊಳ್ಳಲಾರಂಭಿಸಿದೆ.

ಬಂಡವಾಳಶಾಹಿ ಪತ್ರಿಕೆಗಳು ನಾನು ಸಮಾಜವಾದಿ ಎಂಬ ಘೋಷಣೆ ಮಾಡಿದ ನಂತರ ಸಮಾಜವಾದಿ ಪತ್ರಿಕೆಗಳು ನನ್ನನ್ನು ಬೆಂಬಲಿಸಿದ್ದಂತೂ ನಿಜ. ಆದರೆ ನನ್ನನ್ನು ನೋಡಬಂದ ಎಲ್ಲಾ ವರದಿಗಾರರು ಸಾಧಾರಣ ವ್ಯಾಪಾರಿ ಪತ್ರಿಕೆಯವರು. ಯಾವುದೇ ಸಮಾಜವಾದಿ ಪತ್ರಿಕೆಯೂ – 'ದ ಕಾಲ್' ಅಥವಾ 'ದ ನ್ಯಾಷನಲ್ ಸೋಷಲಿಸ್ಟ್' ಪತ್ರಿಕೆಯವರು – ನನ್ನನ್ನೆಂದೂ ಲೇಖನಕ್ಕಾಗಿ ಕೇಳಲಿಲ್ಲ. 'ದ ಸಿಟಿಜ಼ನ್'ನ ಸಂಪಾದಕರು ತಮಗೊಂದು ಲೇಖನ ಬೇಕು ಎಂದು ಶ್ರೀ ಮ್ಯಾಸಿಯವರನ್ನು ಸೂಕ್ಷ್ಮವಾಗಿ ಕೇಳಿದರೂ ಅದನ್ನು ರಾಜಾರೋಷವಾಗಿ ಕೇಳದಿರುವಷ್ಟು ಸೂಕ್ಷ್ಮತೆ ಉಳ್ಳವರೂ, ಕಾಳಜಿ ಉಳ್ಳವರೂ ಆಗಿದ್ದರು.

'ದ ನ್ಯೂಯಾರ್ಕ್ ಟೈಮ್ಸ್' ಒಂದು ಲೇಖನಕ್ಕಾಗಿ ನನ್ನನ್ನು ಕೋರಿತ್ತು. ಸಾರ್ವಜನಿಕರನ್ನು ತಲುಪುವಲ್ಲಿ ತಮ್ಮ ಪತ್ರಿಕೆ ಒಂದು ಅಮೂಲ್ಯ ಮಾಧ್ಯಮ ಎಂದೂ, ನನ್ನಿಂದ ತಮಗೊಂದು ಲೇಖನ ಬೇಕೆಂದೂ ಟೈಮ್ಸ್‌ನ ಸಂಪಾದಕರು ನನಗೆ ಭರವಸೆ ನೀಡಿ ಬರೆದರು. ನನ್ನ ಯೋಜನೆಗಳ ಕುರಿತು ಅವರಿಗೆ ತಿಳಿಸಬೇಕೆಂದೂ, ಶೇನೆಕ್ಟೇಡಿಯ ಸಾರ್ವಜನಿಕ ಕಲ್ಯಾಣ ಸಮಿತಿಯ ಸದಸ್ಯಳಾಗಿ ನನ್ನ ಕರ್ತವ್ಯಗಳ ಕುರಿತು ನನಗಿರುವ ವಿಚಾರಗಳ ಸ್ಥೂಲನೋಟವನ್ನು ನೀಡಬೇಕೆಂದೂ ಅವರು ತಂತಿ ಕಳಿಸಿದರು. ಸದ್ಯ, ನಾನವರ ಕೋರಿಕೆಯನ್ನು ಮನ್ನಿಸಲಿಲ್ಲ. ಏಕೆಂದರೆ ಕೆಲವೇ ದಿನಗಳ ಬಳಿಕ ಟೈಮ್ಸ್ ತನ್ನ ಬಲವಾದಿ ಸಹಾನುಭೂತಿಗಳ ಎಲ್ಲೆ ಮೀರಿ ನನ್ನನ್ನು ಒಬ್ಬ ಸಾಮಾಜಿಕ ಬಹಿಷ್ಕೃತೆಯನ್ನಾಗಿಸಿತು. ಸೆಪ್ಟೆಂಬರ್ ೨೧ರಂದು ಟೈಮ್ಸ್‌ನಲ್ಲಿ "ತಿರಸ್ಕಾರಾರ್ಹ ಕೆಂಬಾವುಟ" ಶಿರೋನಾಮೆಯ ಸಂಪಾದಕೀಯ ಒಂದು ಪ್ರಕಟವಾಯಿತು. ಅದರಲ್ಲಿನ ಎರಡು ಪ್ಯಾರಾಗಳು ಹೀಗಿವೆ.

"ಬಾವುಟ ಸ್ವತಂತ್ರವಾಗಿದೆ. ಹಾಗೆಂದ ಮಾತ್ರಕ್ಕೆ ಅದು ಕಡಿಮೆ ತಿರಸ್ಕಾರಕ್ಕೆ ಯೋಗ್ಯವಲ್ಲ. ವಿಶ್ವಾದ್ಯಂತ ಇದು ಕಾನೂನುರಾಹಿತ್ಯ ಹಾಗೂ ಅರಾಜಕತೆಯ ಚಿಹ್ನೆಯಾಗಿದೆ. ಹಾಗಾಗಿ ಎಲ್ಲಾ ಸುಚಿಂತಕರು ಅದನ್ನು ತಿರಸ್ಕಾರದಿಂದ ಕಾಣುತ್ತಾರೆ."

"ಕೆಂಬಾವುಟವನ್ನು ಎತ್ತಿ ಹಿಡಿದವನು, ಕೆಂಬಾವುಟ ನ್ಯಾಯಬದ್ಧ ಎಂದು ಪರಿಗಣಿಸುವ ಯಾವುದಾದರೂ ಕೃತ್ಯವನ್ನು ಎಸಗುವವರೆಗೆ ಪೊಲೀಸರ ದೌರ್ಜನ್ಯಕ್ಕೆ ಒಳಗಾಗದೆ ಇರಬಹುದು. ಆದಾಗ್ಯೂ, ಅವನನ್ನು ಸದಾ ಕಾಲ ಸಂಶಯದಿಂದ ನೋಡುವುದೇ ಯೋಗ್ಯ. ಕಾನೂನುರಾಹಿತ್ಯದ ಚಿಹ್ನೆಯನ್ನು ಎತ್ತಿ ಹಿಡಿಯುವ ಕಾರಣ ಅವನು ಗೌರವ ಹಾಗೂ ಸಹಾನುಭೂತಿಯ ಎಲ್ಲಾ ಹಕ್ಕುಗಳನ್ನೂ ಕಳೆದುಕೊಳ್ಳುತ್ತಾನೆ."

ನಾನು ಯಾವುದೇ ಬಣ್ಣದ ಬಟ್ಟೆಯ ಆರಾಧಕಳಲ್ಲ. ಆದರೆ ನಾನು ಕೆಂಬಾವುಟವನ್ನು ಮತ್ತು ನನಗೆ ಹಾಗೂ ಇತರ ಸಮಾಜವಾದಿಗಳಿಗೆ ಅದು ಯಾವುದರ ಸಂಕೇತವೋ ಅದನ್ನು ಪ್ರೀತಿಸುತ್ತೇನೆ. ನನ್ನ ಅಧ್ಯಯನ ಕೋಣೆಯಲ್ಲಿ ಒಂದು ಕೆಂಬಾವುಟ ಹಾರಾಡುತ್ತಿದೆ ಮತ್ತು ನನಗೆ ಸಾಧ್ಯವಾದರೆ ನಾನು ಅದನ್ನು ಹಿಡಿದುಕೊಂಡು ಪಥ ಸಂಚಲನ ಮಾಡುತ್ತಾ ಟೈಮ್ಸ್ ಕಛೇರಿಯ ಮುಂದೆ ನಡೆಯುವೆ, ಈ ದೃಶ್ಯವನ್ನು ಕಾಣುವ ಎಲ್ಲಾ ವರದಿಗಾರರು, ಛಾಯಾಚಿತ್ರಗ್ರಾಹಕರು ಬೇಕಾದ್ದನ್ನು ಮಾಡಲಿ. ಟೈಮ್ಸ್ ಮಾಡಿದಂಥ ಖಂಡನೆಯ ಪ್ರಕಾರ ನಾನು ಗೌರವ ಹಾಗೂ ಸಹಾನುಭೂತಿಯ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡಿರುವೆ ಮತ್ತು ನನ್ನನ್ನು ಸಂಶಯದಿಂದಲೇ ಕಾಣಬೇಕು. ಆದಾಗ್ಯೂ ಟೈಮ್ಸ್‌ನ ಸಂಪಾದಕರಿಗೆ ನಾನೊಂದು ಲೇಖನ ಬರೆದುಕೊಡಬೇಕಂತೆ! ನಾನೋರ್ವ ಸಂಶಯಗ್ರಸ್ತ ವ್ಯಕ್ತಿಯಾಗಿದ್ದರೆ ಅವರಿಗೊಂದು ಲೇಖನ ಬರೆದುಕೊಡಬಹುದೆಂದು ಅವರು ನನ್ನನ್ನು ನಂಬುವುದಾದರೂ ಹೇಗೆ? ಇಂತಹ ಶ್ರೀಮಂತರ ಸ್ಥಾಪಿತ ಹಿತಾಸಕ್ತಿಗಳ ವಿರುದ್ಧವಾಗಿರುವ ಚಳುವಳಿಯನ್ನು ಖಂಡಿಸಲೆತ್ನಿಸುವ ಓರ್ವ ಬಂಡವಾಳಶಾಹಿ ಸಂಪಾದಕರ ಕೆಟ್ಟ ನೈತಿಕತೆ, ಕುತರ್ಕ, ಕೆಟ್ಟ ನಡವಳಿಕೆಯನ್ನು ನನ್ನಷ್ಟೇ ನೀವೂ ಸಹ ಅನುಭವಿಸಿದ್ದೀರಿ ಎಂದು ನನ್ನ ಅನಿಸಿಕೆ. ಸಹಾನುಭೂತಿಗೆ ನಾವು ಅರ್ಹರಲ್ಲ. ಆದರೆ ಅವರ ಪತ್ರಿಕೆಯು ಹಣ ಗಳಿಸಲು ನೆರವಾಗುವಂಥ ಲೇಖನಗಳನ್ನು ನಮ್ಮಲ್ಲಿ ಕೆಲವರು ಬರೆಯಬಹುದು. ಓರ್ವ ಪ್ರಸಿದ್ಧ ಕೊಲೆಗಾರನ ತಪ್ಪೊಪ್ಪಿಗೆಯಲ್ಲಿ ಆತ (ಸಂಪಾದಕ – ಲೇ) ಕಾಣುವಂಥದ್ದೇ ಮೌಲ್ಯ ಬಹುಶಃ ನಮ್ಮ ಅಭಿಪ್ರಾಯಗಳಲ್ಲಿ ಅವರಿಗೆ ಕಾಣಸಿಗಬಹುದು. ನಾವು ಒಳ್ಳೆಯವರಲ್ಲ, ಆದರೆ ನಾವು ಆಸಕ್ತಿ ಜನಕರು.

ನನಗೆ ವರದಿಗಾರರೆಂದರೆ ಇಷ್ಟ. ಅವರಲ್ಲಿ ಬಹಳ ಮಂದಿ ನನಗೆ ಗೊತ್ತು. ೨–೩ ಸಂಪಾದಕರು ನನ್ನ ಆತ್ಮೀಯ ಗೆಳೆಯರು ಸಹ. ಅಲ್ಲದೆ, ನಾವು ಅಂಧರಿಗಾಗಿ ಮಾಡುತ್ತಿರುವ ಕೆಲಸದಲ್ಲಿ ಪತ್ರಿಕೆಗಳೂ ಬಹಳಷ್ಟು ನೆರವಾಗಿಯೂ ಇವೆ. ಅಂಧರಿಗಾಗಿ ಮಾಡುವ ಕೆಲಸದಲ್ಲಿ ಅಥವಾ ಇತರ ಗಹನವಲ್ಲದ ಔದಾರ್ಯದ ಕೆಲಸಗಳಲ್ಲಿ ನೆರವು ನೀಡಲು ಅವರಿಗೆ ಖರ್ಚೇನೂ ಇಲ್ಲ. ಆದರೆ ಸಮಾಜವಾದ? ಆಹ್! ಅದು ಬೇರೆಯದೇ ವಿಷಯ. ಇದು ಎಲ್ಲಾ ಬಡತನ ಹಾಗೂ ಎಲ್ಲಾ ಔದಾರ್ಯಗಳ ಬುಡಮಟ್ಟಕ್ಕೇ ಹೋಗುತ್ತದೆ. ಪತ್ರಿಕೆಗಳ ಹಿಂದಿನ ಹಣಬಲವು ಸಮಾಜವಾದದ ವಿರುದ್ಧವಿದೆ. ಮತ್ತು ತಮ್ಮನ್ನು ಸಾಕುವವರಿಗೆ ವಿಧೇಯರಾಗಿರುವ ಸಂಪಾದಕರು ಸಮಾಜವಾದಿಗಳನ್ನು ಹಳಿಯಲು ಹಾಗೂ ಸಮಾಜವಾದಿಗಳ ಪ್ರಭಾವವನ್ನು ಕಡೆಗಾಣಿಸಲು ಯಾವ ಮಟ್ಟಕ್ಕೆ ಬೇಕಾದರೂ ಹೋಗುತ್ತಾರೆ.

'ಅಪೀಲ್ ಟು ರೀಸನ್'ನಲ್ಲಿ ಕಾಮ್ರೇಡ್ ಫ್ರೆಡ್ ವಾರೆನ್‌ರವರಿಗೆ ನಾನು ಬರೆದ ಪತ್ರ ಪ್ರಕಟವಾದಾಗ, 'ಬೋಸ್ಟನ್ ಟ್ರಾನ್ಸ್‌ಕ್ರಿಪ್ಟ್'ನ ವಿಶೇಷ ಭಾಗದಲ್ಲಿ ಬರೆಯುವ ನನ್ನ ಗೆಳೆಯರೊಬ್ಬರು, ಈ ಪತ್ರದ ಕುರಿತು ಲೇಖನವೊಂದನ್ನು ಬರೆದಾಗ ಮುಖ್ಯ ಸಂಪಾದಕರು ಅದಕ್ಕೆ ಕತ್ತರಿ ಹಾಕಿದರು.

'ಬ್ರೂಕ್‌ಲಿನ್ ಈಗಲ್' ನನ್ನ ಹಾಗೂ ಸಮಾಜವಾದದ ಕುರಿತು ಹೀಗೆ ಹೇಳುತ್ತದೆ: "ಹೆಲೆನ್ ಕೆಲ್ಲರ್‌ರ ತಪ್ಪುಗಳು ಅವರ ಕುಂಠಿತ ಬೆಳವಣಿಗೆಯಿಂದ ಉದ್ಭವಿಸಿವೆ." ಕೆಲ ವರ್ಷಗಳ ಹಿಂದೆ 'ಬ್ರೂಕ್‌ಲಿನ್ ಈಗಲ್'ನ ಸಂಪಾದಕ, ಶ್ರೀ ಮ್ಯಾಕ್ ಕೆಲ್‌ವೇ ಎಂದು ತಮ್ಮನ್ನು ಪರಿಚಯಿಸಿಕೊಂಡ ಸತ್ಪುರುಷರೊಬ್ಬರನ್ನು ನಾನು ಭೇಟಿಯಾಗಿದ್ದೆ. ಆಗವರು ನನ್ನನ್ನು ಎಷ್ಟೊಂದು ಧಾರಾಳತನದಿಂದ ಹೊಗಳಿದರೆಂದರೆ ಅದನ್ನು ನೆನೆಸಿಕೊಳ್ಳಲು ನನಗೆ ನಾಚಿಕೆ ಎನಿಸುತ್ತದೆ. ಆದರೆ ಈಗ ನಾನು ಸಮಾಜವಾದದ ಪರ ನಿಂತಾಗ ಅವರು ನಾನು ಅಂಧೆ ಹಾಗೂ ಕಿವುಡಿ, ಹಾಗಾಗಿ ವಿಶೇಷವಾಗಿ ನಾನು ತಪ್ಪು ಮಾಡುವ ಸಾಧ್ಯತೆಯುಳ್ಳವಳು ಎಂದು ನನಗೂ, ಸಾರ್ವಜನಿಕರಿಗೂ ನೆನಪಿಸುತ್ತಿದ್ದಾರೆ. ನಾನವರನ್ನು ಭೇಟಿ ಮಾಡಿದ ನಂತರದ ವರ್ಷಗಳಲ್ಲಿ ನನ್ನ ಬುದ್ಧಿಮತ್ತೆ ಕುಸಿದಿರಬೇಕು. ಖಂಡಿತ ಈಗ ನಾಚಿಕೆಪಡುವ ಸರದಿ ಅವರದು. ಬಹುಶಃ ಅಂಧತ್ವ ಹಾಗೂ ಕಿವುಡುತನ ಒಬ್ಬರನ್ನು ಸಮಾಜವಾದಕ್ಕೆ ಏರಿಸಬಹುದೇನೋ. ಬಹುಶಃ ಮಾರ್ಕ್ಸ್ ಪೂರ್ತಿ ಕಿವುಡರಾಗಿದ್ದರು ಹಾಗೂ ವಿಲಿಯಂ ಮೋರಿಸ್ ಕುರುಡರಾಗಿದ್ದರು. ಮೋರಿಸ್‌ರವರು ಸ್ಪರ್ಶ ಮಾತ್ರದಿಂದ ತಮ್ಮ ಚಿತ್ರಗಳನ್ನು ಚಿತ್ರಿಸಿದರು ಮತ್ತು ಘ್ರಾಣಶಕ್ತಿಯನ್ನು ಬಳಸಿ ವಾಲ್ ಪೇಪರ್ ವಿನ್ಯಾಸ ಮಾಡಿದರು. ಎಂಥ ಪೆದ್ದುತನ ಬ್ರೂಕ್‌ಲಿನ್ ಈಗಲ್! (ಗಿಡುಗ – ಲೇ), ಎಂಥ ಸೌಜನ್ಯರಹಿತ ಪಕ್ಷಿ ಅದು! ಸಾಮಾಜಿಕವಾಗಿ ಕುರುಡು ಮತ್ತು ಕಿವುಡಾಗಿರುವ ಅದು ಅಸಹನೀಯವಾದ ವ್ಯವಸ್ಥೆಯೊಂದನ್ನು, ನಾವು ತಡೆಯಲೆತ್ನಿಸುತ್ತಿರುವ ದೈಹಿಕ ಕುರುಡುತನ ಹಾಗೂ ಕಿವುಡುತನಕ್ಕೆ ಬಹುತೇಕವಾಗಿ ಕಾರಣವಾಗಿರುವ ವ್ಯವಸ್ಥೆಯೊಂದನ್ನು ಸಮರ್ಥಿಸುತ್ತದೆ. 'ದ ಈಗಲ್' ದುಸ್ಥಿತಿಯನ್ನು ತಡೆಯಲು ನಮಗೆ ಸಹಾಯ ನೀಡಲು ಸಿದ್ಧವಿದೆ. ಆದರೆ ಅದನ್ನು ಬೆಂಬಲಿಸುವ, ಅದರ ಕಿವಿಗಳನ್ನು ಮುಚ್ಚುವ, ಕಣ್ಣುಗಳನ್ನು ಮಂಜಾಗಿಸುವ ಕೈಗಾರಿಕಾ ದಬ್ಬಾಳಿಕೆಯನ್ನು ನಾವು ಆಕ್ರಮಣ ಮಾಡದ ತನಕ, ಅಲ್ಲಿಯತನಕ ಮಾತ್ರ. ಈಗಲ್ ಮತ್ತು ನಾನು ಯುದ್ಧಕ್ಕಿಳಿದಿದ್ದೇವೆ. ಅದು ಪ್ರತಿನಿಧಿಸುವ, ಸಮಜಾಯಿಷಿ ನೀಡುವ, ಎತ್ತಿ ಹಿಡಿಯುವ ವ್ಯವಸ್ಥೆಯನ್ನು ನಾನು ದ್ವೇಷಿಸುತ್ತೇನೆ. ಈಗಲ್ ನನ್ನೊಂದಿಗೆ ಹೋರಾಡುವುದಿದ್ದರೆ ನ್ಯಾಯವಾಗಿ ಹೋರಾಡಲಿ. ಅದು ನನ್ನ ಚಿಂತನೆಗಳ ಮೇಲೆ ದಾಳಿ ನಡೆಸಲಿ, ಸಮಾಜವಾದದ ಉದ್ದೇಶ, ತರ್ಕಗಳನ್ನು ವಿರೋಧಿಸಲಿ. ನಾನು ನೋಡಲಾರೆ ಅಥವಾ ಕೇಳಲಾರೆ ಎಂಬುದನ್ನು ನನಗೆ ಮತ್ತು ಇತರರಿಗೆ ನೆನಪಿಸುವುದು ನ್ಯಾಯಯುತ ಹೋರಾಟವೂ ಅಲ್ಲ, ಒಳ್ಳೆಯ ತರ್ಕವೂ ಅಲ್ಲ. ನಾನು ಓದಬಲ್ಲೆ, ಎಲ್ಲಾ ಸಮಾಜವಾದಿ ಪುಸ್ತಕಗಳಿಗೆ ಸಮಯ ಕೊಡಬಲ್ಲೆ ಹಾಗೂ ಇಂಗ್ಲಿಷ್, ಜರ್ಮನ್, ಫ್ರೆಂಚ್‌ನಲ್ಲಿರುವ ಪುಸ್ತಕಗಳನ್ನು ಓದಬಲ್ಲೆ. ಬ್ರೂಕ್‌ಲಿನ್‌ನ ಸಂಪಾದಕರು ಇವುಗಳಲ್ಲಿ ಕೆಲವನ್ನಾದರೂ ಓದಿದರಾದರೆ ಅವರು ಇನ್ನಷ್ಟು ವಿವೇಕಿಯಾಗಬಹುದು, ತಮ್ಮ ಪತ್ರಿಕೆಯನ್ನು ಉತ್ತಮಪಡಿಸಲೂಬಹುದು. ನಾನೇನಾದರೂ ಸಮಾಜವಾದಿ ಚಳುವಳಿಯಲ್ಲಿ ಪಾಲ್ಗೊಂಡರೆ, ನಾನು ಬರೆಯಬೇಕು ಎಂದುಕೊಂಡು ಕೆಲವೊಮ್ಮೆ ಈ ಬಗ್ಗೆ ಕನಸುಕಾಣುತ್ತಿರುವ ಪುಸ್ತಕವನ್ನು ಏನೆಂದು ಹೆಸರಿಸುವೆ ಎಂದು ನಾ ಬಲ್ಲೆ: **ಕೈಗಾರಿಕಾ ಕುರುಡುತನ ಮತ್ತು ಸಾಮಾಜಿಕ ಕಿವುಡುತನ**.

*(ಮೊದಲ ಪ್ರಕಟಣೆ ನವೆಂಬರ್ ೩, ೧೯೧೨. ನ್ಯೂಯಾರ್ಕ್ ಕಾಲ್ ಪತ್ರಿಕೆಯಲ್ಲಿ)*

*ಮೂಲ: Helen Keller: Her Socialist Years (International Publishers, 1967) ಮತ್ತು Helen Keller Reference Archive (marxists.org) 2000*

**ಡಾ॥ ಸುಧಾ ಕಾಮತ್**
೧೩, 'ಹಿಮಗಿರಿ' ಅಪಾರ್ಟ್‌ಮೆಂಟ್ಸ್, ೪ನೇ ಮುಖ್ಯ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂ. – ೩



## ಪ್ರಕ್ಷುಬ್ಧತೆಯಲ್ಲಿರುವ ಭಾರತ – ಚೀಣಾ ಗಡಿ

ಭಾರತ – ಚೀಣಾ – ಭೂತಾನ ಈ ಮೂರೂ ಗಡಿಗಳಿಗೆ ತಾಗಿಕೊಂಡಿರುವ ದೋಕ್ಲಾಮ ಪ್ರದೇಶದಲ್ಲಿ ಭಾರತ – ಚೀಣಾ ಸೇನೆಗಳ ಮುಖಾಮುಖಿ ಮೂರನೇ ತಿಂಗಳಿಗೆ ಬೀಳುತ್ತಿದೆ. ಒಂದು ಬಗೆಯ ಯುದ್ಧವೂ ಇಲ್ಲ, ಶಾಂತಿಯೂ ಇಲ್ಲ ಎನ್ನುವ ವಾತಾವರಣ ಸೃಷ್ಟಿಯಾಗಿದೆ ಹಿಮಾಲಯದ ಗಡಿಯಲ್ಲಿ. ೧೯೬೨ರಲ್ಲಿ ಗಡಿವಿವಾದ ಕುರಿತು ಭಾರತ – ಚೀಣಾಗಳ ನಡುವೆ ಯುದ್ಧವಾದ ನಂತರ ಉದ್ಭವಿಸಿರುವ ಗಂಭೀರವಾದ ವಾತಾವರಣ ದೋಕ್ಲಾಮ ಪ್ರದೇಶದಲ್ಲಿ ಉಂಟಾಗಿದೆ. ಎರಡೂ ದೇಶಗಳ ಮಧ್ಯೆ ವಾಕ್ಸಮರ ಜೋರಾಗಿಯೇ ನಡೆಯುತ್ತಿದೆ. ರಾಜತಾಂತ್ರಿಕ ಪ್ರಯತ್ನಗಳೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಮುಂದುವರಿಯುತ್ತಿರುವಂತೆಯೇ ಸಂಘರ್ಷಣೆಯ ಸಂಭವವೂ ಹೆಚ್ಚುತ್ತಿದೆ. ಎರಡೂ ಸೇನೆಗಳು ಜಮಾಯಿಸಿದ್ದು ಗುಂಡಿನ ಚಕಮಕಿ ನಡೆಯದೇ ಇದ್ದರೂ ಯುದ್ಧದ ಕಾರ್ಮೋಡ ಇರುವುದನ್ನು ಅಲ್ಲಗಳೆಯುವಂತಿಲ್ಲ. ಎರಡೂ ಕಡೆ ಅತ್ಯುಗ್ರ ರಾಷ್ಟ್ರೀಯ ವಾದ ಉದ್ಭವಿಸಿರುವುದನ್ನು ಕಾಣುತ್ತಿದ್ದೇವೆ. ಏಷಿಯಾದ ಈ ಎರಡು ಬೃಹತ್ ರಾಷ್ಟ್ರಗಳ ಮಧ್ಯೆ ಏರ್ಪಟ್ಟಿರುವ ಉದ್ವಿಗ್ನತೆ ಎಲ್ಲ ರೀತಿಯಲ್ಲೂ ಇಡೀ ಖಂಡದ ದೇಶಗಳಲ್ಲಿ ಮುಖ್ಯವಾಗಿ ಆಸುಪಾಸಿನ ದೇಶಗಳಲ್ಲಿ ಆತಂಕ ಹುಟ್ಟಿಸಿದೆ.

ಚೀಣಿ ಸೇನೆ ಈ ಗಡಿಭಾಗದಲ್ಲಿ ನಿರ್ಮಾಣ ಮಾಡುತ್ತಿರುವ ರಸ್ತೆ ವಿವಾದಕ್ಕೆ ಕಾರಣ. ಚೀಣಾದ ಪ್ರಕಾರ ಆ ಭೂಭಾಗ ಚೀಣಾಗೆ ಸೇರಿದ್ದು, ಹಿಂದೆ ೧೯೬೨ರಲ್ಲಿ ಆಕ್ಸೈಚಿನ್ ಗಡಿಯಲ್ಲಿ ಕೂಡ ರಸ್ತೆ ನಿರ್ಮಾಣಮಾಡುತ್ತಿದ್ದುದೇ ವಿವಾದಕ್ಕೆ ನಾಂದಿಯಾಗಿದ್ದನ್ನು ನೆನಪಿಸಿಕೊಳ್ಳಬಹುದು. ಹೆಚ್ಚು ಕಡಿಮೆ ಬಿಗುವಿನ ವಾತಾವರಣ ಈ ತ್ರಿಶೂಲದಲ್ಲಿ ಉಂಟಾದದ್ದು ಕೂಡ ಪ್ರಧಾನಿ ನರೇಂದ್ರಮೋದಿ ಅಮೆರಿಕಾಗೆ ಸಂದರ್ಶನ ನೀಡಿ ಡೊನಾಲ್ಡ್ ಟ್ರಂಪ್ ಜೊತೆ ಮಾತುಕತೆಯಲ್ಲಿ ನಿರತರಾಗಿದ್ದಾಗ. ಇದೊಂದು ಕಾಕತಾಳೀಯ, ಅಷ್ಟೆ. ಚೀಣಾದ ಪ್ರಾಬಲ್ಯವನ್ನು, ಪ್ರಭಾವವನ್ನು ಕುಗ್ಗಿಸಲು, ತಡೆಯಲು ಅಮೆರಿಕ ಭಾರತವನ್ನು ಎತ್ತಿಕಟ್ಟಲು ಬಯಸುತ್ತಿರುವುದು ಹೊಸ ವಿಷಯವೇನಲ್ಲ. ವಿವಾದದ ಸುಳಿಯಲ್ಲಿರುವುದು ಈ ಭೂಭಾಗಕ್ಕಷ್ಟೇ ಸೀಮಿತವಾಗಿಲ್ಲ. ದಕ್ಷಿಣ ಚೀಣಾ ಸಮುದ್ರದ ನೀರನ್ನು ಕಲಕಿದೆ. ಈ ಸಂದರ್ಭದಲ್ಲಿ ಚೀಣಾದ ಉದ್ದೇಶಿತ ಯೂರೋಪು – ಏಷಿಯ ಸಂಪರ್ಕಿಸುವ ಮಾರ್ಗ ನಿರ್ಮಾಣದ ಯೋಜನೆಗೆ ಭಾರತದ ಒತ್ತಾಸೆ ಇಲ್ಲದಿರುವುದೂ ಒಂದು ಕಾರಣವಿರಲು ಸಾಕು. ಚೀಣಾದ ಈ ಮಹದಾಕಾಂಕ್ಷೆಯ, ಒಂದು ಕಾಲದ 'ರೇಶ್ಮೆ ಮಾರ್ಗ'ವನ್ನು ನೆನಪಿಗೆ ತರುವ ಹೆದ್ದಾರಿಯ ನಿರ್ಮಾಣ ಕುರಿತು ನಡೆದ ನೂರು ದೇಶಗಳ ಶೃಂಗ ಸಮಾವೇಶದಲ್ಲಿ ಭಾರತ ಭಾಗವಹಿಸಿರಲಿಲ್ಲ. ಚೀಣಾದ ಈ ಯೋಜಿತ ರಸ್ತೆ ಪಾಕಿಸ್ತಾನ ಆಕ್ರಮಿತ ಕಾಶ್ಮೀರದ ಪ್ರದೇಶದಲ್ಲಿ ಹಾದು ಹೋಗುವುದೇ ಭಾರತದ ಆಕ್ಷೇಪಕ್ಕೆ ಕಾರಣ. ಇವೆಲ್ಲ ಒಟ್ಟಾಗಿ ಸೇರಿ ಚೀಣಾದ ಕಿರಿಕಿರಿ ಭಾರತದ ಗಡಿಯಲ್ಲಿ.

ಭಾರತ – ಚೀಣಾಗಳ ಮಧ್ಯೆ ೩,೫೦೦ ಕಿ.ಮೀ.ಗಳಷ್ಟು ಉದ್ದ ಗಡಿ ಇದೆ. ಇದರಲ್ಲಿ ಹೆಚ್ಚಿನ ಗಡಿ ಭಾಗ ನಿಷ್ಕರ್ಷೆಯಾಗಿಲ್ಲ. ಬ್ರಿಟಿಷರ ಆಳ್ವಿಕೆ ಇದ್ದಾಗಲೂ ಎರಡೂ ದೇಶಗಳ ಮಧ್ಯೆ ಸಂಬಂಧಗಳು ಮಧುರವಾಗಿದ್ದುದರಿಂದ ಅದರ ಅಗತ್ಯವೂ ಇರಲಿಲ್ಲ. ವಿವಾದ ಸೃಷ್ಟಿಯಾದದ್ದು ಕೂಡ ಚೀಣಾ ಜನತಾ ಗಣರಾಜ್ಯ ಸ್ಥಾಪನೆಗೊಂಡ ಏಳೆಂಟು ವರ್ಷಗಳ ನಂತರ ಹಿಮಾಲಯದ ಅಂಚಿನಲ್ಲಿರುವ ಟಿಬೇಟಿನ ಮೇಲೆ ಚೀಣಾದ ಅಧಿಕಾರ ಸ್ಥಾಪನೆಗೊಂಡ ನಂತರ. ಜನವಸತಿಯೇ ಇಲ್ಲದ ಈ ಗಡಿ ಪ್ರದೇಶವನ್ನು ಕಾಯಲು ದುಬಾರಿ ವೆಚ್ಚದಲ್ಲಿ ಭಾರತ ಸಾಕಷ್ಟು ಸೇನೆಯನ್ನು ನಿಯುಕ್ತಿಗೊಳಿಸಿದೆ. ಚೀಣಾ ಯಾವತ್ತೂ ತನಗೆ ಸೇರಿರುವ ಭೂಭಾಗ ಎನ್ನುವುದರಲ್ಲಿ ರಾಜಾರೋಷವಾಗಿ ಕಾರುಬಾರು ನಡೆಸುವುದೇ ವಿವಾದಕ್ಕೆ ಮೂಲ. ಚೀಣಾ ಅದಕ್ಕೆ ಪೂರಕವಾಗಿ ಹಳೆಯ ದಾಖಲೆಗಳನ್ನು ಕೆದಕಿ ಸಿದ್ಧವಾಗಿರಿಸಿಕೊಂಡಿರುತ್ತದೆ. ೧೯೬೨ರಲ್ಲಿ ಭಾರತ – ಚೀಣಾ ಯುದ್ಧದ ನಂತರ ಹಲವು ವರ್ಷಗಳಾದ ಮೇಲೆ ಎರಡೂ ದೇಶಗಳ ಮಧ್ಯೆ ಸಂಬಂಧಗಳು ಕುದುರಿ ವಾಣಿಜ್ಯ ಹಾಗೂ ಸಾಂಸ್ಕೃತಿಕ ಸಂಬಂಧಗಳು ಸ್ಥಾಪನೆಗೊಂಡವು. ಗಡಿ ಸಮಸ್ಯೆಯನ್ನು ಬದಿಗಿರಿಸಿ, ಅದರ ಪರಿಹಾರಕ್ಕೆ ಒಂದು ವ್ಯವಸ್ಥೆಯನ್ನು ರೂಪಿಸಿದ್ದಾಗ್ಯೂ ಹೆಚ್ಚಿನ ಪ್ರಗತಿ ಆಗಿಲ್ಲ. ಕಾರಣಗಳೇನೆ ಇದ್ದರೂ ಎರಡೂ ದೇಶಗಳು ಪರಸ್ಪರ ಸಂಬಂಧಗಳಿಗೆ ಧಕ್ಕೆಯಾಗದಂತೆ ನೋಡಿಕೊಂಡಿದ್ದವು ಇದುವರೆಗೆ. ಈಗ ಉದ್ಭವಿಸಿರುವ ವಿವಾದವನ್ನು ಆದಷ್ಟು ಬೇಗ ಇತ್ಯರ್ಥಗೊಳಿಸುವುದು ಅಗತ್ಯ. ಯುದ್ಧ ಎಂದಿಗೂ ವಿವಾದಗಳಿಗೆ ಪರಿಹಾರವಲ್ಲ. ಎರಡೂ ದೇಶಗಳು ಮಾತುಕತೆಗಳ ಮೂಲಕ ರಾಜತಾಂತ್ರಿಕ ಮೂಲಗಳ ವ್ಯಾಪ್ತಿಯಲ್ಲಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕು. ಎರಡೂ ದೇಶಗಳು ಈ ವಲಯದ ದೇಶಗಳ ಮೇಲೆ ಸಾಕಷ್ಟು ಪ್ರಭಾವವನ್ನು ಹೊಂದಿವೆ, ಸಾಕಷ್ಟು ಬಂಡವಾಳವನ್ನು ಹೂಡಿವೆ. ವಿವಾದವನ್ನು ಮುಂದುವರಿಸಿಕೊಂಡು ಹೋಗುವುದು ಎರಡೂ ದೇಶಗಳಿಗೆ ದುಬಾರಿಯಾಗುತ್ತದೆ.

* * *

## ಅಧ್ಯಕ್ಷ ಟ್ರಂಪ್ ಯುದ್ಧೋನ್ಮಾದ

ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಅವರ 'ಅಮೆರಿಕ ಫಸ್ಟ್' ನೀತಿ ಈಗ ಸ್ಪಷ್ಟವಾಗಿ ಬಯಲಾಗುತ್ತಿದೆ. ಅಧಿಕಾರ ವಹಿಸಿಕೊಂಡ ಆರೆಂಟು ತಿಂಗಳಲ್ಲಿ ಅವರ ವಿದೇಶೀ ನೀತಿಯನ್ನು ಅವಲೋಕಿಸಿದರೆ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಅನುಸರಿಸಿದ್ದ ನೀತಿಗಳನ್ನು ಬದಲಿಸಿ, ಅಮೆರಿಕವನ್ನು ಹೆಚ್ಚು ದುರಾಕ್ರಮಣಕಾರಿಯಾಗಿ ರೂಪಿಸಲು ಹವಣಿಸುತ್ತಿದ್ದಾರೆ. ಇರಾನಿನೊಂದಿಗೆ ಮಾಡಿಕೊಂಡಿದ್ದ ನ್ಯೂಕ್ಲಿಯರ್ ಒಪ್ಪಂದವನ್ನು ಬದಲಿಸಲು ಹೊರಟಿದ್ದಾರೆ. ಹಿಂದಿನಂತೆ ಆ ದೇಶದ ಮೇಲೆ ಹಗೆತನ ಸಾಧಿಸಲು ಮುಂದಾಗಿದ್ದಾರೆ. ಉತ್ತರ ಕೊರಿಯಾದ ಕ್ಷಿಪಣಿ ಪ್ರಯೋಗಗಳನ್ನು ತಡೆಯಲು ಆಕ್ರಮಣಕಾರಿ ಧೋರಣೆ ಅನುಸರಿಸುತ್ತಿದ್ದಾರೆ. ಯುದ್ಧಬೆದರಿಕೆ ಹಾಕಿದ್ದಾರೆ. ಎರಡೂ ದೇಶಗಳ ಮಧ್ಯೆ ಮಾತಿನ ಚಕಮಕಿ ನಡೆಯುತ್ತಿದೆ. ಉದ್ರಿಕ್ತ ವಾತಾವರಣ ಸೃಷ್ಟಿಯಾಗಿದೆ ಈ ಪ್ರದೇಶದಲ್ಲಿ.

ಇದೀಗ ಅವರ ಕೆಂಗಣ್ಣಿಗೆ ಗುರಿಯಾಗಿರುವುದು ದಕ್ಷಿಣ ಅಮೆರಿಕದ ವೆನೆಜುವೇಲ. ಅಲ್ಲಿ ಎಡ ಪಕ್ಷದ ಸರಕಾರ ಅಧಿಕಾರಕ್ಕೆ ಬಂದಾಗಿನಿಂದ ಅಮೆರಿಕ ಸರಕಾರ ಹಗೆತನ ಸಾಧಿಸುತ್ತಿದೆ. ದಕ್ಷಿಣ ಅಮೆರಿಕದ ದೇಶಗಳಲ್ಲಿ ಪರ್ಯಾಯ ವ್ಯವಸ್ಥೆಗೆ ನಾಂದಿಹಾಕಿದ್ದು ಹ್ಯೂಗೋ ಚಾವೆಜ್ ನೇತೃತ್ವದಲ್ಲಿದ್ದ ವೆನೆಜುವೇಲ. ವಾಷಿಂಗ್ಟನ್ ವಿಧಿಸಿದ ಆರ್ಥಿಕ ದಿಗ್ಬಂಧನ ಪರಿಣಾಮವಾಗಿ ದಕ್ಷಿಣ ಅಮೆರಿಕದ ಈ ದೇಶ ತೀವ್ರವಾದ ಆರ್ಥಿಕ ಸಂಕಷ್ಟಕ್ಕೆ ಗುರಿಯಾಗಿದೆ. ಜನಜೀವನ ದುಸ್ತರವಾಗಿದೆ. ವೆನೆಜುವೇಲದ ಆರ್ಥಿಕ ಮುಗ್ಗಟ್ಟಿಗೆ ಮೂಲ ಕಾರಣ ಅದರ ಮೇಲೆ ವಿಧಿಸಲಾಗಿರುವ ಆರ್ಥಿಕ ದಿಗ್ಬಂಧನ. ವಿಪರೀತ ಹಣದುಬ್ಬರ, ವಿದೇಶೀ ವಿನಿಮಯದ ಕೊರತೆ ದಕ್ಷಿಣ ಅಮೆರಿಕದ ಈ ದೇಶವನ್ನು ಬಾಧಿಸುತ್ತಿದೆ. ದಿಗ್ಬಂಧನವನ್ನು ತೆರವುಗೊಳಿಸಿ ನೆರವಾಗುವ ಬದಲಿಗೆ ಡೊನಾಲ್ಡ್ ಟ್ರಂಪ್ ಮಿಲಿಟರಿ ಕಾರ್ಯಾಚರಣೆ ಕುರಿತು ಈಚೆಗೆ ಬೆದರಿಕೆ ಹಾಕಿದ್ದಾರೆ. 'ಪ್ರಪಂಚದಾದ್ಯಂತ ಅನೇಕ ಕಡೆಗಳಲ್ಲಿ ನಮ್ಮ ಸೈನಿಕರಿದ್ದಾರೆ. ವೆನೆಜುವೇಲ ದೂರವೇನಲ್ಲ. ಜನ ಸಂಕಷ್ಟಕ್ಕೀಡಾಗಿ ಅಸುನೀಗುತ್ತಿದ್ದಾರೆ' ಎಂದಿದ್ದಾರೆ ಟ್ರಂಪ್. ಅವರು ಮತ್ತೆ ಅಮೆರಿಕದ ಹಿತಾಸಕ್ತಿಗಳನ್ನು, ಪ್ರಜೆಗಳನ್ನು ಕಾಪಾಡಿಕೊಳ್ಳುವ ವಿಚಾರವನ್ನು ಮುಂದೂಡಿದ್ದಾರೆ. ವೆನೆಜುವೇಲ ಸಹಜವಾಗಿಯೇ ಅಮೆರಿಕದ ಬೆದರಿಕೆಯನ್ನು ಸಾಮ್ರಾಜ್ಯಶಾಹಿ ವರ್ತನೆ ಎಂದು ಬಣ್ಣಿಸಿದೆ. ಸಂಕಷ್ಟದಲ್ಲಿರುವ ದೇಶಕ್ಕೆ ನೆರವಾಗುವುದರ ಬದಲು ಮಿಲಿಟರಿ ಕಾರ್ಯಾಚರಣೆಯ ವಿಚಾರ ಮಾಡುವುದು ಯಾವ ನ್ಯಾಯ? ಅಮೆರಿಕ ಯಾವತ್ತೂ ಅನುಸರಿಸಿಕೊಂಡು ಬಂದಿರುವ ನೀತಿ ಇದು. ಅದಲ್ಲದೆ ಟ್ರಂಪ್ ಮಹಾಶಯ ಈಗ ಕ್ಯೂಬಾದ ಬಗ್ಗೆ ಕೂಡ ಅಮೆರಿಕದ ವಕ್ರದೃಷ್ಟಿ ಹರಿಸಿದ್ದಾರೆ. ಈಚೆಗೆ ತಾನೆ ಸ್ಥಾಪನೆಯಾಗಿದ್ದ ಸಂಬಂಧಗಳನ್ನು ಮುರಿಯಲು ಹವಣಿಸುತ್ತಿದ್ದಾರೆ. ಒಟ್ಟಿನಲ್ಲಿ 'ಅಮೆರಿಕದ ಪ್ರತಿಷ್ಠೆ'ಯನ್ನು ಪುನಃ ಸ್ಥಾಪಿಸುವ ಟ್ರಂಪ್ ಉದ್ದೇಶ ದುರಾಕ್ರಮಣಕಾರಿ ಸೈನಿಕ ಕಾರ್ಯಾಚರಣೆಗಳಲ್ಲಿ ತೊಡಗಿಸಿಕೊಳ್ಳುವುದು ಎನ್ನಿಸುತ್ತಿದೆ.

ಸೀಯಾರ್ಕೆ

# ಎಲ್ಲ ಸಂತೆಗಳಂತಲ್ಲ ಈ ಸಂತೆ!

**ಸಾ**ವಿರ, ಸಾವಿರ ವರ್ಷಗಳಷ್ಟು ಹಿಂದೆ. ಪ್ರಾಚೀನ ಮನುಷ್ಯನ ಬುದ್ಧಿಗೆ ಹೊಳೆದ ಅದ್ಭುತ ಉಪಾಯವೇ ಸಂತೆ !

ಸರಕು ವಿನಿಮಯ (ಬಾರ್ಟರ್) ಪದ್ಧತಿ ರೂಢಿಗೆ ಬಂದದ್ದು ಈ ಸಂತೆಯ ಮೂಲಕ. ಜನರು ಬೆಳೆದ ಉತ್ಪನ್ನಗಳನ್ನು ಅಥವಾ ಸಾಕಿದ ಪ್ರಾಣಿಗಳನ್ನು ತಮ್ಮ ಅಗತ್ಯ ಪೂರೈಸುವ ಇತರ ಸರಕುಗಳಿಗಾಗಿ ವಿನಿಮಯ ಮಾಡಿಕೊಳ್ಳಲು ಪ್ರಾರಂಭಿಸಿದ್ದು ಸಂತೆಗಳಲ್ಲಿ. ಆದಿವಾಸಿ ಜನಸಮುದಾಯಗಳು ಹೆಚ್ಚು ಸಂಖ್ಯೆಯಲ್ಲಿ ವಾಸಿಸುವ ಗುಡ್ಡಗಾಡುಗಳಲ್ಲಿ ಈಗಲೂ ಈ ಪದ್ಧತಿ ಉಳಿದಿದೆ.

ನಾಲ್ಕಾರು ಊರುಗಳವರು ಬಂದು ಹೋಗಲು ಅನುಕೂಲವಾಗುವಂತೆ, ಒಂದು ಊರಿನಲ್ಲಿ ಸಂತೆ ಸೇರಲು ಒಂದು ಸ್ಥಳವನ್ನು ಮೀಸಲಿರಿಸುವ ನಿಯಮ ಹಿಂದಿನಿಂದಲೂ ನಡೆದು ಬಂದಿದೆ. ಅದನ್ನು ಅನೇಕ ಶಾಸನಗಳಲ್ಲಿ 'ಸಂತೆಮಾಳ' ಎಂದು ದಾಖಲಿಸಲಾಗಿದೆ. ಸಂತೆ ಸೇರುವ ಊರಿಗೆ ಅದರದೇ ಆದ ಗಣ್ಯತೆ ಇರುತ್ತದೆ. ಅನೇಕ ಊರುಗಳು, ಸಂತೆ ಹೆಸರಿನಿಂದಲೇ ತಮ್ಮನ್ನು ಗುರುತಿಸಿಕೊಂಡಿವೆ. ಸಂತೆ ಶಿವರ, ಸಂತೆ ಸರಗೂರು, ಸಂತೆ ಮರಳ್ಳಿ, ಸಂತೆ ಬನ್ನೂರು, ಸಂತೆ ಕಸಲಗೆರೆ, ಶನಿವಾರ ಸಂತೆ – ಹೀಗೆ ನೂರಾರು ಉದಾಹರಣೆಗಳನ್ನು ನೀಡಬಹುದು.

ನಿಮ್ಮಲ್ಲಿ ಕೆಲವರಿಗಾದರೂ, ನೀವಿನ್ನೂ ಹಳ್ಳಿಶಾಲೆಯಲ್ಲಿ ಮೂರು ಅಥವಾ ನಾಲ್ಕನೇ ತರಗತಿಯಲ್ಲಿ ಕಲಿಯುತ್ತಿದ್ದಾಗ, ಅವ್ವನನ್ನು ಕಾಡಿಬೇಡಿ, ಅಪ್ಪನೊಂದಿಗೆ ಸಂತೆಗೆ ಹೋಗಿ ಬರಲು ಒಪ್ಪಿಗೆ ಗಿಟ್ಟಿಸಿದ್ದು, ಹಾಗೆಯೇ ಅಪ್ಪನ ಕೂಡ ಸಂತೆಗೆ ಹೋಗಿಬಂದದ್ದು ನೆನಪಾಗಬಹುದು. ಮೊದಲ ಬಾರಿಗೆ ಸಂತೆ ನೋಡಿದ ಸಂಭ್ರಮದಲ್ಲಿ ನಿಮಗೆ ಹಸಿವು ಮರೆತು ಹೋಗಿದ್ದಿರಬಹುದು. ಅಂಗಡಿಗಳಲ್ಲಿ ಅಪ್ಪ ವಸ್ತುಗಳ ಧಾರಣೆ ವಿಚಾರಿಸುತ್ತಿದ್ದುದು, ಬೆಲೆ ಕಡಿಮೆ ಇರುವ ಅಂಗಡಿಯಲ್ಲಿ ಅದನ್ನು ಖರೀದಿಸಿದ್ದು, ಹಾಗೆಯೇ ಪ್ರತಿಯೊಂದನ್ನು ಖರೀದಿಸುವಾಗಲೂ ಸಾಕಷ್ಟು ಚೌಕಾಶಿ ಮಾಡಿದ್ದು, ಜೋಬಿಗೆ ತುಂಬಿಸಿದ್ದ ಕಡಲೆ ಪುರಿ ಮುಕ್ಕುತ್ತ ನೀವು ಅಪ್ಪನನ್ನು ಹಿಂಬಾಲಿಸಿದ್ದು ನೆನಪಾಗುತ್ತಿರಬಹುದು ! ಅಪ್ಪ ನಿಮ್ಮ ತಲೆಯ ಮೇಲೆ ಹೆಚ್ಚು ಭಾರ ಹೊರಿಸಿದ್ದನ್ನು ನೆನೆದೇ ಧುಮುಗುಡುತ್ತ ಆತನನ್ನು ಹಿಂಬಾಲಿಸಿರಬಹುದು. ಸಂತೆಯ ನೆನಪು ನಿಮ್ಮನ್ನು ಈಗಲೂ ಪುಳಕಗೊಳಿಸುವುದರಲ್ಲಿ ಅಚ್ಚರಿಯೇನಿಲ್ಲ !

ಅಥವಾ ನಿಮ್ಮ ಮಿಡ್ಲ್ ಸ್ಕೂಲ್ ಅಥವಾ ಹೈಸ್ಕೂಲ್ ದಿನಗಳನ್ನು ನೆನಪಿಸಿಕೊಳ್ಳಿ. ಮೇಷ್ಟ್ರು ತರಗತಿಗೆ ಬರುವುದು ತಡವಾಗಿದೆ. ನೀವೆಲ್ಲರೂ ನಿಮ್ಮದೇ ಪ್ರಪಂಚದಲ್ಲಿ ಮುಳುಗಿರುತ್ತೀರಿ. ಮಾತುಗಳಿಗೆ ಕಡಿವಾಣವಿರುವುದಿಲ್ಲ, ನೀವು ಗದ್ದಲವೆಬ್ಬಿಸುತ್ತಿರುವ ಅರಿವೂ ನಿಮಗಿರುವುದಿಲ್ಲ. ಒಮ್ಮೆಲೇ ಮೇಜಿನ ಮೇಲೆ ಟಪ್ ಎಂದು ಬೆತ್ತದಿಂದ ಅಪ್ಪಳಿಸಿದ ಸದ್ದು. 'ಕತ್ತೆಗಳ್ನ, ತಂದು, ಇದೇನು ಕ್ಲಾಸೋ ಸಂತೇನೋ ?' ಎಂದು ಮೇಷ್ಟ್ರು ಅಬ್ಬರಿಸಿದಾಗ, ಎಲ್ಲ ಅಮಾಯಕರ ಸದ್ದಡಗಿ ಮೌನ ಆವರಿಸುತ್ತಿದ್ದ ನೆನಪು ಸಹ ನಿಮ್ಮನ್ನು ಹಿಂದಿನ ದಿನಗಳಿಗೆ ಒಯ್ಯಬಹುದು.

ಕಿಟೆಲ್ ಮಹಾಶಯರ ಪ್ರಕಾರ 'ಸಂಸ್ಥ' ಎಂಬ ಪದದಿಂದ 'ಸಂತೆ' ಹುಟ್ಟಿತು. ಯಾವ ಯಾವ ಭಾಷೆಗಳವರು ಸಂತೆಯನ್ನು ಯಾವ ಯಾವ ಹೆಸರಿನಿಂದ ಕರೆಯುತ್ತಾರೆ ಎಂಬ ವಿವರ ಕಿಟೆಲ್ ಕೋಶದಲ್ಲಿ ನೀಡಿದ್ದಾರೆ. ಜೊತೆಗೆ ಪಂಪಭಾರತದಿಂದ 'ಕಾಮದೇವಂ ಮಾಡಿದೋಜನ ಸಾಲ್ಯೆಯೆರ್ಪಂತಿರ್ದ ಪೂವಿನ ಸಂತೆಯೊಳ್' – ಎಂಬ ಸಾಲನ್ನು ಉಲ್ಲೇಖಿಸಿ, ಸಂತೆ ಆಗಲೇ ರೂಢಿಯಲ್ಲಿತ್ತೆಂಬುದನ್ನು ತೋರಿಸಿದ್ದಾರೆ. 'ವೃಷಭೇಂದ್ರ ವಿಜಯ' ಕೃತಿಯಲ್ಲಿ ಸಹ ಸಂತೆಯ ಪ್ರಸ್ತಾಪವಿದೆ.

ಸಂತೆಗಳಂತೆಯೇ ಜಾತ್ರೆಗಳಲ್ಲಿಯೂ ಜನರು ನೆರೆಯುತ್ತಾರೆ. ಆದರೆ ಅವೆರಡರ ಉದ್ದೇಶ ಬೇರೆಬೇರೆಯದು. ಜಾತ್ರೆ ಅಥವಾ ಉತ್ಸವಗಳೊಂದಿಗೆ ಧಾರ್ಮಿಕತೆಯ ಸಂಬಂಧವಿರುತ್ತದೆ. ಒಬ್ಬ ದೇವರು ಅಥವಾ ದೇವತೆಯ ಹೆಸರಿನಲ್ಲಿ ಜಾತ್ರೆ ನಡೆಯುತ್ತದೆ. ಅಲ್ಲಿ ಧಾರ್ಮಿಕ ಆಚರಣೆಗಳಿರುತ್ತವೆ. ಉಪವಾಸ, ಪೂಜೆ, ಉರುಳು ಸೇವೆ, ಭಕ್ತಿ ಕ್ರಿಯೆಗಳು, ಜೊತೆಗೆ ಕುಣಿತ, ಹಾಡು, ಸರ್ಕಸ್, ನಾಟಕ – ಮುಂತಾದ ಮನರಂಜನೆಗಳೂ ಇರುತ್ತವೆ. ಒಂದೊಂದು ಕಡೆ ಜಾತ್ರೆಗಳು ಹತ್ತರಿಂದ ಹದಿನೈದು ದಿನಗಳವರೆಗೂ ನಡೆಯುವುದುಂಟು.

ಸಂತೆಯದು ಒಂದು ದಿನದ ವಹಿವಾಟು. ಅದಕ್ಕೆ ಬರಿಯ ವಾಣಿಜ್ಯ ಮುಖವಷ್ಟೇ ಇರುತ್ತದೆ. ತಮ್ಮ ಉತ್ಪನ್ನಗಳನ್ನು ವಿನಿಮಯ ಮಾಡಿಕೊಳ್ಳುವುದು ಇದರ ಮುಖ್ಯ ಉದ್ದೇಶ. ಉತ್ಪನ್ನಗಳನ್ನು ಖರೀದಿಸಿ ಒಯ್ಯುವ ರೂಢಿ ನೂರಾರು ವರ್ಷಗಳ ನಂತರ ಬಂದದ್ದು.

---

ಚಿತ್ರ – ಲೇಖನ : **ಪರಂಜ್ಯೋತಿ**

ಸಂತೆಯಲ್ಲಿ ನಿಂತ ಕಬೀರ ನಾಟಕದ ಬಗ್ಗೆ ನೀವು ಕೇಳಿರುತ್ತೀರಿ ಅಥವಾ ನಾಟಕ ನೋಡಿರಲೂ ಸಾಕು. ತಮ್ಮ ವಿಚಾರಗಳನ್ನು ಸಾಮಾನ್ಯ ಜನರಿಗೆ ತಿಳಿಸಿಕೊಡಲು ಸಂತೆಗಿಂತ ಪ್ರಶಸ್ತ ಸ್ಥಳ ಮತ್ತೊಂದಿಲ್ಲ ಎಂಬುದು ಕಬೀರನಿಗೆ ತಿಳಿದಿತ್ತು. ಕಾಫಿ ಮತ್ತು ಟೀ ಪಾನೀಯಗಳು ನಮ್ಮ ದೇಶಕ್ಕೆ ಕಾಲಿರಿಸಿದ ಸಂದರ್ಭದಲ್ಲಿ, ಸಂತೆಗಳಲ್ಲಿ ಒಂದೊಂದು ಕಪ್ ಪಾನೀಯ ಪುಕ್ಕಟೆಯಾಗಿ ಹಂಚುವ ಮೂಲಕ ಅವುಗಳ ಪ್ರಚಾರ ಮತ್ತು ಮಾರಾಟ ಮಾಡಲಾಗುತ್ತಿತ್ತಂತೆ. ಮತ ಪ್ರಚಾರಗಳಿಗೂ ಸಂತೆಗಳನ್ನು ಬಳಸಿಕೊಂಡಿರುವ ಪ್ರಕರಣಗಳಿವೆ.

'ಸಂತೆಯೊಳಗೊಂದು ಮನೆಯ ಮಾಡಿ ಶಬುದಕ್ಕೆ ನಾಚಿದೊಡೆಂತಯ್ಯ' ಎಂಬುದು ಅಕ್ಕಮಹಾದೇವಿಯ ವಚನ. ಪ್ರಾಪಂಚಿಕ ವ್ಯವಹಾರಗಳಲ್ಲಿ ಮುಳುಗಿ ಹೋಗುವ ಮನುಷ್ಯರಿಗೆ ಪಾರಮಾರ್ಥಿಕದ ನೆರವು ಪಡೆದು ಅವನ್ನು ನಿವಾರಿಸಿಕೊಳ್ಳುವಂತೆ ಎಚ್ಚರ ನೀಡುವ ವಚನ ಅದು.

ಸಂತೆಗೆ ಸಂಬಂಧಿಸಿದ ನೂರಾರು ಗಾದೆಗಳಿವೆ. ಚಿಂತೆಯಿಲ್ಲದವನಿಗೆ ಸಂತೆಯಲ್ಲೂ ನಿದ್ದೆ, ಸಂತೆಗೆ ಹೋದವನ ಪಾಡು ತೆಂಕಲೋ ಬಡಗಲೋ, ಸಂತೆ ಸೂಳೆಯ ನೆಚ್ಚಿ ಮನೆಯ ಹೆಂಡತಿ ಮರೆತಂತೆ, ಸಂತೆ ಹೊತ್ತಿಗೆ ನಾಲ್ಕು ಮೊಳ ನೇಯ್ದಂತೆ, ಸಂತೆಯಲ್ಲಿ ಹೋದ ಮಾನ... – ಇತ್ಯಾದಿ ಪ್ರತಿಯೊಂದು ಗಾದೆಯ ಸಂದರ್ಭವನ್ನು ವಿಸ್ತರಿಸಿ ಹೇಳುತ್ತ ಹೊರಟರೆ ನಾವೂ ಸಂತೆಯಲ್ಲಿ ಕಳೆದು ಹೋಗಬಹುದು !

ಈಗ ಸಂತೆಯ ಸ್ವರೂಪ ಸಾಕಷ್ಟು ಬದಲಾಗಿದ್ದರೂ ಅದರ ಮೂಲ ಉದ್ದೇಶ ಬದಲಾಗಿಲ್ಲ. ಸಂತೆಯಲ್ಲಿ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವುದಕ್ಕೆ ಮಾತಿನ ಕೌಶಲ ಬೇಕು. ಅಗತ್ಯವಾದ ಹಲವು ಸರಕುಗಳ ಸಂತೆಯ ನಂತರ ಜಾನುವಾರು ಸಂತೆಗಳು ರೂಢಿಗೆ ಬಂದಿವೆ. ಅಲ್ಲಿ ಕುರಿ, ಆಡು ಮತ್ತು ದನಗಳನ್ನು ಮಾರಾಟ ಮಾಡಲಾಗುತ್ತದೆ. ಅಲ್ಲಿ ಎತ್ತುಗಳ ತಳಿ, ಸುಳಿ ಮತ್ತು ಪ್ರಾಯವನ್ನು ಗುರುತಿಸುವ ಪರಿಣತರಿರುತ್ತಾರೆ. ಪ್ರಾಯಶಃ ದಲ್ಲಾಳಿ ಸಹ ಸಂತೆಯಲ್ಲಿ ಹುಟ್ಟಿದ ವೃತ್ತಿಯಾಗಿರಬೇಕು. ಕೆಲವು ಕಡೆ ಕುದುರೆ ಮತ್ತು ಒಂಟೆ ಸಂತೆಗಳಿವೆ. ಕತ್ತೆಗಳ ಸಂತೆಯೂ ಇದ್ದಿರಬೇಕು. ಸಂತೆಗಳಲ್ಲಿ ಮನುಷ್ಯರನ್ನು ಮಾರಾಟ ಮಾಡಲಾಗುತ್ತಿತ್ತು. ತಮ್ಮ ಜಮೀನುಗಳಲ್ಲಿ ದುಡಿಯಲು ಅಗತ್ಯವಾದಷ್ಟು ಗುಲಾಮರನ್ನು ಸಂತೆಗಳಲ್ಲಿ ಖರೀದಿಸಬಹುದಿತ್ತು. ಇತ್ತೀಚೆಗೆ ಕೆಲವು ಕಡೆ ಪುಸ್ತಕ ಸಂತೆಗಳು ನಡೆಯುತ್ತವೆ. ವಿಮಾನಗಳಿಗೂ ಸಂತೆಗಳಿವೆ. ಬೆಂಗಳೂರಿನಲ್ಲಿ ನಡೆಯುವ ವಿಮಾನಗಳ ಸಂತೆಯಲ್ಲಿ ಆಕಾಶದಲ್ಲಿ ಹಾರಾಡುವ ವಿಮಾನಗಳನ್ನು ನೋಡುತ್ತ ಕತ್ತು ನೋಯಿಸಿಕೊಂಡು ಥ್ರಿಲ್ ಅನುಭವಿಸಬಹುದು. ಪ್ರತಿವರ್ಷ ನಡೆಯುವ ಕಡಲೆಕಾಯಿ ಪರಿಶೆ, ಮಾವು ಮೇಳ, ಹಲಸು ಮೇಳ ಮತ್ತು ದ್ರಾಕ್ಷಿ ಮೇಳಗಳನ್ನು ಸಹ ಸಂತೆಯ ಲೆಕ್ಕಕ್ಕೆ ಸೇರಿಸಬಹುದು.

ಸಂತೆ ತನ್ನದೇ ರೀತಿಯಲ್ಲಿ ಒಂದು ಪ್ರತ್ಯೇಕ ವ್ಯವಸ್ಥೆ; ಅದನ್ನೊಂದು ಜಗತ್ತು ಎಂದೂ ಹೇಳಬಹುದು. ಅದು ಎಲ್ಲರನ್ನು ಒಳಗೊಳ್ಳುವ ಜಗತ್ತು.

ಸಂತೆ ತನ್ನ ಆತ್ಮಕತೆಯನ್ನು ಹೇಳಿಕೊಳ್ಳುವಂತಿದ್ದರೆ, ಅದರ ಜೊತೆಗೆ ನೂರಾರು ವರ್ಷಗಳ ಮನುಷ್ಯರ ಇತಿಹಾಸವೂ ಬಯಲಾಗಬಹುದು. ಅಥವಾ ಸಂತೆ ನಿಮ್ಮನ್ನು ತಡೆದು ನಿಲ್ಲಿಸಿ 'ಬರ್‍ರೊಳಯ್ಯಾ ನನ್ನ ಕತೇನ !' ಎಂದರೆ ನೀವು ಆಶ್ಚರ್ಯದಿಂದ ಬಾಯ್ತೆರೆದು ನಿಲ್ಲಬಹುದು.



ಇನ್ನು 'ಕಾಳಸಂತೆ' ಎಂಬುದು ಇದೆ. ಇದು ಕೆಲವೊಮ್ಮೆ ಗುಟ್ಟಾಗಿ ಸರಕಾರ ಕಣ್ಣು ಮುಚ್ಚಿದಾಗ ಕೆಲವೊಮ್ಮೆ ಬಹಿರಂಗವಾಗಿ ನಡೆಯುತ್ತದೆ !

ಸಂತೆ ಅನೇಕ ಲೇಖಕರಿಗೆ, ಕವಿಗಳಿಗೆ ಸ್ಫೂರ್ತಿ ನೀಡಿದೆ. ತಮ್ಮ ಕೃತಿಗಳಲ್ಲಿ ಸಂತೆಯನ್ನು ನೆನಪು ಮಾಡಿಕೊಂಡಿದ್ದಾರೆ. ಕೆಲವು ಉದಾಹರಣೆಗಳು ಇಲ್ಲಿವೆ : ಕನ್ನಡದ ಖ್ಯಾತ ಕತೆಗಾರ ಕೆ. ಸದಾಶಿವರ 'ರಾಮನ ಸವಾರಿ ಸಂತೆಗೆ ಹೋದದ್ದು' ಮತ್ತು ಸುಬ್ರಾಯ ಚೊಕ್ಕಾಡಿಯವರು 'ಸಂತೆ ಮನೆ' ಎಂಬ ಕಾದಂಬರಿ, ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ'ಯಂತೂ ಸುಪರಿಚಿತ. ಅದರಲ್ಲಿನ 'ಪ್ರಶ್ನೆಗೆ ಉತ್ತರ' – ಎಂಬ ಪದ್ಯದ ಸಾಲುಗಳು ಹೀಗಿವೆ : 'ನಗುನಗುತ ನಮ್ಮೂರ ಹೆಣ್ಣುಗಳು, ಬರುತಿರಲು ನಿಮ್ಮೂರ ಸಂತೆಗಾಗಿ/ ನವಿಲೂರಿಗಿಂತಲೂ ಹೊನ್ನೂರೇ ಸುಖವೆಂದು ನಿಲ್ಲಿಸಿತು ಪ್ರೇಮ ಕೂಗಿ', ಇದರ ಜೊತೆಗೆ 'ಒಂದಿರುಳು ಕನಸಿನಲಿ...' – ಎಂದು ಪ್ರಾರಂಭವಾಗುವ ಅದನ್ನು ಹಾಡಿ ಕೇಳುಗರನ್ನು ಒಂದು ಅದ್ಭುತಲೋಕಕ್ಕೆ ಕರೆದೊಯ್ಯುವ ಮೈಸೂರು ಅನಂತಸ್ವಾಮಿ ಮತ್ತು ರತ್ನಮಾಲಾ ಪ್ರಕಾಶರ ಸಿರಿಕಂಠ ನೆನಪಾಗಬಹುದು. ಕೈಯಾರ ಕಿಞ್ಞಣ್ಣ ರೈಗಳು ಬರೆದಿರುವ ಮಕ್ಕಳ ಪದ್ಯದ ಸಾಲುಗಳು ಹೀಗಿವೆ : 'ಸಂತೆಗೆ ಹೋದನು ಭೀಮಣ್ಣ / ಹಿಂಡಿಯ ಕೊಂಡನು ಹತ್ತು ಮಣ', ಮಹಾಕವಿ ಕುವೆಂಪು ಅವರು, ತೇಜಸ್ವಿ ಜನಿಸಿದಾಗ 'ಸ್ವಾಗತ ನಿನಗೆಲೆ ಕಂದಯ್ಯ' ಎಂಬ ಪದ್ಯ ಬರೆದಿದ್ದಾರೆ. ಸದ್ದುಗದ್ದಲಗಳಿಂದ ದೂರವಿರಲು ಪ್ರಯತ್ನಿಸುತ್ತಿದ್ದ ಕುವೆಂಪು, 'ನೀನೆನಗೆ ಇಂಪಿನ ಸಂತೆ' – ಎಂದು ಆ ಪದ್ಯದಲ್ಲಿ ಮಗನ ಆಗಮನವನ್ನು ಸ್ವಾಗತಿಸಿ ಸಂಭ್ರಮಿಸಿದ್ದಾರೆ! ಮಗನ ಗದ್ದಲ ಅವರಿಗೆ ಇಂಪಿನ ಸಂತೆ !

ಸಂತೆಯ ಕುರಿತು ಬರೆಯ ಹೊರಟ ನನ್ನ ಬರಡು ತಲೆಯಲ್ಲಿ ಸಹ ಕವಿತೆಯೊಂದು ಮಿಸುಕಾಡತೊಡಗಿದೆ! 'ಸಂತೆಯೆಂದರೆ ಬರಿ ಗದ್ದಲವಲ್ಲೋ ಅಣ್ಣಾ ! ಸಂತೆಯೆಂದರೆ ಅದೊಂದು ವ್ಯವಸ್ಥೆ, ಒಂದು ಅವಸ್ಥೆ! ಸಂತೆಗೊಂದು ತುಡಿಯುವ ಜೀವವಿದೆ...' – ಇತ್ಯಾದಿ.

ನೀವೂ ಪದ್ಯ ಬರೆಯ ಹೊರಡುವುದೇ, ತಗೀರಿ ಇದು ನಿಮಗೆ ತರವಲ್ಲ – ಎಂದು ಕೆಲವರಾದರೂ ಶಿಶುನಾಳರ ಧಾಟಿಯಲ್ಲಿ ಆಕ್ಷೇಪಿಸಲು ತಯಾರಾಗಿರುವುದು ನನಗೆ ಅರ್ಥವಾಗುತ್ತಿದೆ! ಆದ್ದರಿಂದ ನನ್ನ ಕವಿತೆ ಪುರಾಣವನ್ನು ಬದಿಗಿರಿಸಿ ಮುಖ್ಯ ವಿಷಯಕ್ಕೆ ಬರೋಣ.

✴ ✴ ✴

ನಾನು ಹೇಳಹೊರಟದ್ದು, ಬೆಂಗಳೂರಿನಲ್ಲಿ ಪ್ರತಿವರ್ಷ ನಡೆಯುವ ಚಿತ್ರಸಂತೆ ಕುರಿತು. ಅದನ್ನು ನಮ್ಮೂರ ಸಂತೆ ಎಂದು ಅಭಿಮಾನದಿಂದ ಹೇಳಿಕೊಳ್ಳಬಹುದು. ನಾನು ಕೆಲಸ ಮಾಡುತ್ತಿದ್ದ 'ಹೊಸತು' ಕಚೇರಿ ಚಿತ್ರಕಲಾ ಪರಿಷತ್ತಿಗೆ ತೀರಾ ಸಮೀಪದಲ್ಲಿದೆ. ವಾರದಲ್ಲಿ ಎರಡು–ಮೂರು ದಿನ, ಹೊಸ ಕಲಾವಿದರ ಚಿತ್ರಪ್ರದರ್ಶನಗಳಿದ್ದಾಗ, ಗ್ಯಾಲರಿಗಳಲ್ಲಿ ಕಲಾದರ್ಶನ ಮಾಡಿಬರುವುದು ನನ್ನ ಹವ್ಯಾಸಗಳಲ್ಲೊಂದು. ಬೇರೆ ಬೇರೆ ಕಲಾವಿದರ ಚಿತ್ರಗಳನ್ನು ನೋಡುತ್ತ, ಚಿತ್ರಗಳನ್ನು ಹೇಗೆ ನೋಡಬೇಕೆಂಬುದನ್ನು ಕಲಿಯಲು ನನಗೆ ದೊರಕಿದ ಅವಕಾಶ ಅದು.

ಚಿತ್ರಕಲಾ ಪರಿಷತ್ತಿನ ವಾರ್ಷಿಕ ಹಬ್ಬವೇ ಚಿತ್ರಸಂತೆ. ಆದರದು ತೀರಾ ಇತ್ತೀಚಿನ ಇತಿಹಾಸ. ಅದು ಅಸ್ತಿತ್ವಕ್ಕೆ ಬಂದು ಇಪ್ಪತ್ತು ವರ್ಷಗಳಾಗಿರಬಹುದಷ್ಟೆ. ನನ್ನ ಕಣ್ಣ ಮುಂದೆ ಆಡಿ–ಬೆಳೆದ ಹುಡುಗ/ಹುಡುಗಿ – ಎನ್ನುತ್ತೇವಲ್ಲ ಹಾಗೆ! ಚಿತ್ರಸಂತೆ ಪ್ರಾರಂಭವಾದಂದಿನಿಂದ ಅದನ್ನು ಸಮೀಪದಿಂದ ಗಮನಿಸಿದ್ದೇನೆ. 'ಹೊಸತು' ವಿಶೇಷ ಸಂಚಿಕೆಗಳಲ್ಲಿ ಚಿತ್ರಸಂತೆ ಕುರಿತು, ವರ್ಣಚಿತ್ರಗಳ ಸಹಿತ ಒಂದು ಪುಟದ ಲೇಖನ ಪ್ರಕಟಿಸುವ ಅವಕಾಶವೂ ನನಗೆ ಒದಗಿತ್ತು.

ವರ್ಷಗಳು ಕಳೆದಂತೆ ಅದು ತನ್ನ ವೈವಿಧ್ಯತೆಯನ್ನೂ, ವ್ಯಾಪ್ತಿಯನ್ನೂ ಹೆಚ್ಚಿಸಿಕೊಂಡಿದೆ. ಅಲ್ಲಿ ಭಾಗವಹಿಸಲು ಬರುವ ಕಲಾವಿದರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತ ಬಂದಿದೆ. ಅಂತೆಯೇ ಅದರ ಜನಪ್ರಿಯತೆ ಸಹ. ಪ್ರತಿವರ್ಷ ಸರಾಸರಿ ೩೦–೩೫ ಕಲಾಶಾಲೆಗಳು, ಎರಡು ಸಾವಿರದಷ್ಟು ಕಲೆಗಾರರು ಸಂತೆಯಲ್ಲಿ ತಮ್ಮ ಚಿತ್ರಗಳನ್ನು ಪ್ರದರ್ಶನಕ್ಕಿಡುತ್ತಾರೆ ಮತ್ತು ಮಾರಾಟ ಮಾಡುತ್ತಾರೆ. ಕರ್ನಾಟಕದ ಎಲ್ಲ ಕಡೆಗಳಿಂದ ನೆರೆಯ ರಾಜ್ಯಗಳಾದ ತಮಿಳುನಾಡು, ಕೇರಳ, ಆಂಧ್ರಪ್ರದೇಶ, ಗೋವಾ, ಮಹಾರಾಷ್ಟ್ರಗಳಲ್ಲದೆ, ಬಂಗಾಳ, ಒಡಿಸಾ, ರಾಜಸ್ಥಾನ, ಹಿಮಾಚಲ ಪ್ರದೇಶಗಳಿಂದ ಕಲೆಗಾರರು ಭಾಗವಹಿಸುತ್ತಾರೆ. ಒಮ್ಮೆ ಆಸ್ಟ್ರೇಲಿಯಾದ ಕಲಾಕಾರರೊಬ್ಬರು ಭಾಗವಹಿಸಿದ್ದುಂಟು. ಈ ಪೈಕಿ ಹೆಸರಾಂತರು, ಹೊಸ ತಲೆಮಾರಿನವರು, ಮಹಿಳೆಯರು ಸೇರಿದ್ದಾರೆ. ಬಾಲ ಕಲಾವಿದರು ಸಹ ತಮ್ಮ ಪ್ರತಿಭೆಯನ್ನು ಮೆರೆಯುತ್ತಾರೆ. ಸಂತೆಗೆಂದು ಕುಮಾರಕೃಪಾದ ಇಡೀ ರಸ್ತೆಯನ್ನು ಮೀಸಲಿಡಲಾಗುತ್ತದೆ. ಅಂದು ವಾಹನಗಳು ಅತ್ತ ಸುಳಿಯುವುದಿಲ್ಲ. ಕುಮಾರಕೃಪಾ ರಸ್ತೆ ತೆರೆದ ಚಿತ್ರ ಗ್ಯಾಲರಿಯಾಗುತ್ತದೆ !




ಸಂತೆಯಲ್ಲಿ ತಿರುಗಾಡುತ್ತ ಅಂದವಾದ ಚೌಕಟ್ಟು ಹಾಕಿಸಿ ಪ್ರದರ್ಶನಕ್ಕಿಟ್ಟಿರುವ ಜಲವರ್ಣ, ತೈಲವರ್ಣ, ಪೆನ್ಸಿಲ್ ಸ್ಕೆಚ್, ಚಾರ್‌ಕೋಲ್ ಚಿತ್ರಗಳನ್ನು, ಮರದ ಕೆತ್ತನೆ, ಶಿಲಾಶಿಲ್ಪಗಳು, ಕಂಚು – ಹಿತ್ತಾಳೆ ಮೇಲೆ ಮೂಡಿಸಿದ ಉಬ್ಬು ಚಿತ್ರಗಳು, ಫೈಬರ್ ಗ್ಲಾಸ್ ಮಾಧ್ಯಮದ ಕೃತಿಗಳು, ಗಾಜಿನ ಮೇಲೆ ಚಿತ್ರಿಸಿರುವ ಮೈಸೂರು ಮತ್ತು ತಂಜಾವೂರು ಶೈಲಿಯ ಚಿತ್ರಗಳನ್ನು ನೋಡಬಹುದು. ಎಷ್ಟು ಬಗೆಯ ಚಿತ್ರಗಳು ! ನಿಮಗೆ ಮೆಚ್ಚಾದ ಕಲಾಕೃತಿಯನ್ನು ಖರೀದಿಸಬಹುದು. ರಸ್ತೆಯ ಎರಡೂ ಬದಿಯಲ್ಲಿ ನಿಮ್ಮನ್ನು ಆಕರ್ಷಿಸುವ ಬಗೆಬಗೆಯ ಚಿತ್ರಗಳ ಮಧ್ಯೆ ಸಾಗುತ್ತ ವರ್ಣ ಪೇಂಟಿಂಗ್, ದೇವರ ವೈಭವ, ಉಬ್ಬು ಚಿತ್ರ, ಕಡೆದ ಶಿಲ್ಪ, ಕೊರೆದ ಶಿಲ್ಪ, ಕೆತ್ತಿದ ಶಿಲ್ಪ, ರಂಬೆ ಊರ್ವಶಿಯರನ್ನು ನೋಡುತ್ತ ತಿರುಗಾಡಬಹುದು. ಬಿಸಿಲು ನಿಧಾನಕ್ಕೆ ಚುರುಕಾಗುವುದು ಸಹ ಗಮನಕ್ಕೆ ಬರುವುದಿಲ್ಲ.

ತಿರುಗಾಟ ಮುಂದುವರಿದಂತೆ, ಕಲೆಗಾರರು ಸೃಷ್ಟಿಸಿರುವ ಚಿತ್ರಸಂತೆಯೆಂಬ ಅದ್ಭುತಲೋಕದಲ್ಲಿ ಸಂಚರಿಸುತ್ತ, ನಮ್ಮ ಕಣ್ಣುಗಳು ಕಲೆಗಾರನ ಸೂಕ್ಷ್ಮ ಕಣ್ಣುಗಳಾಗಬಹುದು. ಚೌಕಟ್ಟುಗಳ ಬಂಧನವಿಲ್ಲದ, ನಡೆದಾಡುವ, ನಲಿದಾಡುವ, ಕುಣಿದಾಡುವ ಸಜೀವ ಚಿತ್ರಗಳನ್ನು ನೋಡಬಹುದು. ಒಂದು ಕ್ಯಾನ್ವಾಸಿನಲ್ಲಿ ನೀವೂ ಸೆರೆಸಿಕ್ಕಬಹುದು !

ಕಣ್ಣು ತಣಿಸುವ ಪ್ರಕೃತಿ ಚಿತ್ರಗಳು, ಬೆಳದಿಂಗಳ ತಣ್ಣಗಿನ ಬೆಳಕು, ಸೂರ್ಯಾಸ್ತ, ಸೂರ್ಯೋದಯ, ಮನೆಯ ಮುಂದೆ ಕುಳಿತ ಅಜ್ಜಿ, ಜಿಗಿದಾಡುವ ಹುಡುಗಿಯರು, ಎಮ್ಮೆ ಕಾಯುವ ಹುಡುಗ – ಹೀಗೆ ಅದೊಂದು ಜಗತ್ತು.

ಚಿತ್ರಸಂತೆಯಲ್ಲಿ ಒಂದು ಕಡೆ ಬಜ್ಜಿ, ಬೋಂಡಾ, ಚುರುಮುರಿ, ಸೊಪ್ಪು ಕಡಲೆಕಾಯಿ, ಸೌತೆ, ಮಾವಿನಕಾಯಿ ಚೂರುಗಳೂ ಅಲಂಕರಿಸಿಕೊಂಡು ನಿಮಗಾಗಿ ಕಾಯುತ್ತಿರುತ್ತವೆ !

ಸಂತೆಯಲ್ಲಿ ಮದರಂಗಿ ಕಲಾವಿದರಿರುತ್ತಾರೆ. ಅವರ ಎದುರು ಕೈ ಚಾಚಿ ಕುಳಿತಿರುವ ಆಧುನಿಕ ಯುವತಿಯರ ಗುಂಪು, ಮತ್ತೊಂದು ಕಡೆ ಭಾವಚಿತ್ರ ರಚಿಸಿಕೊಡುವ ಚಿತ್ರಗಾರ, ಅಲ್ಲಿಯೂ ಒಂದು ಗುಂಪು.

ಪ್ರದರ್ಶನಕ್ಕಿಟ್ಟಿರುವ ತಮ್ಮ ಚಿತ್ರಗಳ ಫೋಟೋ ತೆಗೆಯುವುದನ್ನು ಕೆಲವು ಮಂದಿ ಚಿತ್ರಕಾರರು ಆಕ್ಷೇಪಿಸುತ್ತಾರೆ. ಅವರ ಚಿತ್ರಗಳು ಅವರ ಸೃಷ್ಟಿಯ ಫಲ. ಅವುಗಳ ಹಕ್ಕು ಅವರಿಗೆ ಸೇರಿದ್ದು. ಛಾಯಾಚಿತ್ರಗಾರರು ತಮ್ಮ ಕೃತಿಗಳ ಪ್ರತಿಕೃತಿ ತಯಾರಿಸಿ ಮಾರಾಟ ಮಾಡಿಬಿಡುತ್ತಾರೆಂಬ ಅಂಜಿಕೆ ಅವರದು. ಇಂದಿನ ಮೊಬೈಲ್ ಕ್ಯಾಮರಾಗಳ ಯುಗದಲ್ಲಿ ಅವರ ಆಕ್ಷೇಪವನ್ನು ಯಾರೂ ಗಣನೆಗೆ ತೆಗೆದುಕೊಳ್ಳುವುದಿಲ್ಲ! ಪ್ರಾಯಶಃ ಅವರ ಆಕ್ಷೇಪ ನಿರರ್ಥಕ ಎನ್ನಬಹುದು.

ಹಿಂದೆ ಎಲ್ಲಿಯೋ ನೋಡಿರಬಹುದಾದ ಕೆಲವು ಚಿತ್ರಗಳು ಕಣ್ಣಿಗೆ ಬಿದ್ದಾಗ ನಿಮಗೆ ಆಶ್ಚರ್ಯವಾಗುತ್ತದೆ. ರಾಜಾ ರವಿವರ್ಮನ ಚಿತ್ರಗಳ ಯಥಾವತ್ ಪ್ರತಿಗಳು. ಪ್ರಸಿದ್ಧ ಚಿತ್ರಕಾರ ಕೃತಿಗಳನ್ನು ಯುವ ತಲೆಮಾರಿನವರು ಅನುಕರಣೆ ಮಾಡಿರುವ ಪ್ರಯತ್ನಗಳು ಅವು. ಹಾಗೆಯೇ 'ದೀಪಧಾರಿಣಿ' ಎಂಬ ಮತ್ತೊಂದು ಚಿತ್ರವೂ ಕಣ್ಣಿಗೆ ಬೀಳುತ್ತದೆ. ಕಲಾವಿದ ಇತರರನ್ನು ಅನುಕರಣೆ ಮಾಡಿಯೇ ತನ್ನದೇ ಶೈಲಿಯನ್ನು ರೂಪಿಸಿಕೊಳ್ಳುತ್ತಾನಷ್ಟೆ !

ಕಂಪ್ಯೂಟರ್ ಮಾಧ್ಯಮ ಬಳಸಿ, ಛಾಯಾಚಿತ್ರಗಳನ್ನು, ಹೊಸ ಅಮೂರ್ತ ಚಿತ್ರಗಳನ್ನು ರಚಿಸಿರುವ, ಅಥವಾ ಕಂಪ್ಯೂಟರ್ ಸಹಾಯದಿಂದ ರಚಿಸಲಾದ ಹೊಸದೊಂದು ಶೈಲಿಯ ಚಿತ್ರಗಳನ್ನು ಕಂಡಾಗ, ಕಲೆ ಹೇಗೆಲ್ಲ ಕವಲೊಡೆಯುತ್ತದೆ ಎಂದು ಆಶ್ಚರ್ಯವಾಗುತ್ತದೆ.

ಕೆಲವು ಖ್ಯಾತ ಕಲೆಗಾರರು ಸಂತೆಯಲ್ಲಿ ಅತ್ತಿತ್ತ ತಿರುಗಾಡುವಾಗ ನಿಮಗೂ ಅವರ ಪರಿಚಯ ಭಾಗ್ಯ ಲಭಿಸಬಹುದು. ಅರೆ ಅಷ್ಟು ಅದ್ಭುತ ಕಲೆಗಾರರು ಹೀಗೆ ನಮ್ಮಂತೆಯೇ ಸಾಧಾರಣರಾಗಿದ್ದಾರಲ್ಲ ಎಂದು ಆಶ್ಚರ್ಯವೂ ಆಗಬಹುದು !

ಕುಮಾರಕೃಪಾ ರಸ್ತೆಯಲ್ಲಿ, ಅದರೊಡನೆ ಸೇರಿಕೊಳ್ಳುವ ಕವಲು ರಸ್ತೆಗಳಲ್ಲಿಯೂ ಚಿತ್ರಸಂತೆ ಹರಡಿಕೊಂಡಿರುತ್ತದೆ. ಎಲ್ಲ ಕಡೆಗಳಿಂದ ಜನಸಾಗರ, ಪ್ರತಿಕ್ಷಣ ಜನರ ಸಂಖ್ಯೆ ಹೆಚ್ಚುತ್ತ ಸಲೀಸಾಗಿ ಹೆಜ್ಜೆ ಹಾಕಲು ತೊಡಕಾಗುತ್ತದೆ. ಆದರೂ ಚಿತ್ರಗಳ ಆಕರ್ಷಣೆ ನಿಮ್ಮನ್ನು ಸೆಳೆಯುತ್ತದೆ. ಜೊತೆಗೆ ಬಿಸಿಲಿನ ತಾಪವೂ ಹೆಚ್ಚಾಗುತ್ತದೆ.

ಒಂದು ಕಡೆ, ಕಲಾವಿದರೊಬ್ಬರ ಕುದುರೆ ಚಿತ್ರಗಳು, ನನ್ನನ್ನು ಆಕರ್ಷಿಸಿದವು. ಅವರ ತಾಯಿ ಸಹ ಅಲ್ಲಿದ್ದರು. ಫೋಟೋ ತೆಗೆಯಬಾರದು ಎಂಬ ಫಲಕ ಹಾಕಿದ್ದರಲ್ಲದೆ, ಕೈಯಲ್ಲಿ ಕ್ಯಾಮರಾ ಇದ್ದವರನ್ನು ಅವರು ದೂರಕ್ಕೆ ಅಟ್ಟುತ್ತಿದ್ದರು ! ಆತ ಪ್ರತಿಭಾವಂತ ಕಲೆಗಾರ ಎಂಬುದರಲ್ಲಿ ಅನುಮಾನವಿಲ್ಲ. ಅವರ ಚಿತ್ರದ ಬಗ್ಗೆ ನನ್ನ ಮೆಚ್ಚುಗೆ ವ್ಯಕ್ತಪಡಿಸಿದೆ. ಅವರ ಮುಖ ಸಂತೋಷದಿಂದ ಅರಳಿತು. ಕೊನೆಗೆ ಅವರಿಗೊಂದು ಯಡವಟ್ಟು ಪ್ರಶ್ನೆ ಕೇಳಿದೆ : 'ನೀವು ಕುದುರೆ ಚಿತ್ರಗಳನ್ನು ಬರೆದಿದ್ದೀರಲ್ಲ. ಚಿತ್ರ ಬರೆಯುವ ಮುಂಚೆ ಅದರ ಅನುಮತಿ ಪಡೆದಿದ್ದೀರಾ ?' ಅವರಿಗೆ ಇರುಸುಮುರುಸಾಯಿತು ! ಅವರ ಮುಖದಲ್ಲಿ ಪೆಚ್ಚು ಕಳೆ ! ಅಂಥ ಪ್ರಶ್ನೆಯನ್ನು ಅವರೂ ನಿರೀಕ್ಷಿಸಿರಲಿಲ್ಲ. ಕ್ಯಾಮರಾ ಹಿಡಿದಿದ್ದವರನ್ನು ಬೆದರಿಸಿ ಅಟ್ಟುತ್ತಿದ್ದ ಅವರಿಗೆ ಉತ್ತರಿಸಲಾಗದ ಪ್ರಶ್ನೆ ಹಾಕಿದ್ದೆ. ಆತ ಇನ್ನೂ ಯುವಕ. ಅವರಿಗೆ ಆ ಪ್ರಶ್ನೆ ಹಾಕಬಾರದಿತ್ತು ಎಂದುಕೊಂಡೆ !

ಬೆಂಗಳೂರಿನ ಡೆಕನ್ ಹೆರಾಲ್ಡ್ ಮತ್ತು ಪ್ರಜಾವಾಣಿ ಸಂಸ್ಥೆಯವರು, ಪ್ರತಿವರ್ಷ ಚಿತ್ರಸಂತೆಯಲ್ಲಿ, ಮಕ್ಕಳಿಗಾಗಿ ಸ್ಥಳದಲ್ಲೇ ಚಿತ್ರ ಬರೆಯುವ ಸ್ಪರ್ಧೆ ಏರ್ಪಡಿಸುತ್ತಾರೆ. ಗೆದ್ದವರಿಗೆ ಬಹುಮಾನಗಳನ್ನು, ಭಾಗವಹಿಸಿದ ಎಲ್ಲರಿಗೂ ಸರ್ಟಿಫಿಕೇಟುಗಳನ್ನು ನೀಡಿ ಪ್ರೋತ್ಸಾಹಿಸುತ್ತಾರೆ. ಚಿತ್ರಸಂತೆಯ ಗದ್ದಲದಲ್ಲಿ ಆ ಮಕ್ಕಳು ತಪಸ್ಸಿಗೆ ಕುಳಿತಂತೆ ಏಕಾಗ್ರತೆಯಲ್ಲಿ ಚಿತ್ರರಚನೆಯಲ್ಲಿ ತೊಡಗಿಕೊಂಡಿರುತ್ತವೆ.

ಭಾಗವಹಿಸಿದ ಅನೇಕರಿಗೆ ತಮ್ಮ ಚಿತ್ರಗಳನ್ನು ಮಾರಾಟ ಮಾಡಿದ ಸಂಭ್ರಮ, ಕೆಲವರಿಗೆ ನಿರಾಶೆ, ಮತ್ತೆ ಕೆಲವರ ಕೃತಿಗಳು ಲಕ್ಷಕ್ಕೆ ಮಾರಾಟವಾದ ಸುದ್ದಿಯನ್ನು ಮರುದಿನದ ಪತ್ರಿಕೆಗಳಲ್ಲಿ ಕಾಣಬಹುದು.

ಚಿತ್ರ – ಲೇಖನ : **ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೩ನೇ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭



# ದೊಡ್ಡ ಚಂದ್ರ – ಚಿಕ್ಕ ಚಂದ್ರ

**ಸೂ**ಪರ್‌ಮೂನ್ ಎಂದು ಸುದ್ದಿ ಮಾಡುವ ಚಂದ್ರ ತಿಂಗಳಿಗೊಮ್ಮೆ 'ಸೂಪರ್' ಆಗಲೇಬೇಕು. ಏಕೆಂದರೆ ಅದು ಒಂದು ನಿರ್ದಿಷ್ಟ ದಿನ ಭೂಮಿಯಿಂದ ಕನಿಷ್ಠ ದೂರದಲ್ಲಿರುತ್ತದೆ. ಅದೇ ದಿನ ಹುಣ್ಣಿಮೆಯಾದರೆ 'ಸೂಪರ್' ಎಂದರೆ ಗಾತ್ರದಲ್ಲಿ ಮತ್ತು ಪ್ರಕಾಶದಲ್ಲಿ ಗರಿಷ್ಠ ಮುಟ್ಟುತ್ತದೆ. ಆದರೆ ಗಾತ್ರದ ವ್ಯತ್ಯಾಸ ತಿಳಿಯುವುದಿಲ್ಲ. ಏಕೆಂದರೆ ಕಳೆದ ತಿಂಗಳ ಹುಣ್ಣಿಮೆಯಲ್ಲಿ ಇದಕ್ಕಿಂತ ಚಿಕ್ಕದಾಗಿತ್ತು ಎಂದು ಕಣ್ಣಳತೆಯಿಂದ ಊಹಿಸುವುದು ಕಷ್ಟ. ಈ ತಿಂಗಳಲ್ಲಿ ಇದರ ಪ್ರಾತ್ಯಕ್ಷಿಕೆಗೆ ಇನ್ನೊಂದು ಅವಕಾಶವಿದೆ. ೧೪ರ ಮುಂಜಾವಿನ ಚಂದ್ರನ ಚಿತ್ರ ತೆಗೆಯಿರಿ. ಇದು ಅರ್ಧ ಚಂದ್ರ. ಚಾಂದ್ರಮಾಸದ ಕೊನೆಯ ಪಾದ. ಪುನಃ ೨೮ರ ಸಂಜೆ ಚಿತ್ರ ತೆಗೆಯಿರಿ. ಇದೂ ಅರ್ಧ ಚಂದ್ರವೇ; ಆದರೆ ಚಾಂದ್ರಮಾಸದ ಮೊದಲ ಪಾದ. ಅದೇ ಕ್ಯಾಮೆರಾ, ಅದೇ ಝೂಮ್ ಇಟ್ಟು ತೆಗೆದು ಚಿತ್ರಗಳನ್ನು ಪಕ್ಕ ಪಕ್ಕದಲ್ಲಿಟ್ಟು ಹೋಲಿಸಿದಾಗ ಗಾತ್ರದ ವ್ಯತ್ಯಾಸ ಸ್ಫುಟವಾಗಿ ಕಾಣುತ್ತದೆ.

ಗ್ರಹಣ ಎಂದರೆ ಕಣ್ಣುಮುಚ್ಚಾಲೆ ಆಟ. ಒಂದರ ಹಿಂದೆ ಇನ್ನೊಂದು ಅವಿತಿಟ್ಟುಕೊಂಡು ಮರೆಯಾದಂತೆ ನಟಿಸಿ ಹೊರಬರುವ ಆಟ. ಆಗಸ್ಟ್‌ನಲ್ಲಿ ಚಂದ್ರಗ್ರಹಣ ಕಂಡೆವು. ಭೂಮಿಯ ನೆರಳಲ್ಲಿ ಚಂದ್ರನ ಒಂದಷ್ಟು ಭಾಗ ಕಾಣದಂತಾಗಿತ್ತು. ಸೂರ್ಯನೇ ಚಂದ್ರನ ಹಿಂದೆ ಅವಿತಿಟ್ಟುಕೊಂಡ ಪೂರ್ಣ ಸೂರ್ಯಗ್ರಹಣ ಅಮೆರಿಕಕ್ಕೆ ಮಾತ್ರವೇ ವಿಶೇಷ ಎನ್ನಿಸುವಷ್ಟು ಪ್ರಚಾರ ಪಡೆಯಿತು. ಈ ತಿಂಗಳಲ್ಲಿ ಮೂರು ಪುಟ್ಟ ಗ್ರಹಣಗಳಿವೆ. ಅಂದರೆ ಸೂರ್ಯನ ಪಾತ್ರವಿಲ್ಲ. ಶುಕ್ರ ಗ್ರಹವನ್ನು ಚಂದ್ರ ಮರೆ ಮಾಡುವುದು ೧೮ರಂದು. ನಾವು ಬೆಳಗಿನ ಜಾವ ಕಾಣುವಾಗ ಈ 'ಗ್ರಹಣ' (ಆಚ್ಛಾದನೆ ಎಂದು ಬೇರೊಂದು ಹೆಸರಿದೆ) ಮುಕ್ತಾಯವಾಗಿ ಹೋಗಿರುತ್ತದೆ. ಚಂದ್ರ ಮತ್ತು ಶುಕ್ರ ಹತ್ತಿರವಾಗಿ ಕಾಣುವುದರ ಚಿತ್ರ ತೆಗೆಯಬಹುದು. ಅದೇ ದಿನ ತುಸು ಸೂಕ್ಷ್ಮವಾಗಿ ಗಮನಿಸಿದರೆ ದಿಗಂತದ ಅಂಚಿನಲ್ಲಿ ಮಂಗಳ ಮತ್ತು ಬುಧ ಗ್ರಹಗಳೂ ಕಾಣುವುವು. ಮರುದಿನ ಚಂದ್ರ ಈ ಎರಡೂ ಗ್ರಹಗಳನ್ನು ಮುಚ್ಚಿಹಾಕುವುದಾದರೂ ನಮಗೆ ಆ ನೋಟ ಲಭ್ಯವಿಲ್ಲ. ಹೀಗೆ ಈ ತಿಂಗಳಲ್ಲಿ ಮೂರು ಪುಟ್ಟ ಗ್ರಹಣಗಳಲ್ಲದೆ ನಾಲ್ಕನೆಯದೂ ಒಂದಿದೆ. ಚಂದ್ರ ನೆಪ್ಚೂನ್ ಅನ್ನು ೬ರ ಮುಂಜಾವು ಮರೆ ಮಾಡುವುದು. ನೆಪ್ಚೂನ್ ಬರಿಗಣ್ಣಿಗೆ ಕಾಣುವ ಗ್ರಹ ಅಲ್ಲ. ಆದ್ದರಿಂದ ದೂರದರ್ಶಕ ಇರುವವರು ಮಾತ್ರ ಪ್ರಯತ್ನಿಸಬಹುದು. ಹುಣ್ಣಿಮೆಯ ಚಂದ್ರನ ಪ್ರಕಾಶದಲ್ಲಿ ಈ ಕ್ಷೀಣ ಚುಕ್ಕೆಯನ್ನು ಹುಡುಕುವುದು ಕಷ್ಟ.

ಈ ತಿಂಗಳಲ್ಲಿ ಇನ್ನೊಂದು ಆಟವನ್ನು ನೋಡಬಹುದು. ೨ ರಂದು ಮುಂಜಾವಿನಲ್ಲಿ ಮಂಗಳ ಮತ್ತು ಬುಧ ಗ್ರಹಗಳು ದಿಗಂತದ ಅಂಚಿನಲ್ಲಿ ಕೆಂಪು ಚುಕ್ಕೆಗಳಂತೆ ಕಾಣುತ್ತವೆ. ದಿನೇ ದಿನೇ ಅವುಗಳ ಸ್ಥಾನ ವ್ಯತ್ಯಾಸವಾಗುತ್ತದೆ. ೩ ಡಿಗ್ರಿಯಿಂದ ೪, ೫.... ಹೀಗೆ ಹೆಚ್ಚುತ್ತದೆ. ಆಮೇಲೆ ಪುನಃ ಒಂದನ್ನೊಂದು ಸಮೀಪಿಸುತ್ತವೆ. ೧೬ರಂದು ಅವುಗಳ ನಡುವಿನ ಅಂತರ ಒಂದು ಡಿಗ್ರಿಗೂ ಕಡಿಮೆ ಆಗುತ್ತದೆ. ಬುಧ ಗ್ರಹ ಮೇಲೇರಿ ಕೆಳಗಿಳಿದಂತೆ ಕಾಣುತ್ತದೆ. ಇದನ್ನು ಮೂರು ಆಯಾಮಗಳಲ್ಲಿ ಕಲ್ಪಿಸಿಕೊಂಡಾಗ ಅದು ಸೂರ್ಯನನ್ನು ಸುತ್ತುವ ಕಕ್ಷೆಯ ವ್ಯಾಸದ ಅರಿವು ಮೂಡುತ್ತದೆ.

ಶುಕ್ರ, ಮಂಗಳ, ಬುಧ ಈ ಮೂರೂ ಗ್ರಹಗಳು ಸತತವಾಗಿ ಚಲಿಸುತ್ತಿರುವುದರಿಂದ ಯಾವುದು ಮೇಲೆ ಯಾವುದು ಕೆಳಗೆ ಎಂಬ ಗೊಂದಲವಾಗುತ್ತದೆ. ಇದಕ್ಕಾಗಿ ಅವುಗಳ ನಡುವೆ ಇರುವ ಮಘ ನಕ್ಷತ್ರವನ್ನೇ ಆಧಾರ ಬಿಂದುವನ್ನಾಗಿ ಇಟ್ಟುಕೊಳ್ಳಬಹುದು. ಬುಧ ಗ್ರಹ, ಮೇಲೇರಿದಾಗ ಈ ನಕ್ಷತ್ರವನ್ನು ಸಮೀಪಿಸುವುದೇ ಗರಿಷ್ಠ ಕೋನ ಎಂದು ಅಂದಾಜಾಗಿ ಇಟ್ಟುಕೊಂಡು ಪುನಃ ಅದು ಕೆಳಗಿಳಿಯುವುದನ್ನು ಅಂದರೆ ಚಲನೆಯ ದಿಕ್ಕು ಬದಲಿಸುವುದನ್ನು ಗಮನಿಸಬಹುದು. ಅಲ್ಲಿಯವರೆಗೂ ಅದರ ಚಲನೆ 'ವಕ್ರ'ವಾಗಿತ್ತು. ೧೨ರಿಂದ ಮುಂದೆ ನೇರವಾಗುವುದು. ಅಂದರೆ ಸಿಂಹದಿಂದ ಕನ್ಯಾರಾಶಿಯತ್ತ ಚಲಿಸುವುದು. (ಇಲ್ಲಿಯವರೆಗೂ ಕನ್ಯಾದಿಂದ ಸಿಂಹದತ್ತ ಚಲಿಸುತ್ತಿತ್ತು). ಈ ತಿಂಗಳಲ್ಲಿ ಭೂಮಿ ತನ್ನ ಕಕ್ಷೆಯ ಮುಖ್ಯ ಹಂತವನ್ನು ದಾಟುತ್ತದೆ. ಅದೇ ಶರದ್ ವಿಷುವ. ಸೆಪ್ಟೆಂಬರ್ ೨೨ರಂದು. ಅಂದು ಹಗಲು ರಾತ್ರಿಗಳ ಅವಧಿ ಸಮ. ಬೇಸಗೆಯ ಮುಕ್ತಾಯ.

ಸಂಜೆಯ ಆಕಾಶದಲ್ಲಿ ಕಾಣುವ ಗ್ರಹಗಳು ಗುರು ಮತ್ತು ಶನಿ. ಗುರುವಿನ ಪಕ್ಕದ ಚುಕ್ಕೆಯೇ ಚಿತ್ರಾ. ಇದಕ್ಕೆ ಸ್ವಲ್ಪ ಉತ್ತರದಲ್ಲಿರುವ ಕೆಂಪು ನಕ್ಷತ್ರ ಸ್ವಾತಿ. ನೆತ್ತಿಯ ಮೇಲಿರುವ ಆಕಾಶ ಗಂಗೆಯ ವೈಭವವನ್ನು ನೋಡಲು (ಮೋಡಗಳು ಅನುವು ಮಾಡಿಕೊಟ್ಟರೆ) ಅತ್ಯುತ್ತಮ ಅವಕಾಶ. ತುಲಾ ಅಷ್ಟೇನೂ ಪ್ರಕಾಶಮಾನವಾಗಿಲ್ಲ. ಆದರೆ ವೃಶ್ಚಿಕ, ಧನು ಇವು ಆಕಾಶಗಂಗೆಯನ್ನು ತೋರಿಸಿಕೊಡುವ ಸುಂದರ ರಾಶಿಗಳು.

ಉತ್ತರಕ್ಕೆ ಹರ್‌ಕ್ಯುಲಿಸ್ (ಭೀಮ) ಅಲ್ಲದೆ ಉರಗಧರ (ಒಫ಼ಿಯೂಕಸ್) ಕೂಡ ಪ್ರಕಾಶಮಾನವಾಗಿದೆ. ರಾಜಹಂಸ (ಸಿಗ್ನಸ್), ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಇವುಗಳ ಪ್ರಖರ ನಕ್ಷತ್ರಗಳು ರೂಪಿಸುವ ಬೇಸಿಗೆ ತ್ರಿಕೋಣವೂ ಇದೆ.






೧೮ (ಮುಂಜಾವು)
ಶುಕ್ರ – ಚಂದ್ರ – ಮಘ – ಮಂಗಳ – ಬುಧ

**ಸೆಪ್ಟೆಂಬರ್ ಖಗೋಳ ದಿನಚರಿ**

೨ ಮಂಗಳ–ಬುಧ ಜೋಡಿ (ಮುಂಜಾವು)
೫ ಮಂಗಳ – ಮಘ ನಡುವೆ ಕನಿಷ್ಠ ಅಂತರ (ಮುಂಜಾವು)
ಗುರು – ಚಿತ್ರಾ ಜೋಡಿ (ಸಂಜೆ)
೬ ಹುಣ್ಣಿಮೆ – ೧೨:೩೩ಕ್ಕೆ
೧೦ ಬುಧ – ಮಘ ಜೋಡಿ (ಮುಂಜಾವು)
೧೨ ಬುಧಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು)
೧೩ ಚಾಂದ್ರಮಾಸದ ಕೊನೆಯ ಪಾದ ; ಚಂದ್ರ – ಭೂಮಿ ಕನಿಷ್ಠ ದೂರ
೧೬ ಮಂಗಳ – ಬುಧ ಜೋಡಿ (ಮುಂಜಾವು)
೧೮ ಶುಕ್ರ – ಚಂದ್ರ – ಮಘ ಪುಟ್ಟ ಗುಂಪು (ಆಚ್ಛಾದನೆ ಕಾಣುವುದಿಲ್ಲ)
೧೯ ಮಂಗಳ – ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)(ಮುಂಜಾವು)
ಬುಧ – ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)(ಮುಂಜಾವು)
೨೦ ಅಮಾವಾಸ್ಯೆ ೧೧:೦೦ ಗಂಟೆಗೆ
೨೨ ಗುರು – ಚಂದ್ರ ಜೋಡಿ (ಸಂಜೆ); ಶರದ್ ವಿಷುವ
೨೬ ಶನಿ – ಚಂದ್ರ ಜೋಡಿ (ಸಂಜೆ)
೨೭ ಚಾಂದ್ರ ಮಾಸದ ಮೊದಲ ಪಾದ
೨೮ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧

**ಎಂ. ಅಬ್ದುಲ್ ರೆಹಮಾನ್ ಪಾಷ**

ಈ ಟಿವಿ ಕನ್ನಡ ವಾಹಿನಿಗಾಗಿ ೧೯೯೯ರಲ್ಲಿ ನಾನು ೫೨ ಸಂಚಿಕೆಗಳ "ಚೂಟಿ ಚುರುಕು" ಎಂಬ ಜ್ಞಾನ–ವಿಜ್ಞಾನ ರಸಸಮಯ ಕಾರ್ಯಕ್ರಮ ಸರಣಿಯನ್ನು ನಡೆಸಿಕೊಟ್ಟಿದ್ದೆ. ಅದರಲ್ಲಿ ಪ್ರಮುಖವಾದ ಒಂದು ಅಂಗ "ಪ್ರಯೋಗ ರಂಜನಿ". ದೈನಂದಿನ ಬದುಕಿನಲ್ಲಿ ಅನುಭವಕ್ಕೆ ಬರುವ ಸಂಗತಿಯನ್ನೇ ಪ್ರಯೋಗವನ್ನಾಗಿ ಮಾಡಿ ತೋರಿಸಿ ಮಕ್ಕಳಿಗೆ ಅದರ ರಹಸ್ಯವನ್ನು ಕನ್ನಡದಲ್ಲಿ ವಿವರಿಸಿ ಹೇಳುವಂತೆ ಉತ್ತೇಜಿಸುವುದು. ಇಡೀ ಸರಣಿಗಾಗಿ ಒಟ್ಟು ೫೨ ಪ್ರಯೋಗಗಳನ್ನು ರೂಪಿಸಿದ್ದೆ. ಆಗ ನನಗೆ ಮಾದರಿ, ಸ್ಫೂರ್ತಿಯಾಗಿ ಇದ್ದದ್ದು ಕೇಂದ್ರ ದೂರದರ್ಶನದ "ಟರ್ನಿಂಗ್ ಪಾಯಿಂಟ್" ವಿಜ್ಞಾನ ಕಾರ್ಯಕ್ರಮ ಸರಣಿ.

ನೀಲಭ್ ಕೌಲ್ ಮತ್ತು ಇಂದ್ರನೀಲ್ ಕೌಲ್ ರಚಿಸಿದ್ದ, ಗಿರೀಶ್ ಕಾರ್ನಾಡ್, ನಾಸಿರುದ್ದೀನ್ ಷಾ, ಮಲ್ಲಿಕಾ ಸಾರಾಭಾಯಿ, ಮಹೇಶ್ ಭಟ್‌ರಂಥ ಮಾಧ್ಯಮದ ಅತಿರಥರು ನಿರೂಪಕರಾಗಿ ನಿರ್ವಹಿಸಿದ್ದ "ಟರ್ನಿಂಗ್ ಪಾಯಿಂಟ್" ಕಾರ್ಯಕ್ರಮದ ಪ್ರಮುಖ ಆಕರ್ಷಣೆಯೆಂದರೆ ಪ್ರೊ॥ ಯಶ್ ಪಾಲ್. ಅವರು ವಿಜ್ಞಾನವನ್ನು ಎಂಥವರಿಗೂ ಅರ್ಥವಾಗುವ ರೀತಿಯಲ್ಲಿ ಸರಳವಾಗಿಸಿ, ಸ್ವಾರಸ್ಯಕರವಾಗಿ ಹೇಳುವ ವಿಧಾನ ನನ್ನನ್ನು ಆಕರ್ಷಿಸಿತ್ತು. ಪ್ರತಿಯೊಂದು ಎಪಿಸೋಡು ಕೊನೆಯಲ್ಲಿ ದೇವರ ಭಯದಿಂದ ತತ್ತರಿಸುವ ಜನಸಾಮಾನ್ಯರಿಗೆ ಅದರ ಜಾಗದಲ್ಲಿ ವೈಜ್ಞಾನಿಕ ಮನೋವೃತ್ತಿಯನ್ನು ಬೆಳೆಸಿಕೊಳ್ಳಲು ಕರೆ ನೀಡುತ್ತಿತ್ತು. ವಿಜ್ಞಾನವನ್ನು ಮಾಧ್ಯಮಗಳಲ್ಲಿ ಜನಪ್ರಿಯಗೊಳಿಸುವ ಪ್ರೊ॥ ಯಶ್ ಪಾಲ್‌ರಂಥ ಕೆಲವೇ ಕೆಲವರನ್ನು ನೋಡಿ ಕಲಿತು, ಮಾಡಿದ್ದರ ಫಲವೇ ನನಗೂ ಕರ್ನಾಟಕ ಸರಕಾರದ ಶ್ರೇಷ್ಠ 'ವಿಜ್ಞಾನ ಸಂವಹನಕಾರ' ಪ್ರಶಸ್ತಿ ಲಭಿಸಲು ಕಾರಣವಾಗಿರಬೇಕು.

ಜಗದ್ವಿಖ್ಯಾತ ವಿಜ್ಞಾನಿ ಪ್ರೊ॥ ಯಶ್ ಪಾಲ್‌ರಲ್ಲಿ ನನಗೆ ಮಹತ್ವದ್ದಾಗಿ ತೋರಿದ ಇನ್ನೊಂದು ಗುಣ ಎಂದರೆ ಅವರ ಅಸ್ಖಲಿತ ವೈಜ್ಞಾನಿಕ ಮನೋವೃತ್ತಿ. ಬೀದಿ ಜಾದೂಗಾರರೂ ಮಾಡಲು ನಾಚುವ 'ಪವಾಡ'ಗಳನ್ನು ಮಾಡಿಯೇ ತನ್ನಲ್ಲಿ ದೈವಶಕ್ತಿಯಿದೆ ಎಂದು ತೋರಿಸಿಕೊಳ್ಳುತ್ತಿದ್ದ ಢೋಂಗೀ ದೇವಮಾನವ ಸಾಯಿಬಾಬಾರ ಕಾಲಿಗೆ ಬೀಳುವ, ಉಪಗ್ರಹ ಉಡಾವಣೆಗೆ ಮುನ್ನ ತಿರುಪತಿ ತಿಮ್ಮಪ್ಪನ ಅನುಗ್ರಹವನ್ನು ಬೇಡಲು ಸ್ವತಃ ದೇವಸ್ಥಾನಕ್ಕೆ ಹೋಗುವಂಥ ದೊಡ್ಡ ದೊಡ್ಡ ವಿಜ್ಞಾನಿಗಳ ಸಮೂಹದಲ್ಲಿ ಪ್ರೊ॥ ಯಶ್ ಪಾಲ್ ಒಬ್ಬ ಅಪರೂಪದ ವ್ಯಕ್ತಿ. ಇವರು ಘೋಷಿತ ನಾಸ್ತಿಕರಾಗಿದ್ದರು. ದೇವರುಗಳು, ಫಲಜ್ಯೋತಿಷ, ಧಾರ್ಮಿಕ ಆಚರಣೆಗಳನ್ನು ಅವರು ಅಪ್ಪಟ ಅವೈಜ್ಞಾನಿಕ ಎಂದು ಬಹಿರಂಗವಾಗಿ ತಿರಸ್ಕರಿಸುತ್ತಿದ್ದರು.

ವಿದ್ಯಾರ್ಥಿಗಳಲ್ಲಿ ಮತ್ತು ಜನಸಾಮಾನ್ಯರಲ್ಲಿ ವಿಜ್ಞಾನ ಸಾಕ್ಷರತೆ, ವಿಜ್ಞಾನ ಮಾಹಿತಿಯನ್ನು ಪ್ರಸಾರ ಮಾಡುತ್ತಿರುವಾಗಲೇ ಅದರ ಹಾಸುಹೊಕ್ಕಾಗಿ ವೈಜ್ಞಾನಿಕ ಮನೋವೃತ್ತಿಯನ್ನೂ ಬಿತ್ತುತ್ತಿದ್ದ ಪ್ರೊ॥ ಯಶ್ ಪಾಲ್ ಇಂಥ ನೂರಾರು

# ಶ್ರೇಷ್ಠ ವಿಜ್ಞಾನಿ, ವಿಜ್ಞಾನ ಸಂವಹನಕಾರ

# ಪ್ರೊ॥ ಯಶ್ ಪಾಲ್



ಮುಂದೆ ದೇಶದ ಬೆನ್ನೆಲುಬು ಆಗಬೇಕಾದ ಇಂದಿನ ಮಕ್ಕಳ ಬೆನ್ನಿನ ಮೂಳೆ ಮುರಿಯುವಷ್ಟು ಭಾರವನ್ನು ಹೇರುವುದನ್ನು ಕಂಡು ಪ್ರೊ॥ ಪಾಲ್ ಕಿಡಿಕಾರುತ್ತಿದ್ದರು. ಈ ಮಾತು ಎಳೆಯ ಮಕ್ಕಳು ಹೊರುವ ಬ್ಯಾಗಿನ ಬಗ್ಗೆಯಷ್ಟೇ ಅಲ್ಲ, ತರಗತಿಗಳಲ್ಲಿ ವಿಷಯಗಳನ್ನು ಕಲಿಸುವ ವಿಧಾನ, ಹೋಮ್ ವರ್ಕ್, ಪರೀಕ್ಷಾ ವಿಧಾನ ಎಲ್ಲವೂ ಮಕ್ಕಳ ಮನಸ್ಸಿನ ಮೇಲೆ ಸಲ್ಲದ ಒತ್ತಡವನ್ನು ಹೇರಿ ಶಾಲೆಯು ಶಿಕ್ಷಣಕ್ಕಿಂತ ಹೆಚ್ಚಾಗಿ ಶಿಕ್ಷೆಯಾಗಿ ಪರಿಣಮಿಸಿದೆ ಎಂಬ ಆಲೋಚನೆ. ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಅಡಿಯಲ್ಲಿ ೧೯೯೩ರಲ್ಲಿ ರಚಿಸಲಾಗಿದ್ದ ಸಮಿತಿಯ ಅಧ್ಯಕ್ಷ ಸ್ಥಾನದಿಂದ ಇವರು ಈ ಸಮಸ್ಯೆಗಳನ್ನೆಲ್ಲ ಅಧ್ಯಯನ ಮಾಡಿ 'ಲರ್ನಿಂಗ್ ವಿತೌಟ್ ಬರ್ಡನ್' ಎಂಬ ಮಹತ್ವದ ವರದಿಯನ್ನು ತಯಾರಿಸಿದರು. ಅಂತೆಯೇ ಎನ್‌ಸಿಇಆರ್‌ಟಿಯ ಸ್ಟಿಯರಿಂಗ್ ಸಮಿತಿಯ ಅಧ್ಯಕ್ಷರಾಗಿ ನ್ಯಾಷನಲ್ ಕರಿಕ್ಯುಲಮ್ ಫ್ರೇಮ್‌ವರ್ಕ್-೨೦೦೫ಅನ್ನು ರೂಪಿಸುವಲ್ಲಿ ಇವರು ಮಹತ್ವದ ಪಾತ್ರವನ್ನು ವಹಿಸಿದರು. ಇದರ ಪ್ರಕಾರ ಕಲಿಕೆ ಕೇವಲ ಪುಸ್ತಕದ ಬದನೇಕಾಯಿಯಾಗದೆ, ಎಲ್ಲವನ್ನೂ ಅವಲೋಕನ/ಅನುಭವ, ಚಟುವಟಿಕೆ, ಆವಿಷ್ಕಾರ ಮತ್ತು ಅರಿವು- ಈ ಸಜೀವ ಮಾರ್ಗದಲ್ಲಿ ಆಗುವಂತೆ ಶಾಲೆ ಮತ್ತು ಶಿಕ್ಷಕರು ಶ್ರಮ ಪಡಬೇಕು ಎಂಬ ಶಿಫಾರಸ್ಸು. ಆದರೆ ಮಕ್ಕಳಿಗೆ ವರದಾನವಾಗ ಬಹುದಾದ ಇಂಥ ಪದ್ಧತಿ ಜಾರಿಗೆ ಬರುವುದು ಇನ್ನೂ ಸಾಧ್ಯವಾಗಿಲ್ಲ.



ಕಾರ್ಯಕ್ರಮಗಳನ್ನು ನೀಡಿದ್ದಾರೆ. ಮಕ್ಕಳು ಕೇಳುವ ಪ್ರಶ್ನೆಗಳಿಗೆ ಅವರಿಗೆ ಅರ್ಥವಾಗುವ ರೀತಿಯಲ್ಲಿ ಹೇಳುವುದರಲ್ಲಿ ಪ್ರೊ॥ ಪಾಲ್ ಎತ್ತಿದ ಕೈ. 'ದ ಟ್ರಿಬ್ಯೂನ್' ಪತ್ರಿಕೆಯಲ್ಲಿ ಓದುಗರು ಕೇಳುವ ವಿಜ್ಞಾನ ಸಂಬಂಧಿ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದರು. ನಾನು ಇತ್ತೀಚೆಗೆ ಓದಿದ, ಅವರು ಮತ್ತು ಅವರ ವಿಜ್ಞಾನಿ ಮಗ ಪ್ರೊ॥ ರಾಹುಲ್ ಪಾಲ್ ಬರೆದ ಇಂಥ ಒಂದು ಪುಸ್ತಕ ಎಂದರೆ (ಎನ್‌ಬಿಟಿ ಪ್ರಕಾಶನದ) "ರ್‍ಯಾಂಡಮ್ ಕ್ಯುರಿಯಾಸಿಟಿ." ಇದು ಕನ್ನಡದಲ್ಲಿಯೂ ಪ್ರಕಟವಾಗಿದೆ. ಇಂಥ ಜಗದ್ವಿಖ್ಯಾತ ವಿಜ್ಞಾನಿ, ವಿಜ್ಞಾನ ಸಂವಹನಕಾರ, ಸಹೃದಯಿ ಪ್ರೊ॥ ಯಶ್ ಪಾಲ್ ತಮ್ಮ ೯೦ರ ವಯಸ್ಸಿನಲ್ಲಿ ಇತ್ತೀಚೆಗೆ ಜುಲೈ ೨೪, ೨೦೧೭ರಂದು ಉತ್ತರ ಪ್ರದೇಶದ ನೊಯ್ಡದಲ್ಲಿ ನಿಧನರಾದರು. ಇನ್ನೊಬ್ಬ ಮಹಾನ್ ವಿಜ್ಞಾನಿ ಪ್ರೊ॥ ಯು. ಆರ್. ರಾವ್ ಕೂಡ ಅಂದೇ ನಿಧನರಾಗಿದ್ದು ವಿಚಿತ್ರ ಆಕಸ್ಮಿಕ ಎನ್ನಬಹುದು!

ಈಗ ಪಾಕಿಸ್ತಾನದಲ್ಲಿರುವ ಝುಂಗ್ ಎಂಬಲ್ಲಿ ನವೆಂಬರ್ ೨೬, ೧೯೨೬ರಂದು ಜನಿಸಿದ ಯಶ್ ಪಾಲ್ ಭೌತವಿಜ್ಞಾನದಲ್ಲಿಯೇ ಶಿಕ್ಷಣವನ್ನು ಮುಂದುವರಿಸಿ ೧೯೫೮ರಲ್ಲಿ ಯುಎಸ್‌ಎ, ಬೋಸ್ಟನ್‌ನ ಮಸ್ಸಾಚುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಪಿಎಚ್.ಡಿ. ಪದವಿಯನ್ನು ಪಡೆದರು. ಭಾರತ ಸರಕಾರ ಇಸ್ರೋದ ಒಂದು ಅಂಗವಾಗಿ ೧೯೭೩ರಲ್ಲಿ ಅಹಮದಾಬಾದ್‌ನಲ್ಲಿ ಸ್ಪೇಸ್ ಅಪ್ಲಿಕೇಶನ್ ಸೆಂಟರ್‌ಅನ್ನು ಸ್ಥಾಪಿಸಿತು. ಭಾರತದ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ದುಡಿಸಿಕೊಳ್ಳಲು ಸಾಧ್ಯವಾಗುವಂತೆ ಉಪಗ್ರಹ ತಂತ್ರಜ್ಞಾನವನ್ನು ಒಗ್ಗಿಸುವುದು ಇದರ ಉದ್ದೇಶವಾಗಿತ್ತು. ಇದರ ಪ್ರಥಮ ನಿರ್ದೇಶಕರಾಗಿದ್ದ ಪ್ರೊ॥ ಯಶ್ ಪಾಲ್ ಮುಂಬಯಿಯ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸಂಸ್ಥೆಯಲ್ಲಿ ದೂರ ಸಂವೇದಿ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಲು ಭಾರತೀಯ ಯುವ ವಿಜ್ಞಾನಿಗಳ ಒಂದು ತಂಡವನ್ನು ಕಟ್ಟಿದರು. ಇಂಥ ಮುಂದುವರಿದ ತಂತ್ರಜ್ಞಾನದಲ್ಲಿ ಮೊದಲು ಯುಎಸ್‌ಎನಿಂದ ತರಬೇತಿ ಪಡೆಯುವುದು ಒಳ್ಳೆಯದಲ್ಲವೇ ಎಂಬ ಟೀಕೆ ಕೇಳಿಬಂತು. ಅದಕ್ಕೆ ಪ್ರೊ॥ ಪಾಲ್ 'ಕೇವಲ ಒಂದು ವರ್ಷದ ಹಿಂದೆಯಷ್ಟೆ ತಮ್ಮ ದೂರ ಸಂವೇದಿ ಉಪಗ್ರಹವನ್ನು ಹಾರಿಸಿದರಲ್ಲ ಅಮೆರಿಕನ್ನರು, ಅವರು ತಮ್ಮ ವಿಜ್ಞಾನಿಗಳನ್ನು ತರಬೇತಿಗಾಗಿ ಎಲ್ಲಿಗೆ ಕಳಿಸಿದ್ದರು?' ಎಂದು ಸವಾಲೆಸೆದಿದ್ದರು. ಭಾರತವನ್ನು ವಿಜ್ಞಾನ ತಂತ್ರಜ್ಞಾನ ಕ್ಷೇತ್ರದಲ್ಲಿ ಸ್ವಾವಲಂಬಿಯನ್ನಾಗಿ ಮಾಡುವ ಕನಸಿನ ಮೊದಲ ಹೆಜ್ಜೆ ಇದಾಗಿತ್ತು.

ಟಿಐಎಫ್‌ಆರ್‌ನಲ್ಲಿ ಬಹಳ ಕಾಲ ಪ್ರಾಧ್ಯಾಪಕರಾಗಿದ್ದ ಪ್ರೊ॥ ಪಾಲ್ ೧೯೮೩ರಲ್ಲಿ ಕೇಂದ್ರ ಸರಕಾರದ ಯೋಜನಾ ಆಯೋಗದ ಮುಖ್ಯ ಸಲಹಾಕಾರರಾಗಿದ್ದರು. ಮುಂದೆ, ವಿಜ್ಞಾನ ತಂತ್ರಜ್ಞಾನ ಇಲಾಖೆಯ ಕಾರ್ಯದರ್ಶಿ, ಯುಜಿಸಿಯ ಅಧ್ಯಕ್ಷರು, ನವ ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ಚಾನ್ಸಲರ್ – ಹೀಗೆ ಹಲವು ಉನ್ನತ ಹೊಣೆಗಾರಿಕೆಗಳನ್ನು ಅವರು ವಹಿಸಿಕೊಂಡಿದ್ದರು. ಉನ್ನತ ಶಿಕ್ಷಣದ ಕುರಿತು ಅವರಿಗೆ ಎಷ್ಟೊಂದು ಕಾಳಜಿ ಇತ್ತು ಎಂದರೆ, ೨೦೦೯ರಲ್ಲಿ 'ಛತ್ತೀಸ್‌ಘಡ್ ಖಾಸಗಿ ವಲಯ ವಿಶ್ವವಿದ್ಯಾಲಯ (ಸ್ಥಾಪನೆ ಮತ್ತು ವಿನಿಮಯನ) ಅಧಿನಿಯಮ, ೨೦೦೨ರ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಹೋರಾಡಿ ಗೆದ್ದ ಫಲವಾಗಿ ಯಾವುದೇ ಲಂಗುಲಗಾಮು ಇಲ್ಲದೆ ಈ ಅಧಿನಿಮಯದ ಅಡಿಯಲ್ಲಿ ಆಗಲೇ ಅಂಗಡಿಗಳನ್ನು ತೆರೆದಿದ್ದ ೧೧೨ ಖಾಸಗಿ ವಿಶ್ವವಿದ್ಯಾಲಯಗಳ ಶಟರುಗಳನ್ನು ಮುಚ್ಚಿಸುವಲ್ಲಿ ಪ್ರೊ॥ ಯಶ್ ಯಶಸ್ವಿಯಾದರು.

ಅಧಿಕ ಶಕ್ತಿ ಭೌತವಿಜ್ಞಾನ, ಕಾಸ್ಮಿಕ್ ಕಿರಣಗಳು, ಖಭೌತವಿಜ್ಞಾನ ಕ್ಷೇತ್ರಗಳಲ್ಲಿ ಜಾಗತಿಕ ಖ್ಯಾತಿಯ ವಿಜ್ಞಾನಿಯಾಗಿದ್ದ ಪ್ರೊ॥ ಯಶ್ ಪಾಲ್ ಉನ್ನತ ಭೌತವಿಜ್ಞಾನದ ಜನಪ್ರಿಯ ಪ್ರಾಧ್ಯಾಪಕರೂ ಆಗಿದ್ದರು. ವಿಶೇಷವೆಂದರೆ, ಅವರಿಗೆ ಭಾರತದ ಶಿಕ್ಷಣದ ಬಗ್ಗೆ ಇದ್ದ ಅನನ್ಯ ಕಾಳಜಿ. ೧೯೭೨ರಲ್ಲಿ ಮಧ್ಯಪ್ರದೇಶದ ಹೊಷಂಗಾಬಾದ್‌ನಲ್ಲಿ ವಿಕಾಸಗೊಂಡ 'ವಿಜ್ಞಾನ ಬೋಧನೆ ಕಾರ್ಯಕ್ರಮ' ನವೀನ ಪ್ರಯೋಗವಾಗಿತ್ತು. ಇದರಲ್ಲಿ ಪ್ರೊ॥ ಯಶ್ ಪಾಲ್ ಅವರ ಪಾತ್ರ ಬಹಳ ಮಹತ್ವದ್ದಾಗಿತ್ತು. ಮಕ್ಕಳು ತಮ್ಮ ಸುತ್ತಮುತ್ತಲ ಜಗತ್ತು ಮತ್ತು ವಿದ್ಯಮಾನಗಳಲ್ಲಿ ತೊಡಗಿಕೊಂಡು ಚಟುವಟಿಕೆಯ ಮೂಲಕವೇ ಕಲಿಯುವುದು; ಈ ಮೂಲಕ ವೈಜ್ಞಾನಿಕ ಮನೋವೃತ್ತಿಯನ್ನು ಬೆಳೆಸಿಕೊಂಡು ಬದುಕಿನುದ್ದಕ್ಕೂ ಸ್ವಕಲಿಕೆಯನ್ನು ಮಾಡುತ್ತಾ ಸಾಗುವ, ಜ್ಞಾನವನ್ನು ಸೃಷ್ಟಿಸುವ ಸ್ವವಿಶ್ವಾಸವುಳ್ಳ ವ್ಯಕ್ತಿಯಾಗಿ ಮಗು ಬೆಳೆಯಬೇಕು ಎನ್ನುವುದು ಈ ಕಾರ್ಯಯೋಜನೆಯ ಆಶಯವಾಗಿತ್ತು.

ಮುಂದೆ ದೇಶದ ಬೆನ್ನೆಲುಬು ಆಗಬೇಕಾದ ಇಂದಿನ ಮಕ್ಕಳ ಬೆನ್ನಿನ ಮೂಳೆ ಮುರಿಯುವಷ್ಟು ಭಾರವನ್ನು ಹೇರುವುದನ್ನು ಕಂಡು ಪ್ರೊ॥ ಪಾಲ್ ಕಿಡಿಕಾರುತ್ತಿದ್ದರು. ಈ ಮಾತು ಎಳೆಯ ಮಕ್ಕಳು ಹೊರುವ ಬ್ಯಾಗಿನ ಬಗ್ಗೆಯಷ್ಟೇ ಅಲ್ಲ, ತರಗತಿಗಳಲ್ಲಿ ವಿಷಯಗಳನ್ನು ಕಲಿಸುವ ವಿಧಾನ, ಹೋಮ್ ವರ್ಕು, ಪರೀಕ್ಷಾ ವಿಧಾನ ಎಲ್ಲವೂ ಮಕ್ಕಳ ಮನಸ್ಸಿನ ಮೇಲೆ ಸಲ್ಲದ ಒತ್ತಡವನ್ನು ಹೇರಿ ಶಾಲೆಯು ಶಿಕ್ಷಣಕ್ಕಿಂತ ಹೆಚ್ಚಾಗಿ ಶಿಕ್ಷೆಯಾಗಿ ಪರಿಣಮಿಸಿದೆ ಎಂಬ ಆಲೋಚನೆ. ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಅಡಿಯಲ್ಲಿ ೧೯೯೩ರಲ್ಲಿ ರಚಿಸಲಾಗಿದ್ದ ಸಮಿತಿಯ ಅಧ್ಯಕ್ಷ ಸ್ಥಾನದಿಂದ ಇವರು ಈ ಸಮಸ್ಯೆಗಳನ್ನೆಲ್ಲ ಅಧ್ಯಯನ ಮಾಡಿ 'ಲರ್ನಿಂಗ್ ವಿತೌಟ್ ಬರ್ಡನ್' ಎಂಬ ಮಹತ್ವದ ವರದಿಯನ್ನು ತಯಾರಿಸಿದರು. ಅಂತೆಯೇ ಎನ್‌ಸಿಇಆರ್‌ಟಿಯ ಸ್ಟಿಯರಿಂಗ್ ಸಮಿತಿಯ ಅಧ್ಯಕ್ಷರಾಗಿ ನ್ಯಾಷನಲ್ ಕರಿಕ್ಯುಲಮ್ ಫ್ರೇಮ್‌ವರ್ಕ್ – ೨೦೦೫ಅನ್ನು ರೂಪಿಸುವಲ್ಲಿ ಇವರು ಮಹತ್ವದ ಪಾತ್ರವನ್ನು ವಹಿಸಿದರು. ಇದರ ಪ್ರಕಾರ ಕಲಿಕೆ ಕೇವಲ ಪುಸ್ತಕದ ಬದನೇಕಾಯಿಯಾಗದೆ, ಎಲ್ಲವನ್ನೂ ಅವಲೋಕನ/ಅನುಭವ, ಚಟುವಟಿಕೆ, ಆವಿಷ್ಕಾರ ಮತ್ತು ಅರಿವು– ಈ ಸಜೀವ ಮಾರ್ಗದಲ್ಲಿ ಆಗುವಂತೆ ಶಾಲೆ ಮತ್ತು ಶಿಕ್ಷಕರು ಶ್ರಮಪಡಬೇಕು ಎಂಬ ಶಿಫಾರಸ್ಸು. ಆದರೆ ಮಕ್ಕಳಿಗೆ ವರದಾನವಾಗಬಹುದಾದ ಇಂಥ ಪದ್ಧತಿ ಜಾರಿಗೆ ಬರುವುದು ಇನ್ನೂ ಸಾಧ್ಯವಾಗಿಲ್ಲ.

ಪ್ರೊ॥ ಯಶ್ ಪಾಲ್ ಅವರಿಗೆ ೧೯೭೬ರಲ್ಲಿ ಪದ್ಮಭೂಷಣ ನೀಡಿ ಗೌರವಿಸಿದ್ದ ಭಾರತ ಸರಕಾರ ೨೦೧೩ರಲ್ಲಿ ಪದ್ಮವಿಭೂಷಣ ಪ್ರಶಸ್ತಿಯನ್ನು ನೀಡಿತು. ಇಂಡಿಯನ್ ನ್ಯಾಷನಲ್ ಸೈನ್ಸ್ ಅಕಾಡೆಮಿಯ ಫೆಲೋ ಆಗಿದ್ದರು. ಯುಎಸ್‌ಎಯ ಮಾರ್ಕೋನಿ ಫೌಂಡೇಷನ್ 'ಮಾನವ ಕುಲದ ಅಭ್ಯುದಯಕ್ಕಾಗಿ ಸಂವಹನದ ಕ್ಷೇತ್ರದಲ್ಲಿ ಮಾಡಿದ ಅಸಾಧಾರಣ ಕೊಡುಗೆ'ಗಾಗಿ ನೀಡುವ ಮಾರ್ಕೋನಿ ಫೆಲೋ ಗೌರವವೂ ಇವರಿಗೆ ಸಂದಿತು. ವಿಜ್ಞಾನವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಯುನೆಸ್ಕೋ ನೀಡುವ ಕಳಿಂಗ ಬಹುಮಾನ, ಇಂದಿರಾ ಗಾಂಧಿ ಬಹುಮಾನ, ಮೇಘನಾದ್ ಸಾಹಾ ಮೆಡಲ್ ಮತ್ತು ಸಾರ್ವಜನಿಕ ಆಡಳಿತ, ಶಿಕ್ಷಣ ಮತ್ತು ನಿರ್ವಹಣೆ ಕ್ಷೇತ್ರದಲ್ಲಿ ಸಾಧಿಸಿದ ಉತ್ತಮಿಕೆಗಾಗಿ ಭಾರತ ಸರಕಾರ ನೀಡುವ ಲಾಲ್ ಬಹಾದ್ದೂರ್ ಶಾಸ್ತ್ರಿ ಪ್ರಶಸ್ತಿ – ಹೀಗೇ ಬೆಳೆಯುತ್ತೆ ಪ್ರೊ॥ ಯಶ್ ಪಾಲ್‌ರಿಗೆ ಮನುಕುಲ ನೀಡಿದ ಗೌರವಗಳ ಯಾದಿ. ಪ್ರೊ॥ ಯಶ್ ಪಾಲ್ ಬದುಕಿನ ನುಡಿ, ಸಾಧನೆ ಭಾರತದ ವಿಜ್ಞಾನಿಗಳಿಗೆ, ವಿಜ್ಞಾನ ಸಂವಹನಕಾರರಿಗೆ ಒಂದು ಮಾದರಿ ಕೈಪಿಡಿಯಾಗಿದೆ.



**ಎಂ. ಅಬ್ದುಲ್ ರೆಹಮಾನ್ ಪಾಷ**
ನಂ. ೮೧/೩೭-೩, ೧೨ನೇ 'ಡಿ' ಮೇನ್, ಶಿವನಗರ
ಬೆಂಗಳೂರು – ೫೬೦ ೦೧೦



# ವರದಕ್ಷಿಣೆ ನಿಷೇಧ ಕಾಯಿದೆ ಮತ್ತು ಮಹಿಳೆ

**ಹೆಣ್ಣುಮಕ್ಕಳು ಸಂಪಾದಿಸುವವರಾದರೆ, ಆರ್ಥಿಕವಾಗಿ ಸಬಲರಾದರೆ ಅವರ ಮೇಲೆ ದೌರ್ಜನ್ಯಗಳು ನಡೆಯುವಲ್ಲಿ ಪ್ರಮಾಣ ಕಡಿಮೆ ಎಂಬ ಮಾತು ಕೇಳಿಬರುತ್ತದೆ. ವಾಸ್ತವದಲ್ಲಿ ಹೆಚ್ಚು ಹಿಂಸೆಗೊಳಗಾಗುವುದು ಆರ್ಥಿಕತೆ ಕಾರಣದಿಂದಾಗಿ ಎನ್ನುವುದು ಸಂದರ್ಶನ ಅವಧಿಯಲ್ಲಿ ಕಂಡುಬಂದಿದೆ. ಹೆಣ್ಣುಮಕ್ಕಳ ಮತ್ತು ಮಹಿಳೆಯರ ಉಳಿತಾಯಕ್ಕೆ ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳು ಸೃಷ್ಟಿಯಾದವು. ಆದರೆ ಉಳಿತಾಯ ಮಾಡಿದ ಹಣದ ಮೇಲಿನ ಅಧಿಕಾರ ಮಾತ್ರ ಗಂಡಸರ ಪಾಲಾಯಿತು. ಇನ್ನು ನೌಕರಿ ಅಂತೆಲ್ಲಾ ದುಡಿಯುತ್ತಿರುವ ಹೆಣ್ಣುಮಕ್ಕಳ ಹಾಗೂ ಮಹಿಳೆಯರ ಸಂಬಳ ಯಜಮಾನನ ಕೈಗಿಡಬೇಕು; ಇಲ್ಲಾ ಕುಟುಂಬಕ್ಕಾಗಿ ವ್ಯಯಿಸಬೇಕು. ದುಡಿಮೆ ಇಲ್ಲದಿರುವ, ವೈಧವ್ಯಕ್ಕೆ ಒಳಗಾಗಿರುವ ಮಹಿಳೆಯರು ಪರಾವಲಂಬಿತನಕ್ಕೆ ಒಳಗಾಗಿ ಬದುಕು ಸಾಗಿಸುವಂಥ ಹತ್ತು ಹಲವಾರು ನಿದರ್ಶನಗಳು ಕಂಡುಬರುತ್ತವೆ.**

**ಡಾ॥ ರೇಣುಕಾ ಎಸ್. ಮಂದ್ರೂಪ**

ವರದಕ್ಷಿಣೆ ಕೌಟುಂಬಿಕ ಹಿಂಸೆಯ ವ್ಯಾಪ್ತಿಯಲ್ಲಿ ಬರುವ ಒಂದು ಅಪರಾಧವಾಗಿದೆ. 'ವರದಕ್ಷಿಣೆ' ಎಂಬುದು ಒಂದು ಸಾಮಾಜಿಕ ಪಿಡುಗು. ಆರಂಭದ ದಿನಗಳಲ್ಲಿ ಮಗಳ ಸುಖ-ಸಂತೋಷಕ್ಕಾಗಿ, ಹರಸಿ ಹಿರಿಯರು ನೀಡುತ್ತಿದ್ದ 'ಉಡುಗೊರೆ'ಗಳು ಅನಂತರದಲ್ಲಿ ಬೇಡಿಕೆಯ ಸ್ವರೂಪ ಪಡೆದು ಕಡ್ಡಾಯವಾದವು.

ಡಾ॥ ಬಿ. ಆರ್. ಅಂಬೇಡ್ಕರ್ ಅವರು 'ಹಿಂದೂ ಕೋಡ್ ಬಿಲ್'ಅನ್ನು ಪಾರ್ಲಿಮೆಂಟಿನಲ್ಲಿ ಜಾರಿಗೆ ತರಲು ಸಾಧ್ಯವಾಗಲಿಲ್ಲವಾದುದರಿಂದ ಅದನ್ನು ಸಂವಿಧಾನದ ಮೂಲಕ ಜಾರಿಗೆ ತಂದರು. ರಚಿಸಲಾದ ಕಾನೂನುಗಳಿಂದಾಗಿ ಭಾರತ ಸಂವಿಧಾನದ ೧೫ನೇ ಕಲಮಿನಲ್ಲಿ ಹೇಳಿರುವ-ಧರ್ಮ, ಬುಡಕಟ್ಟು, ಜಾತಿ, ಲಿಂಗ ಅಥವಾ ಯಾವುದೇ ಒಂದರ ಆಧಾರದ ಮೇಲೆ ಸಮಾನ ಸ್ಥಿತಿಗಳುಳ್ಳ ಸ್ತ್ರೀ ಅಥವಾ ಪುರುಷನಿಗೆ ಯಾವ ಪಕ್ಷಪಾತವನ್ನೂ ಮಾಡುವಂತಿಲ್ಲ ಎಂಬ ಆದೇಶ ಇನ್ನಷ್ಟು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ಬಂದಿತು.

ನಂತರದ ದಿನಗಳಲ್ಲಿ ಪಾರ್ಲಿಮೆಂಟ್‌ನಲ್ಲಿ ಮಹಿಳೆಗೆ ಸಂಬಂಧಿಸಿದಂತೆ ನಾಲ್ಕು ಮಸೂದೆಗಳನ್ನು ಎರಡೂ ಸದನಗಳಲ್ಲಿ ಮಂಡಿಸಿ ಯಶಸ್ವಿಯಾದರು. ಹಿಂದೂ ವಿವಾಹ ಕಾನೂನು (೧೯೫೫), ಹಿಂದೂ ಉತ್ತರಾಧಿಕಾರ ಕಾನೂನು (೧೯೫೬), ಹಿಂದೂ ಅಪ್ರಾಪ್ತತೆ ಮತ್ತು ಪೋಷಕತ್ವ ಕಾನೂನು (೧೯೫೬), ಹಿಂದೂ ದತ್ತಕ ಮತ್ತು ಜೀವನಾಂಶ ಕಾನೂನು (೧೯೫೬), ಬಹುಪತ್ನಿತ್ವವನ್ನು ನಿಷೇಧಿಸಿ ಏಕಪತಿ-ಪತ್ನಿತ್ವವನ್ನು ಕಾನೂನುಬದ್ಧಗೊಳಿಸುವುದು ಹಿಂದೂ ಮ್ಯಾರೇಜ್ ಆ್ಯಕ್ಟ್, ಬಹುಪತ್ನಿತ್ವವನ್ನು ಅಪರಾಧವಾಗಿ ಪರಿಗಣಿಸಿದೆ. ಏಕಪತ್ನಿತ್ವಕ್ಕೆ ಹೆಚ್ಚು ಒತ್ತು ನೀಡಿದ ಅಂಬೇಡ್ಕರ್ ಅವರು ವಿವಾಹದ ಕುರಿತಾಗಿ ನೀಡಿದ ಎರಡು ರೀತಿಯ ವಿವಾಹ ಪದ್ಧತಿಗಳು ಮಹತ್ವಪೂರ್ಣವಾದುವಾಗಿವೆ. ಮೊದಲನೆಯದು ಪಾರಂಪರಿಕ ವಿವಾಹ ಪದ್ಧತಿ. ಎರಡನೆಯದು ನಾಗರಿಕ ವಿವಾಹ ಪದ್ಧತಿ. ಅಂತರ್‌ಜಾತಿಯ ವಿವಾಹ ಬಹಿಷ್ಕೃತವಲ್ಲ ಎಂದು ಏಕಪತ್ನಿತ್ವ ವ್ಯವಸ್ಥೆಯನ್ನು ಜಾರಿಗೊಳಿಸಿ, ಇದನ್ನು ಕಾನೂನು ಬದ್ಧಗೊಳಿಸಲಾಗಿದೆ. ಯಾವುದೇ ವ್ಯಕ್ತಿ ಮೊದಲನೆಯ ಪತ್ನಿ ಜೀವಂತವಿದ್ದು, ಅವಳಿಂದ ವಿಚ್ಛೇದನ ಪಡೆಯದೆ ಮರುವಿವಾಹವಾಗುವಂತಿಲ್ಲ. ಈ ರೀತಿಯ ವಿವಾಹಕ್ಕೆ ಕಾನೂನು ಮನ್ನಣೆ ಇರುವುದಿಲ್ಲ. ಈ ಕಾನೂನುಗಳು ಸಂವಿಧಾನಾತ್ಮಕವಾಗಿ ಹಾಗೂ ಸಾಮಾಜಿಕವಾಗಿ ಮಹಿಳೆಯರ ವ್ಯಕ್ತಿತ್ವ ನಿರ್ಮಾಣಕ್ಕೆ ಅವಕಾಶ ಕಲ್ಪಿಸಿಕೊಟ್ಟವು. ಸ್ತ್ರೀಯರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿ ಸುಧಾರಿಸದೆ ಯಾವುದೇ ದೇಶದ ಸರ್ವಾಂಗೀಣ ಅಭಿವೃದ್ಧಿ ಅಸಾಧ್ಯವೆಂಬುದು ಡಾ॥ ಅಂಬೇಡ್ಕರ್ ಅವರ ಅಭಿಪ್ರಾಯವಾಗಿತ್ತು.

ಕರ್ನಾಟಕ ರಾಜ್ಯದಲ್ಲಿ 'ವರದಕ್ಷಿಣೆ ಸಾವು' ಕುರಿತು ಹೇಳುವುದಾದರೆ, "ಶೇ. ೯.೩ರಷ್ಟು ಮೊದಲ ಸ್ಥಾನದಲ್ಲಿ ಗುಲ್ಬರ್ಗ, ಶೇ. ೭.೮ರಷ್ಟು ರಾಜಧಾನಿ ಬೆಂಗಳೂರು ಎರಡನೆಯ ಸ್ಥಾನದಲ್ಲಿದ್ದರೆ, ಶೇ. ೫ರಷ್ಟು ಬೀದರ್ ಮೂರನೇ ಸ್ಥಾನದಲ್ಲಿದೆ. ಇನ್ನು ಉತ್ತರಕನ್ನಡ ಹಾಗೂ ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ಶೇ. ೧ರಷ್ಟು ಪ್ರಕರಣಗಳು ದಾಖಲಾಗುತ್ತಿದ್ದು, ಶೇ. ೦.೫ರಷ್ಟು ಅತಿ ಕಡಿಮೆ ಪ್ರಕರಣಗಳು ಕೊಡಗು ಜಿಲ್ಲೆಯಲ್ಲಿ ದಾಖಲಾಗಿರುವುದು ಕಂಡುಬರುತ್ತದೆ" (ಪ್ರಜಾವಾಣಿ ೨೦೧೪).

ವರದಕ್ಷಿಣೆ ೨೦ನೇ ಶತಮಾನದಲ್ಲಿ ಸಾಮಾಜಿಕ ಪಿಡುಗಾಗಿ ರೂಪುಗೊಂಡಿತ್ತು. ೧೯೭೫ರ ಅಂತರರಾಷ್ಟ್ರೀಯ ಮಹಿಳಾ ವರ್ಷದ ನಂತರದಲ್ಲಿ ಮಹಿಳಾ

ಚಳುವಳಿಯು ಹಲವಾರು ಮುಖ್ಯ ವಿಷಯಗಳಲ್ಲಿ ಒಂದಾದ ವರದಕ್ಷಿಣೆಯ ವಿರುದ್ಧ ಮೊದಲ ಸಂಘಟಿತ ಮಹಿಳಾ ಪ್ರತಿಭಟನೆಯು ೧೯೭೫ರಲ್ಲಿ ಹೈದರಾಬಾದಿನ ಮಹಿಳಾ ಪ್ರಗತಿಪರ ಸಂಘಟನೆಯ ನೇತೃತ್ವದಲ್ಲಿ ಜರುಗಿತು. ದೇಶದಲ್ಲಿ ತುರ್ತುಪರಿಸ್ಥಿತಿ ಜಾರಿಗೊಂಡಿದ್ದರಿಂದ ಹೋರಾಟ ಮುಂದುವರಿಯಲಿಲ್ಲ. ತುರ್ತುಪರಿಸ್ಥಿತಿ ಕೊನೆಗೊಂಡ ಅನಂತರದಲ್ಲಿ ವರದಕ್ಷಿಣೆ ವಿರುದ್ಧದ ಆಂದೋಲನ ಆರಂಭಗೊಂಡಿತು. ಈ ಆಂದೋಲನದಲ್ಲಿ ವರದಕ್ಷಿಣೆಗೆ ಬಲಿಯಾಗುತ್ತಿದ್ದ ಹೆಣ್ಣುಮಕ್ಕಳಿಗೆ ನೀಡುವ ಕಿರುಕುಳ, ವರದಕ್ಷಿಣೆಯ ಸಾವು ಹಾಗೂ ಆತ್ಮಹತ್ಯೆಗಳಂತಹ ವಿಚಾರಗಳ ಕುರಿತಾಗಿ ಜನರ ಅಭಿಪ್ರಾಯ ರೂಪಿಸುವಿಕೆ ಹಾಗೂ ಕಾನೂನು ರಚಿಸುವುದರ ಬಗೆಗೆ ಒತ್ತಾಯ ಮಾಡಲಾಯಿತು.



ಭಾರತೀಯ ದಂಡಸಂಹಿತೆಯ ೩೦೪ ಬಿ ಕಲಮಿನಲ್ಲಿ ಹೇಳಿರುವಂತೆ ವರದಕ್ಷಿಣೆ ಸಾವು ನಡೆದಿರುವುದು ಸಾಬೀತಾದಲ್ಲಿ, ಆ ಮಹಿಳೆಯನ್ನು ಕ್ರೂರವಾಗಿ ಕೊಲೆ ಮಾಡಿದ್ದಲ್ಲಿ, ಅಪರಾಧಿಗೆ ವಿಧಿಸಬಹುದಾದ ಏಳು ವರ್ಷಗಳ ಗರಿಷ್ಠ ಶಿಕ್ಷೆಯನ್ನು ಜೀವಾವಧಿ ಶಿಕ್ಷೆಯನ್ನಾಗಿ ತಿದ್ದುಪಡಿ ಮಾಡಲು ನ್ಯಾಯಾಲಯ ಆದೇಶ ಮಾಡಿತ್ತು. ಬರೀ ಆದೇಶವಾದರೆ ಸಾಲದು, ಅದನ್ನು ಅನುಷ್ಠಾನ ಗೊಳಿಸುವುದಾದರೆ ನಿಜಕ್ಕೂ ವರದಕ್ಷಿಣೆ ಸಾವುಗಳನ್ನು ಸ್ವಲ್ಪಮಟ್ಟಿಗಾದರೂ ಕಡಿಮೆಗೊಳಿಸುವುದು ಸಾಧ್ಯವಾಗುತ್ತದೆ. ಆದರೆ ಉಳ್ಳವರು ತಮ್ಮ ಪ್ರತಿಷ್ಠೆಗಾಗಿ ಕಾರು, ಸೈಟುಗಳನ್ನು ನೀಡಲು ಮುಂದಾಗುತ್ತಾರೆ. ವರದಕ್ಷಿಣೆಯಾಗಿ ಅಲ್ಲ, ಕಾಣಿಕೆಯಾಗಿ. ಇಂಥ ಕಾಣಿಕೆಗಳೇ ಒಮ್ಮೊಮ್ಮೆ ಉರುಳಾಗುವುದುಂಟು. ಯೋಗ್ಯತೆ ಇಲ್ಲದ ಅಳಿಯ ತನ್ನ ಹೆಂಡತಿಯನ್ನು ಎದುರಿಗಿರಿಸಿಕೊಂಡು ಆಟವಾಡಲು ಸುಲಭ ಸಾಧ್ಯವಾಗಿಬಿಡುತ್ತದೆ. ಅಳಿಯನ ಯೋಗ್ಯತೆ ಅರಿತೂ ಆತ ಕೇಳಿದ್ದನ್ನು ಕೊಡಲು ಮುಂದಾಗುತ್ತಿರುವ ಹೆತ್ತವರನ್ನು ನೋಡಿದರೆ, ಮೊದಲು ಹೆತ್ತವರಿಗೆ ತರಬೇತಿ, ಅರಿವು, ತಿಳುವಳಿಕೆ ಮೂಡಿಸುವುದು ಅಗತ್ಯವೆನಿಸುತ್ತದೆ.

ವರದಕ್ಷಿಣೆ ಕಾರಣದಿಂದ 'ವಿವಾಹ' ಎನ್ನುವುದು ಎರಡು ಮನೆತನಗಳ ಹೊಂದಾಣಿಕೆಯಾಗಿರದೆ ಕೇವಲ ಎರಡು ಕುಟುಂಬಗಳ ಪ್ರತಿಷ್ಠೆಯಾಗುತ್ತಿದೆ. ಇಲ್ಲಿ ಮನೆತನದ ಗೌರವ, ಪ್ರತಿಷ್ಠೆಯ ಸಂಕೋಲೆಗೆ ಸಿಲುಕುವುದು ಹೆಣ್ಣೇ ಆಗಿರುತ್ತಾಳೆ. 'ವರದಕ್ಷಿಣೆ' ಹೆಣ್ಣುಮಕ್ಕಳಿಗೆ ಸಿಗುವುದಿಲ್ಲ, ವರನಿಗೆ ಸಿಗುತ್ತದೆ. ಪಿತ್ರಾರ್ಜಿತ ಆಸ್ತಿಯ ಹಕ್ಕು ಇದೆ. ಅದು ಅನುಷ್ಠಾನಗೊಳ್ಳುತ್ತಿಲ್ಲ. ಅವಳ ಆಸ್ತಿ ಹಕ್ಕೇನಾದರೂ ಇದ್ದರೆ ಅದು ಕೇವಲ ಪತ್ರಗಳಲ್ಲಿ, ಕಾನೂನುಗಳಲ್ಲಿ. ಹೆಣ್ಣುಮಕ್ಕಳು ಸೂಕ್ಷ್ಮ ಮನಸ್ಕರಾಗಿದ್ದು, ಮನೆಯ ಕಷ್ಟ – ಸುಖಗಳನ್ನು ಅರ್ಥಮಾಡಿಕೊಳ್ಳುವ ವರಾದುದರಿಂದ ಬಾಯಿ ಬಿಟ್ಟು ಆಸ್ತಿ ಕೇಳುವುದಿಲ್ಲ. ಕೇಳಿದರೆ ಎಲ್ಲಿ ತವರುಮನೆಯ ಸಂಬಂಧ ಕಡಿದುಹೋಗುವುದೋ ಎಂಬ ದ್ವಂದ್ವ ಮನಃಸ್ಥಿತಿಗೆ ಒಳಗಾಗಿ ಆಸ್ತಿ ಕೇಳದೆ ಇರುವವರ ಸಂಖ್ಯೆಯೇ ಹೆಚ್ಚಿದೆ. ಇತ್ತೀಚೆಗೆ ಹೆಣ್ಣುಮಕ್ಕಳಿಗೂ ಆಸ್ತಿಯ ಹಕ್ಕು ನೀಡುವ ಕಾನೂನು ರಚನೆಯಾಗಿದೆ, ಬದಲಾದ ರಾಜಕೀಯ ನಿರ್ಧಾರಗಳನ್ನು ಮತ್ತು ಕಾನೂನನ್ನು ಉಲ್ಲೇಖಿಸಿ. ಆದರೆ ಪೂರ್ಣ ಪ್ರಮಾಣದಲ್ಲಿ ಹೆಣ್ಣುಮಕ್ಕಳಿಗೆ ಆಸ್ತಿ ದಕ್ಕುತ್ತಿಲ್ಲ. ನಾವಿನ್ನೂ ಹೆಣ್ಣನ್ನು ಗಂಡಿಗಿಂತ ಉನ್ನತವಾಗಿ ಕಾಣುವುದನ್ನು ಅಥವಾ ಸಮಾನವಾಗಿ ನೋಡುವುದನ್ನು ಕಲಿಯದ ಕಾರಣ ಕಾನೂನು ಅನುಷ್ಠಾನ ಕ್ಲಿಷ್ಟವಾಗಿದೆ. 'ವರದಕ್ಷಿಣೆ ಪಡೆಯುವ–ಕೊಡುವ' ವಿಷಯ ಕುರಿತು ತರಗತಿಗಳಲ್ಲಿ ವಿದ್ಯಾರ್ಥಿನಿಯರನ್ನು ಕೇಳಲಾಗಿ, ಒಟ್ಟು ೨೧೦ ವಿದ್ಯಾರ್ಥಿನಿಯರಲ್ಲಿ ೧೬೩ ವಿದ್ಯಾರ್ಥಿನಿಯರು 'ವರದಕ್ಷಿಣೆ ಬೇಡ', ೪೭ ವಿದ್ಯಾರ್ಥಿನಿಯರು 'ವರದಕ್ಷಿಣೆ ಬೇಕು' ಎಂಬ ಅಭಿಪ್ರಾಯ ಹೊಂದಿರುವುದು ಕಂಡುಬಂದಿತು. 'ವರದಕ್ಷಿಣೆ ಬೇಡ' ಎಂದು ವಿದ್ಯಾರ್ಥಿನಿಯರು ತಿಳಿಸಿದರಾದರೂ ಹೆತ್ತವರು ಅದಕ್ಕೆ ಒಪ್ಪುವುದಿಲ್ಲ. ಕುಟುಂಬಗಳಲ್ಲಿ ಬದಲಾವಣೆ ಮನಃಸ್ಥಿತಿ ಬರಬೇಕು, ಶಿಕ್ಷಣ, ಉದ್ಯೋಗ, ವಿವಾಹದ ಪದ್ಧತಿಗಳಲ್ಲಿ ಬದಲಾವಣೆ, ವಿವಾಹಕ್ಕೆ ಮುಕ್ತವಾದ ಆಯ್ಕೆಯ ಸ್ವಾತಂತ್ರ್ಯ ನೀಡಿದರೆ ಮಾತ್ರ 'ವರದಕ್ಷಿಣೆ' ಪದ್ಧತಿಯನ್ನು ಹೋಗಲಾಡಿಸಬಹುದು ಎಂಬ ನಿಲುವನ್ನು ತಿಳಿಸಿದರು. ಇನ್ನು 'ಬೇಕು' ಎಂದವರು ವರದಕ್ಷಿಣೆ ಕೊಡುವುದರಿಂದ ಗಂಡನ ಮನೆಯಲ್ಲಿ ತಮಗೆ ಗೌರವ ಸಿಗುತ್ತದೆ, ತಮ್ಮನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ ಎಂಬುದಾಗಿತ್ತು. 'ಬೇಕು–ಬೇಡ'ಗಳನ್ನು ಗಮನಿಸಿದಾಗ 'ಬೇಕು' ಎಂದ ವಿದ್ಯಾರ್ಥಿನಿಯರು ಗಟ್ಟಿ ನಿಲುವನ್ನು ಹೊಂದಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. 'ಬೇಡ' ಎಂಬುವುದರಲ್ಲಿ ಎಲ್ಲೋ ಒಂದು ಕಡೆ ಪಿತೃಪ್ರಧಾನ ವ್ಯವಸ್ಥೆಯಿಂದ ಹೊರಬರುವ ಪ್ರಯತ್ನ ಮಾಡುತ್ತಿಲ್ಲವೋ ಅಥವಾ ಸಾಧ್ಯವಾಗುತ್ತಿಲ್ಲವೋ ಎಂಬ ಮನಃಸ್ಥಿತಿಗೆ ಒಳಗಾಗಿರುವುದರ ಚಿತ್ರಣ ಕಾಣಸಿಗುತ್ತದೆ. ಪುರುಷ ಪ್ರಧಾನ ಸಂಸ್ಕೃತಿಗೆ ಒಳಗಾಗಿಯೇ ಬದುಕಬೇಕೆಂಬ ತಲ್ಲಣ ಅವರಿಗೆ ಕಾಡದೆ ಇರದು. ಹೀಗಾಗಿ ಕುಟುಂಬ ವ್ಯವಸ್ಥೆ ಎನ್ನುವುದು ನಮ್ಮ 'ಬದಲಾವಣೆಗೂ–ಒಳಗಾಗುವಿಕೆಗೂ' ಕಾರಣವಾಗುವುದೆಂಬುದು ಮೇಲಿನ ಉದಾಹರಣೆಯಿಂದ ತಿಳಿಯಬಹುದು. ಆದುದರಿಂದ ಸಾಮಾಜೀಕರಣ ಪ್ರಕ್ರಿಯೆ ಮೂಲದಲ್ಲಿಯೇ ಕುಟುಂಬ ವ್ಯವಸ್ಥೆಯಲ್ಲಿ 'ಗಂಡು–ಹೆಣ್ಣು'ಮಕ್ಕಳನ್ನು ಬೆಳೆಯುವ ಹಂತದಲ್ಲಿಯೇ 'ಲಿಂಗತ್ವ ಸೂಕ್ಷ್ಮತೆ' ಅರಿವು ಮೂಡಿಸಬೇಕಾಗಿರುವುದು ಇಂದಿನ ಮುಖ್ಯ ಅಗತ್ಯತೆಗಳಲ್ಲಿ ಒಂದು.

ರಾಜರ ಆಳ್ವಿಕೆಗಳಲ್ಲಿಯೂ 'ವರದಕ್ಷಿಣೆ' ರೂಢಿಯಲ್ಲಿತ್ತು. ಭಾರತ ಸರ್ಕಾರ ೧೯೬೧ರಲ್ಲಿ 'ವರದಕ್ಷಿಣೆ ನಿಷೇಧ ಕಾಯಿದೆ'ಯನ್ನು ಜಾರಿಗೆ ತಂದಿತು. ೧೯೮೩–೮೪ರಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಲಾಯಿತು. ಈ ಕಾಯಿದೆ ಪ್ರಕಾರ ವರದಕ್ಷಿಣೆ 'ಕೊಡುವುದು ಮತ್ತು ತೆಗೆದುಕೊಳ್ಳುವುದು' ಅಪರಾಧ. ವಿವಾಹವಾಗಿ ಏಳು ವರ್ಷಗಳ ಒಳಗಿನ ಸಾವನ್ನು ಹೆಣ್ಣಿನ ಅಸಹಜ ಸಾವೆಂದು, ಇದಕ್ಕೆ ಕಾರಣರಾದವರನ್ನು ಶಿಕ್ಷೆಗೊಳಪಡಿಸಲಾಗುತ್ತದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಅಸ್ತಿತ್ವವನ್ನು ಹಗುರವಾಗಿ ಕಂಡಿರುವುದರಿಂದ ವಸಾಹತು ಕಾಲದ 'ಸತಿಪದ್ಧತಿ'ಯಂತೆ ಆಧುನಿಕ ಸಂದರ್ಭದಲ್ಲಿ ಈ ಪದ್ಧತಿಯಿಂದ ಅಸಹಜ ಸಾವಿಗೆ ಬಲಿಯಾಗುತ್ತಿದ್ದಾರೆ. ಕೃಷಿ ವಲಯದಲ್ಲಿ ಹೆಣ್ಣು ಆರ್ಥಿಕ ಚಟುವಟಿಕೆಯ ಭಾಗವಾಗಿದ್ದಳು. ಮನೆಯ ಸಂಪನ್ಮೂಲಗಳನ್ನು ಹೆಚ್ಚಿಸುತ್ತಿದ್ದಳು. ಹೀಗಾಗಿ ಅದು ಕೃಷಿಕ ಸಮಾಜದಲ್ಲಿ ಮಾನ್ಯವಾಗಿತ್ತು. ವಿವಾಹ ಸಂದರ್ಭದಲ್ಲಿ ಉಡುಗೊರೆ ನೀಡುವ ಪದ್ಧತಿ ಅನಂತರದಲ್ಲಿ ಬಂದು ಚಾಲ್ತಿಯಲ್ಲಿದ್ದ ಇಂಗ್ಲಿಷ್ ಮೂಲಕ ನೌಕರಶಾಹಿ ವರ್ಗದ ಉಗಮವಾದಂತೆ 'ವರದಕ್ಷಿಣೆ'ಯ ಸ್ವರೂಪದಲ್ಲಿ ಬದಲಾವಣೆ ಹೊಂದಿ, ಪಿತೃಪ್ರಧಾನ ಸಂಸ್ಕೃತಿಯ ಆಶಯದಂತೆ ಪರ್ಯಾಯ ರೂಪ ಪಡೆಯಿತು. ವರದಕ್ಷಿಣೆ ದುಪ್ಪಟ್ಟಾಗಿ, ಬೇರೆ – ಬೇರೆ ರೂಪಗಳಲ್ಲಿ ವಿಸ್ತಾರಗೊಂಡಿದೆ.



# ಲೇಡೀಸ್ ವೆಹಿಕಲ್






**ಮಾ**ರಲು ಇಷ್ಟವಿಲ್ಲ ಖರೆ,
ಹಾಗಂತ ಎಷ್ಟು ಕಾಲ ಇಟ್ಟುಕೊಳ್ಳುವುದು
ಎಂಬ ಸಬೂಬಿಗೆ
ವರ್ಷಗಟ್ಟಲೆ ಓಡಿಸಿದ ಹಳೆ ಕಾರು
ಹರಾಜು ಕಟ್ಟೆಯೇರಿತು.
ದಾಖಲೆಯ ಯಜಮಾನ ಇವನು
ಹಾದಿಬೀದಿ ಓಡಿಸಿದವಳು ನಾನು

ಕೊಡುವ ಸುದ್ದಿ ಹೊರಹಾಕಿದ್ದೆ ಶುರು
ತಾ ನಾ ಎಂದು ಓಡೋಡಿ ಬಂದರು
ಗಿರಾಕಿ, ಏಜಂಟರು.
ಅರೆರೆ ! ಹಳೆಯ ಕಾರಿಗೆ ಇಷ್ಟು ಕಿಮ್ಮತ್ತು !?

'ಲೇಡೀಸ್ ವೆಹಿಕಲ್ ಅಲ್ವೆ ಮೇಡಂ ?
ತೊಳದು ಒರಸಿ ವಯನಾಗಿ ಇಟ್ಕೋತಾರೆ
ಗುದ್ದಿರಲ್ಲ, ಉರುಳಿಸಿರಲ್ಲ,
ಹುಚ್ಚುಚ್ಚಾರ ಓಡಿಸಿರಲ್ಲ, ಅದಕ್ಕೇ
ಸೆಕೆಂಡ್ ಹ್ಯಾಂಡ್ ಆದ್ರೂ ಡಿಮ್ಯಾಂಡು...'
ಮಹಾ ರಹಸ್ಯ ಬಿಡಿಸಿದವನಂತೆ
ಕಿಸಕ್ಕನೆ ನಕ್ಕಿದ್ದ ಏಜೆಂಟು.
ವಿಲೇವಾರಿಯಾಗೇಬಿಟ್ಟಿತು ಹಳೇ ಮಾಡೆಲು.

ಇವನ ಕುಡಿಮೀಸೆ ಹಿಂದೆ
ಒಂದು ವಾರೆ ನಗೆ...
'ನಿನ ಕಾಲು ಕ್ಲಚ್ ಮೇಲಿಂದ ಇಳಿದಿದ್ದು
ನೋಡೇ ಇಲ್ಲ ನಾನು.
ಕ್ಲಚ್‌ಪ್ಲೇಟ್ ಎಕ್ಕುಟ್ಟಿ ಹೋದ ಹಾಗಿತ್ತು ?
ಯಾರೋ ಬಕರಾನೆ ಇರಬೇಕು,
ಲೇಡೀಸ್ ವೆಹಿಕಲ್ ಅಂತ ನಮ್ಮ ಕಾರು
ಮೇಲೆ ಬಿದ್ದು ತಗಂಡು ಹೋದವನು.
ಪಾಪ ಅವನಿಗೇನು ಗೊತ್ತು ?
ಹೆಂಗಸರ ಡ್ರೈವಿಂಗ್ ಥೇಟ್
ಅವರ ಮನಸಿನ ಹಾಗೆ ಎಂದು ?
ಎಲ್ಲೆಂದರಲಿ ಕಾರು
ಸಾಕೆಂದ ಕೂಡಲೇ ಗಕ್ಕೆಂದು ನಿಲ್ಲಬೇಕು
ಬೇಕೆಂದ ಕೂಡಲೇ ಚಾಲೂ ಆಗಬೇಕು
ನಿಂತಿರಬೇಕು, ಆದರೆ ನಿಂತೇ ಇರಬಾರದು
ನಡೆಯುತ್ತಿರಬೇಕು ಆದರೆ ಓಡಬಾರದು...'

ಹೌದು ಮಾರಾಯನೆ,
ಸದ್ಯ, ಏಜೆಂಟನೆದುರು ವ್ಯಾಖ್ಯಾನಗಳ ಹರಡದೆ
ಮುಚ್ಚಿಟ್ಟು ಗಾಡಿಯ ಗುಟ್ಟು, ಪುಣ್ಯ ಕಟ್ಟಿಕೊಂಡೆ.
ಹೌದು ಕಣೋ,
ಎಚ್ಚೆತ್ತ ಹೆಣ್ತನವೇ ಹಾಗೆ
ಎಷ್ಟೊತ್ತಿಗೆ ಬ್ರೇಕ್ ತುಳಿಯಬೇಕಾಗುತ್ತೋ
ಯಾವಾಗ ಗೇರು ಬದಲಿಸಬೇಕಾಗುತ್ತೋ
ಸಂಸಾರವೆಂಬ ಕ್ಲಚ್ ಮೇಲೆ
ಕಾಲಿಟ್ಟವರಿಗಷ್ಟೇ ಗೊತ್ತು ಧಗೆ
ಬೂದಿ ಮಾತ್ರ ಬಲ್ಲದು ಬೇಯುವ ಬೇಗೆ.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ , ಕವಲಕ್ಕಿ ಅಂಚೆ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

ಮನೆಯಿಂದ ಹೊರಗೆ ವೈಭವದ ಮದುವೆಗಾಗಿ ಮದುವೆಯ ಸ್ಥಳ ಬದಲಾವಣೆ, ಸ್ಥಳಕ್ಕೆಂದು ದುಂದುವೆಚ್ಚ ಮಾಡುವುದು, ದುಬಾರಿ ಬೆಲೆಯ ಲಗ್ನಪತ್ರಿಕೆ ಮಾಡಿಸುವುದು, ರಕ್ತಸಂಬಂಧಿಗಳಿಂದಾಚೆಗೆ ಮನೆ, ನಿವೇಶನ, ಅಪಾರ್ಟ್‌ಮೆಂಟ್ ಕೊಡಿಸುವುದು, ವರನ ಶಿಕ್ಷಣ, ಉದ್ಯೋಗ, ವಿದೇಶಿ ಪ್ರಯಾಣದ ಖರ್ಚು ಭರಿಸುವುದು. ...ಹೀಗೆ ನಾಲ್ಕು ಜನರ ಎದುರಿಗೆ ವಿವಾಹ ಒಪ್ಪಂದವಾಗಿ ನಡೆಯುತ್ತಿದೆ. ಇದು ಗಂಡನ್ನೂ, ಗಂಡಿನ ಮನೆಯವರನ್ನೂ ಮೆಚ್ಚಿಸಲು ಮಾತ್ರ ವೈಭವದ ಮದುವೆಯಾಗುತ್ತದೆ ಎಂದು ಹೇಳಲಾಗುವುದಿಲ್ಲ. ಎಷ್ಟೋ ಬಾರಿ ಪ್ರತಿಷ್ಠೆ ತೋರಿಸಲು, ಸಾಮಾಜಿಕ ಮರ್ಯಾದೆ, ಅಂತಸ್ತು ಎಂಬ ಭ್ರಮೆಯಲ್ಲಿ ಕೂಡ ಹೀಗೆ ಮಾಡುವುದುಂಟು. ಇಂಥ ಬೇಡಿಕೆಗಳ ಪರಿಣಾಮ ಹೆಣ್ಣಿನ ಮೇಲೆ ನಡೆಯುವ ದಮನ ಕ್ರಿಯೆಯ ವ್ಯಾಪಕತೆ ಹೆಚ್ಚುತ್ತಿರುವುದಕ್ಕೆ ಕಾರಣವಾಗುತ್ತಿದೆ. ಸರ್ಕಾರ ಕೂಡ ಯಾವುದೇ ಮದುವೆಗೆ ಇಷ್ಟೇ ಖರ್ಚು ಮಾಡಬೇಕೆಂದು ವಿಧಿ–ನಿಷೇಧ ಹೇರಿಲ್ಲ. ಇದೊಂದು ದುಬಾರಿ ಮತ್ತು ಆರ್ಥಿಕ ದಿವಾಳಿಯ ಆಚರಣೆಯಾಗಿದೆ.

ಒಂದು ಕಾಲದಲ್ಲಿ 'ವರದಕ್ಷಿಣೆ' ಬರೀ ಆಯ್ಕೆಯಾಗಿತ್ತು. ಹೆತ್ತವರು ಮಗಳು ಕ್ಷೇಮವಾಗಿ ಇರುತ್ತಾಳೆಂಬ ನಂಬಿಕೆಯಿಂದ, ಸಂತೋಷದಿಂದ ಅಥವಾ ಅವರವರ ಶಕ್ತ್ಯಾನುಸಾರ ನೀಡುತ್ತಿದ್ದರು, ಇಂದು ಅದು ಸ್ವರೂಪದಲ್ಲಿ ಬದಲಾವಣೆಗೊಂಡಿದೆ. ವರದಕ್ಷಿಣೆ ವಿಭಿನ್ನ ರೂಪ ತಳೆಯುತ್ತಿದೆ. 'ಏನು' ಬೇಕಾದರೂ ಕೇಳುವ ಒತ್ತಾಯದ ಪ್ರವೃತ್ತಿ ಬೆಳೆಯುತ್ತಿದೆ. ಉದಾಹರಣೆಗೆ ಹಣ, ಬೈಕ್, ಮನೆಗೆ ಬೇಕಾಗುವ ಸಾಮಾನುಗಳು, ಒಡವೆ, ಕಾರು, ನಿವೇಶನ, ಬಂಗಲೆ, ಗಂಡಿನ ಉನ್ನತ ಶಿಕ್ಷಣಕ್ಕೆ ಖರ್ಚು ಮಾಡುವುದು, ದುಬಾರಿ ಖರ್ಚು ಮಾಡಿ ಮದುವೆ ಮಾಡುವುದು, ವಿದೇಶಕ್ಕೆ ಹೋಗಲು ಖರ್ಚು ಮಾಡುವುದು, ಗಂಡಿಗೆ ನೌಕರಿ ಕೊಡಿಸುವುದು, ಗಂಡಿನ ತಂಗಿಯ ಮದುವೆಗೆಂದು ಹಣ ಪಡೆಯುವುದು – ಹೀಗೆ ವರದಕ್ಷಿಣೆ ಪರಿಮಿತಿಗೆ ಒಳಪಡದ ವಿಷಯ, ವಸ್ತುಗಳು ಇಲ್ಲವೇ ಇಲ್ಲ ಎನ್ನಬಹುದು. ಇಷ್ಟೆಲ್ಲಾ ಬೇಡಿಕೆ ಇಟ್ಟರೂ ಸಾಲದೆಂಬಂತೆ ನೌಕರಿ ಸಿಗುವ, ಇಲ್ಲವೆ ದುಡಿಯುವ ಹೆಣ್ಣನ್ನು ಬಯಸುವುದು ನಿರಂತರವಾಗಿ 'ವರದಕ್ಷಿಣೆ' ಪಡೆಯುವುದೇ ಆಗಿದೆ. ಗಂಡಿನ ಮನೆಯವರು ಕೇಳಿದ್ದನ್ನೆಲ್ಲಾ ಕೊಟ್ಟಾಗಿದ್ದರೂ ದುಡಿಯುವ ಸೊಸೆಯಾಗಿದ್ದರೂ, ಆಕೆಯ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ದೌರ್ಜನ್ಯ ನಡೆಯುತ್ತಲೇ ಇರುತ್ತದೆ. ಸಂಪ್ರದಾಯಕ್ಕೆ ಕಟ್ಟುಬಿದ್ದು, 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬುದನ್ನು ಆಗಾಗ ನೆನಪಿಸಿಕೊಳ್ಳುತ್ತ ಬದುಕು ಸಾಗಿಸಬೇಕಾಗಿರುವುದು ಹೆಣ್ಣಿಗೆ ಅನಿವಾರ್ಯವಾಗಿದೆ. ವರ್ಗ, ಶ್ರೇಣಿಯ ವ್ಯತ್ಯಾಸಗಳು ಕಂಡುಬರುವುದಿಲ್ಲ. ಬದಲಿಗೆ ವರದಕ್ಷಿಣೆ ನೋಟ ಸಮಾನವಾಗಿ ಕಾಣುತ್ತಿದೆ. ಹಲವು ಬಾರಿ ಇದನ್ನು ಸಹಿಸದ ಮತ್ತು ಆರ್ಥಿಕ ಸಬಲರಾದ

ಹೆಣ್ಣುಮಕ್ಕಳು ಒಂದು ಹೆಜ್ಜೆ ಮುಂದೆ ಇಟ್ಟರೆ ಬೇರೆ ರೀತಿಯ ಹಿಂಸೆಗೆ ಗುರಿಯಾಗಬೇಕಾಗುತ್ತದೆ.

ಹೆಣ್ಣುಮಕ್ಕಳು ಸಂಪಾದಿಸುವವರಾದರೆ, ಆರ್ಥಿಕವಾಗಿ ಸಬಲರಾದರೆ ಅವರ ಮೇಲೆ ದೌರ್ಜನ್ಯಗಳು ನಡೆಯುವಲ್ಲಿ ಪ್ರಮಾಣ ಕಡಿಮೆ ಎಂಬ ಮಾತು ಕೇಳಿಬರುತ್ತದೆ. ವಾಸ್ತವದಲ್ಲಿ ಹೆಚ್ಚು ಹಿಂಸೆಗೊಳಗಾಗುವುದು ಆರ್ಥಿಕತೆ ಕಾರಣದಿಂದಾಗಿ ಎನ್ನುವುದು ಸಂದರ್ಶನ ಅವಧಿಯಲ್ಲಿ ಕಂಡುಬಂದಿದೆ. ಹೆಣ್ಣುಮಕ್ಕಳ ಮತ್ತು ಮಹಿಳೆಯರ ಉಳಿತಾಯಕ್ಕೆ ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳು ಸೃಷ್ಟಿಯಾದವು. ಆದರೆ ಉಳಿತಾಯ ಮಾಡಿದ ಹಣದ ಮೇಲಿನ ಅಧಿಕಾರ ಮಾತ್ರ ಗಂಡಸರ ಪಾಲಾಯಿತು. ಇನ್ನು ನೌಕರಿ ಅಂತೆಲ್ಲಾ ದುಡಿಯುತ್ತಿರುವ ಹೆಣ್ಣುಮಕ್ಕಳ ಹಾಗೂ ಮಹಿಳೆಯರ ಸಂಬಳ ಯಜಮಾನನ ಕೈಗಿಡಬೇಕು; ಇಲ್ಲಾ ಕುಟುಂಬಕ್ಕಾಗಿ ವ್ಯಯಿಸಬೇಕು. ದುಡಿಮೆ ಇಲ್ಲದಿರುವ, ವೈಧವ್ಯಕ್ಕೆ ಒಳಗಾಗಿರುವ ಮಹಿಳೆಯರು ಪರಾವಲಂಬಿತನಕ್ಕೆ ಒಳಗಾಗಿ ಬದುಕು ಸಾಗಿಸುವಂಥ ಹತ್ತು ಹಲವಾರು ನಿದರ್ಶನಗಳು ಕಂಡುಬರುತ್ತವೆ.

ಮೂರು ವರ್ಷಗಳ ಹಿಂದೆ ೨೩ರ ಹರೆಯದ ರೇವಮ್ಮನನ್ನು ಪಕ್ಕದೂರಿನ ಗೌಡರ ಮನೆತನವೆಂದು ಮದುವೆ ಮಾಡಿಕೊಡಲಾಗಿತ್ತು. ಆದರೆ ಆಕೆಯ ದುರದೃಷ್ಟವೇನೋ; ಆತನಿಗೆ ಕೊನೆ ಹಂತ ತಲುಪಿರುವ 'ಕ್ಯಾನ್ಸರ್' ಆಗಿರುವ ವಿಚಾರವನ್ನು ಗಂಡಿನ ಮನೆಯವರು ಗೋಪ್ಯವಾಗಿಟ್ಟು ಮದುವೆ ಮಾಡಿದ್ದರು. ಇಬ್ಬರು ಸಹೋದರರು. ರೇವಮ್ಮನ ಗಂಡನೇ ಹಿರಿಯ ಮಗ. ಮೇಲಾಗಿ ಆಸ್ತಿವಂತರು. ಹೀಗಿರುವಾಗ ಕ್ರಮೇಣ ಆತನ ರೋಗದ ಉಲ್ಬಣತೆ ಹೆಚ್ಚಿತು. ವೈದ್ಯರಲ್ಲಿಗೆ ಕರೆದೊಯ್ಯುವ ಮಾರ್ಗಮಧ್ಯೆ ಆತನ ಸಾವು ಸಂಭವಿಸಿಬಿಟ್ಟಿತು. ಇನ್ನೂ ಗಂಡ ಸತ್ತು ದಿನ ಕಾರ್ಯ ಮುಗಿದಿರಲಿಲ್ಲ. ಆಗಲೇ ಆಕೆಗೆ ಹೆಜ್ಜೆ-ಹೆಜ್ಜೆಗೂ ಕಿರುಕುಳ ಕೊಡಲು ಆರಂಭಿಸಿದರು. ಅಕ್ಕಪಕ್ಕದವರ ಎದುರಿಗೆ, ಬಂಧುಗಳ ಎದುರಿಗೆ ಚುಚ್ಚು ಮಾತುಗಳನ್ನಾಡುವುದು, ಸಂಶಯಾಸ್ಪದವಾಗಿ ಕಾಣುವುದು, ಗಂಡನ ಸಾವಿಗೆ ಆಕೆಯೇ ಕಾರಣವೆಂಬಂತೆ ವರ್ತಿಸುವುದು, ಮನೆಯಾಚೆ ಹೋಗದಂತೆ, ಯಾರ ಜೊತೆಗೂ ಬೆರೆಯದಂತೆ ನಿರ್ಬಂಧಿಸುವುದು ...ಹೀಗೆ ಸರಣಿಯಾಗಿ ಹಿಂಸೆಗೊಳಪಡಿಸುವುದು ಪ್ರಾರಂಭವಾಗಿ ಆಕೆ ಸಹಿಸಿಕೊಳ್ಳಲಾರದ ಮಟ್ಟಕ್ಕೆ ಹೋಗಿ ರೇವಮ್ಮ ಒಂದು ವರ್ಷದ ಮಗನೊಂದಿಗೆ ತವರು ಸೇರಿದಳು. ಇಷ್ಟಕ್ಕೆಲ್ಲ ಕಾರಣ ಗಂಡನ ಆಸ್ತಿಯ ಮೇಲಿನ ಹಕ್ಕು ಕಿತ್ತುಕೊಳ್ಳುವ ಕುತಂತ್ರ. ಇಲ್ಲೇ ಇದ್ದರೆ ಆಕೆ ಕೊಡಳು; ಏನಾದರೂ ಮಾಡಿ ಹೊರಹಾಕುವ ಆಲೋಚನೆ ಆಕೆಗೆ ಹಿಂಸೆ ನೀಡುವಂತೆ ಮಾಡಿದ್ದಿತ್ತು. ಗಂಡನಿಲ್ಲದ ಹೆಣ್ಣಿನ ಬದುಕು ಬದುಕೇ ಅಲ್ಲ ಎನ್ನುವ ಪುರುಷ ಕಲ್ಪನೆ ಹೆಣ್ಣನ್ನು ಹೀನಾಯವಾಗಿ ನಡೆಸಿಕೊಳ್ಳುವುದಿದೆ. ಆಕೆಯ ಮುಗ್ಧತೆಯ ದುರುಪಯೋಗ, ಅಕ್ಷರ ಜ್ಞಾನದ ಕೊರತೆ, ದೌರ್ಬಲ್ಯ ಆಕೆಯನ್ನು ಅಮಾಯಕ ಸ್ಥಿತಿಗೆ ತಳ್ಳುವ ಕಾಣದ ಕೈಗಳ ಕುತಂತ್ರಕ್ಕೆ ಬಲಿಪಶುವಾಗುತ್ತಿರುವ ಹೆಣ್ಣುಮಕ್ಕಳನ್ನು ರಕ್ಷಿಸಲು ಕಾನೂನು ಎಚ್ಚೆತ್ತುಕೊಳ್ಳಬೇಕಾದ ಜರೂರು ಇದೆ. ಆಕೆ ಕಾನೂನಿನ ಪರಿಧಿಯಲ್ಲಿ ಆಸ್ತಿಯನ್ನು ಪಡೆಯಲು ಅವಕಾಶವಿದೆ. ಮಿತಿಮೀರಿದರೆ ಕಾನೂನುಕ್ರಮ ಆಕೆಯ ನೆರವಿಗೆ ಬರುತ್ತದೆ. ಗಂಡನ ನಿಧನದ ನಂತರ ಸುಲಭದಲ್ಲಿ ಆಸ್ತಿಯನ್ನು ಹೆಂಡತಿಯ ಹೆಸರಿಗೆ ಮಾಡುವಂತಹ ವ್ಯವಸ್ಥೆ ತುರ್ತಾಗಿ ಜಾರಿಗೊಳ್ಳಬೇಕಾದ ಅಗತ್ಯವಿದೆ.

"ಹೆಚ್ಚು ಕಡಿಮೆ ಎಲ್ಲಾ ಕೇಸ್‌ಗಳಲ್ಲೂ ಮಹಿಳೆಯು ಸತ್ತ ನಂತರ ಆ ಕೇಸಿಗೆ ಸಂಬಂಧಪಟ್ಟಂತೆ ಸಾಕಷ್ಟು ಸಾಕ್ಷಿ ಪುರಾವೆಗಳು ಸಿಕ್ಕಿದ್ದರೂ ಪೊಲೀಸರು ಕೊಲೆ ಮಾಡಿದ ಮನೆಯವರೊಂದಿಗೆ ಸೇರಿಕೊಂಡು ಸಾಕ್ಷಿಗಳನ್ನು ಮುಚ್ಚಿಹಾಕಲು ಪ್ರಯತ್ನಿಸುತ್ತಾರೆ. ಇನ್ನು ಕೆಲವು ಕೇಸ್‌ಗಳಲ್ಲಿ ಹೆಂಗಸು ಸಾಯುವಾಗ ಹೇಳಿಕೆ ಕೊಟ್ಟರೂ ಅದನ್ನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ ಅಥವಾ ದಾಖಲು ಮಾಡಿಕೊಳ್ಳುವುದಿಲ್ಲ. ಪೊಲೀಸರು ಕೇಸನ್ನು ರಿಜಿಸ್ಟರ್ ಮಾಡಿಕೊಳ್ಳಲು ನಿರಾಕರಿಸುತ್ತಾರೆ ಮತ್ತು ಹುಡುಗಿಯ ಮನೆಯವರಿಗೂ ಕೇಸನ್ನು ರಿಜಿಸ್ಟರ್ ಮಾಡಿಸಲು ಬಿಡುವುದಿಲ್ಲ. ಇದರಿಂದ ಕೊಲೆ ಮಾಡಿದವರು ಸುಲಭವಾಗಿ ತಪ್ಪಿಸಿಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಮಾತ್ರ ಕೊಲೆಗಾರರನ್ನು ಬಂಧಿಸುತ್ತಾರೆ. ಆದರೆ ಆಪಾದಿತರು ಕೋರ್ಟಿನಲ್ಲಿ ಅಪೀಲು ಹಾಕಿಕೊಂಡು ಬಿಡುಗಡೆ ಪಡೆಯುತ್ತಾರೆ. ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯದ ಕುರಿತು ಕಾನೂನು ಮತ್ತು ಪೊಲೀಸ್ ಆಡಳಿತ ವ್ಯವಸ್ಥೆ ತೋರುವ ನಿರ್ಲಕ್ಷ್ಯವೇ ಅನೇಕ ಮನೆಗಳಲ್ಲಿ ಹೆಂಗಸರ ಮೇಲೆ ದೌರ್ಜನ್ಯ ನಡೆಸಲು ದಾರಿ ಮಾಡಿಕೊಡುತ್ತದೆ. ವರದಕ್ಷಿಣೆಗೋಸ್ಕರ ನಡೆಯುವ ಹತ್ಯೆಗಳ ಸಂಖ್ಯೆ ಹೆಚ್ಚಾಗುತ್ತಿದೆ ಎನಿಸುತ್ತದೆ. ಆದರೆ ಗಂಡಸರು ಈ ವಿಧಾನದಿಂದ ಸುಲಭವಾಗಿ ಹೆಂಡತಿಯರನ್ನು ದೂರವಾಗಿಸಿ (ಅಂದರೆ ಕೊಲೆ ಮಾಡಿ) ತಪ್ಪಿಸಿಕೊಳ್ಳಬಹುದು ಎಂಬುದನ್ನು ಕಂಡು ಕೊಂಡರು." ಮಧುಕೀಶ್ವರ್ (ಮೂಲ), ಹೇಮಲತಾ ಹೆಚ್. ಎಮ್. (ಅನುವಾದ) 'ಭಾರತದಲ್ಲಿ ಮಹಿಳೆಯರ ಬದುಕು ಮತ್ತು ಹೋರಾಟ', ಸಮತಾ ಅಧ್ಯಯನ ಕೇಂದ್ರ, ಮೈಸೂರು. ೧೯೯೯. ಪು. ಸಂ .೩೮).

ವರದಕ್ಷಿಣೆ ಕಾನೂನಿಗೆ ಕ್ರಿಮಿನಲ್ ಲಾ ೧೯೮೩ರಲ್ಲಿ ತಿದ್ದುಪಡಿ ತಂದು ೧೮೬೦ರ ಭಾರತೀಯ ದಂಡಸಂಹಿತೆ ಪ್ರಕಾರ (ಐಪಿಸಿ) ಅದನ್ನು ಹೊಸ ಅಪರಾಧ ಎಂದು ಪರಿಗಣಿಸಲಾಯಿತು. ತೀವ್ರವಾದ ಕ್ರೌರ್ಯಕ್ಕೆ ಒಳಗಾದ ಮಹಿಳೆಯರಿಗೆ ರಕ್ಷಣೆ ನೀಡುವ ಸದುದ್ದೇಶದಿಂದ ಇದನ್ನು ಜಾರಿಗೆ ತರಲಾಯಿತು. ಹಾಗೆಯೇ ಐಪಿಸಿ ಸೆಕ್ಷನ್ ೩೦೪ ಬಿ ಹಾಗೂ ಭಾರತೀಯ ಸಾಕ್ಷ್ಯ ಕಾಯಿದೆ ೧೧೩ ಬಿ ಸೇರಿಸುವ ಮೂಲಕ ವರದಕ್ಷಿಣೆ ಕಿರುಕುಳ ಹಾಗೂ ವರದಕ್ಷಿಣೆ ಸಾವು ಪ್ರಕರಣಗಳನ್ನು ಕ್ರಿಮಿನಲ್ ಕಾಯಿದೆಯ ವ್ಯಾಪ್ತಿಗೆ ತರಲಾಯಿತು. ಇಷ್ಟೆಲ್ಲಾ ಬಿಗಿ ಕ್ರಮಗಳಿದ್ದಾಗ್ಯೂ ಶಿಕ್ಷೆಯ ಪ್ರಮಾಣ ಮಾತ್ರ ಶೇಕಡ ೭ರಷ್ಟಿರುವುದು ವಿಪರ್ಯಾಸ.



ವಿಶ್ವಸಂಸ್ಥೆಯ ಅಂಕಿ ಅಂಶಗಳ ಪ್ರಕಾರ ಭಾರತದಲ್ಲಿ ಪ್ರತಿ ಮೂವರು ವಿವಾಹಿತ ಮಹಿಳೆಯರಲ್ಲಿ ಒಬ್ಬರು ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ಎಂದರೆ ಈಗಿರುವ ಕ್ರಿಮಿನಲ್ ಲಾ ನಿಯಂತ್ರಣದಲ್ಲಿ ಎಷ್ಟರಮಟ್ಟಿಗೆ ಸಫಲವಾಗಿದೆ ಎಂಬುದನ್ನು ಊಹಿಸಬಹುದಾಗಿದೆ. ಈಗ ೨೦೧೪ರ ಜುಲೈನಲ್ಲಿ ಸೆಕ್ಷನ್ ೪೯೮ರ ಎ ಅಡಿ ಬಂಧಿಸುವ ಪೊಲೀಸರ ಅಧಿಕಾರವನ್ನು ಸುಪ್ರೀಂ ಕೋರ್ಟ್ ಮತ್ತಷ್ಟು ಕಡಿತಗೊಳಿಸಿದೆ. ಮ್ಯಾಜಿಸ್ಟ್ರೇಟ್ ಅನುಮತಿ ಪಡೆಯುವುದು ಕಡ್ಡಾಯ. ಆರೋಪ ಪಟ್ಟಿ ಸಲ್ಲಿಸದಿರುವ ಅಂತಿಮ ಆಯ್ಕೆ ಪೊಲೀಸರಿಗೆ ಇರುತ್ತದೆ. ಮ್ಯಾಜಿಸ್ಟ್ರೇಟ್ ಮುಂದೆ 'ಮುಕ್ತಾಯ ವರದಿ' ಸಲ್ಲಿಸಿ ಮೊಕದ್ದಮೆಯನ್ನು ಮುಚ್ಚಿಹಾಕುವ ಅವಕಾಶವೂ ಅವರಿಗಿರುತ್ತದೆ. ಇದೆಲ್ಲದರ ಮಧ್ಯೆ 'ವರದಕ್ಷಿಣೆ' ಕೊಡು-ಕೊಳ್ಳುವಿಕೆ ಎಗ್ಗಿಲ್ಲದೆ ನಡೆಯುತ್ತಿರುವುದು ಹೆಣ್ಣಿಗೆ ರಕ್ಷಣೆ ಎಂಬುದು ಸವಾಲಿನ ಪ್ರಶ್ನೆಯೇ ಆಗಿದೆ. ಎಲ್ಲಿಯವರೆಗೆ ಹೆಣ್ಣುಮಕ್ಕಳಿಗೆ ಮುಕ್ತ ಅಭಿವ್ಯಕ್ತಿ ಸ್ವಾತಂತ್ರ್ಯ, ವಿವಾಹದ ಆಯ್ಕೆ ಸ್ವಾತಂತ್ರ್ಯಗಳು ದಕ್ಕುವುದಿಲ್ಲವೋ ಅಲ್ಲಿಯವರೆಗೆ ವರದಕ್ಷಿಣೆಯನ್ನು ತಡೆಗಟ್ಟಲು ಸಾಧ್ಯವಾಗುವುದಿಲ್ಲ.

**ಡಾ॥ ರೇಣುಕಾ ಎಸ್. ಮಂದ್ರೂಪ**
ಅತಿಥಿ ಉಪನ್ಯಾಸಕರು, ಮಹಿಳಾ ಅಧ್ಯಯನ ವಿಭಾಗ
ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ,
ವಿಜಯಪುರ – ೫೮೬ ೧೦೧

# ಕಿಚ್ಚಿಲ್ಲದ ಬೇಗೆಯ 'ಕುದಿ ಎಸರು'

## (ಡಾ॥ ವಿಜಯಮ್ಮ ಅವರ ಆತ್ಮಕಥೆ)

ನಾನು ಓದಿದ ಪುಸ್ತಕ

| | | |
|---|---|---|
| ಕೃತಿಯ ಹೆಸರು | : | **ಕುದಿ ಎಸರು** ತಿಟ್ಟತ್ತಿ ತಿರುಗಿ ನೋಡಿದಾಗ... |
| ಲೇಖಕರು | : | ಡಾ॥ ವಿಜಯಾ |
| ಪ್ರಕಾಶಕರು | : | **ನಾಕುತಂತಿ ಪ್ರಕಾಶನ**<br>೧೧೬೨, ೨೨ನೇ ಅಡ್ಡರಸ್ತೆ, ೨೩ನೇ ಮುಖ್ಯರಸ್ತೆ<br>ಬಿಎಸ್‌ಕೆ ೨ನೇ ಹಂತ, ಬೆಂಗಳೂರು – ೫೬೦ ೦೭೦ |
| ಪುಟಗಳು | : | xvi+೩೬೨–೩೭೮ ಬೆಲೆ : ರೂ. ೩೦೦/– |

**ಗೀತಾ ವಸಂತ**

**ಹೆ**ಣ್ಣೊಬ್ಬಳು ಬರೆಯುವುದೆಂದರೇ ಬಯಲಲ್ಲಿ ಬೆತ್ತಲೆ ನಿಂತಂತೆ ಎಂದು ಒಂದು ಕಡೆ ಪ್ರತಿಭಾ ನಂದಕುಮಾರ್ ಹೇಳುತ್ತಾರೆ. ತನ್ನ ಒಡಲಲ್ಲಿ ಬಚ್ಚಿಟ್ಟುಕೊಂಡ ಪುಳಕ, ಸಂಭ್ರಮ, ನೋವು, ಹಿಂಸೆ, ಸಂಕಟ, ಅವಮಾನಗಳನ್ನು ಅವಳು ಬಯಲು ಮಾಡಿದರೆ ಒಂದು ಭೂಕಂಪದ ಅನುಭವವಾಗುವುದು ನಿಶ್ಚಿತ! ರಹಸ್ಯವಾಗಿರಬೇಕಾದ ದೇಹ, ದೇಹ ಸಂಬಂಧಿ ಲೈಂಗಿಕಾನುಭವಗಳು, ಆ ಮೂಲಕ ಜಾಗೃತಗೊಳ್ಳುವ ಹೆಣ್ತನದ ಪ್ರಜ್ಞೆ, ಅದರ ಸುತ್ತಲೂ ಕೋಟೆ ಕಟ್ಟಿಕೊಂಡು ನಿಲ್ಲುವ ಪಾವಿತ್ರ್ಯ – ಪಾತಿವ್ರತ್ಯದ ಗೋಜಲುಗಳು, ಸೋ ಕಾಲ್ಡ್ ನೈತಿಕತೆಯ ಒಜ್ಜೆ ಇವೆಲ್ಲವನ್ನು ಬದಿಗಿಟ್ಟು ಹಗುರಾಗುತ್ತ ಹೋಗುವ ಭಾವವೊಂದು ಅವಳಿಗೆ ಬರವಣಿಗೆಯ ಮೂಲಕ ದಕ್ಕುವುದೇ ಸೋಜಿಗ. ಆದರೆ ಅದು ಅವಳಿಗೊಂದು ಸವಾಲಿನ – ಸಂಘರ್ಷದ ಕ್ರಿಯೆಯೆಂಬುದೂ ಅಷ್ಟೇ ನಿಜ. ವೈಯಕ್ತಿಕ ಅನುಭವಗಳನ್ನು ಹೀಗೆ ಬಟಾಬಯಲಾಗಿಸಿ ಬಿಚ್ಚಿಟ್ಟು ವಿಶ್ಲೇಷಿಸುತ್ತ ಹೋಗುವಾಗ ಆತ್ಮರತಿಯಾಗದಂತೆ, ಸ್ವಸಮರ್ಥನೆಯ ಹುಸಿ ಪ್ರಯತ್ನ ವಾಗದಂತೆ, ಯಾವುದೋ 'ಇಸಂ'ಗಳ ಕಣ್ಣಲ್ಲಿ ಕಟ್ಟಿದ ಕಥನವಾಗದಂತೆ ನೋಡಿಕೊಳ್ಳುವ ಸೂಕ್ಷ್ಮ ಜಾಗೃತಪ್ರಜ್ಞೆ ಇರಬೇಕಾಗುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಅನುಭವಗಳಿಗೆ ಹಾಗೂ ಅಭಿವ್ಯಕ್ತಿಗೆ ಪ್ರಾಮಾಣಿಕವಾಗಿರಬೇಕಾದ ಸವಾಲು ದೊಡ್ಡದು. ಈ ಕಾಲದ ಸಾಮಾಜಿಕ – ಸಾಂಸ್ಕೃತಿಕ ನಿರೀಕ್ಷೆಗಳು, ಬರವಣಿಗೆಯ ಫಾರ್ಮ್‌ನ ಸೃಜನಶೀಲ ನಿರೀಕ್ಷೆಗಳು ಎಲ್ಲವನ್ನೂ ಸಮತೋಲನಗೊಳಿಸುತ್ತಲೇ ಒಳಗನ್ನು ಬಗೆದಿಡುವಾಗ ಸಂವೇದನೆಯ ಮೊರೆತವನ್ನು ಪ್ರಜ್ಞಾಪೂರ್ವಕವಾಗಿ ನಿಯಂತ್ರಿಸದೆ ಕಟ್ಟಬೇಕಾಗುತ್ತದೆ. ಎಲ್ಲ ಕಟ್ಟುಗಳನ್ನು ಮೀರಿ ಬರುವ ಆತ್ಮದ ಮೊರೆತದಂಥ ಅಭಿವ್ಯಕ್ತಿಯನ್ನು ಭಾಷೆಯ ಚೌಕಟ್ಟುಗಳಲ್ಲಿ ಹಿಡಿದಿಡುವುದು ಅನಿವಾರ್ಯ. ವಿಜಯಮ್ಮ ಇಂಥ ಬಿಕ್ಕಟ್ಟಿನ ಬಗ್ಗೆ ಮುಕ್ತವಾಗಿ ಹೇಳಿಕೊಂಡಿದ್ದಾರೆ.

ಅನುಭವದ ಸಂಕೀರ್ಣತೆ ಹಾಗೂ ಸಮಗ್ರತೆಗಳ ಅರಿವಿಲ್ಲದಿದ್ದರೆ ಆತ್ಮಕಥಾನಕ ಒಂದೋ ಗೋಳು ತೋಡಿಕೊಳ್ಳುವಿಕೆಯಾಗುತ್ತದೆ ಅಥವಾ ಪಾರ್ಶ್ವಿಕ ನೋಟದಿಂದ ಕಂಡ ಪೂರ್ವಗ್ರಹಗಳ ನಿರೂಪಣೆಯಾಗಿಬಿಡುತ್ತದೆ. ವಿಜಯಮ್ಮ ಹೆಜ್ಜೆಹೆಜ್ಜೆಗೆ ಹಾಗಾಗಬಾರದೆಂಬ ಎಚ್ಚರ ಇರಿಸಿಕೊಳ್ಳುತ್ತಾರೆ. ತಮ್ಮೊಳಗೇ ತಾವು ಮೈಮರೆಯದಂತೆ ಪ್ರಜ್ಞೆಯನ್ನು ತಟ್ಟಿ ಎಚ್ಚರಿಸಿಕೊಳ್ಳುತ್ತಾರೆ. ಆದ್ದರಿಂದ ಇಲ್ಲಿ ಬರುವ ಯಾವುದೇ ಮನುಷ್ಯರು ಬ್ಲ್ಯಾಕ್ ಆ್ಯಂಡ್ ವೈಟ್‌ನಲ್ಲಿ ಮೂಡಿಲ್ಲ. ಯಾವ ಸಂದರ್ಭ, ಘಟನೆಗಳ ಬಗ್ಗೆಯೂ ಇಲ್ಲಿ ತೀರ್ಮಾನದ ಮಾತುಗಳಿಲ್ಲ. ಅವುಗಳನ್ನು ಇನ್ನೂ ಸರಿಯಾಗಿ ಅರ್ಥಮಾಡಿಕೊಳ್ಳಬಹುದಿತ್ತೇನೋ, ನಿರ್ವಹಿಸ ಬಹುದಿತ್ತೇನೋ ಎಂಬ ಪ್ರಾಮಾಣಿಕ ಆತ್ಮವಿಮರ್ಶೆ ಅಲ್ಲಲ್ಲಿ ರಿಂಗಣಿಸುತ್ತ ಹೋಗುತ್ತದೆ. ವ್ಯಕ್ತಿ ಏಕೆ ಕ್ರೂರಿಯಾಗುತ್ತಾನೆ? ಅವನಲ್ಲಿ ಹಿಂಸೆ ಹೇಗೆ ಮೊಳೆಯುತ್ತದೆ? ಎಂದೆಲ್ಲ ಆಳಕ್ಕಿಳಿದು ಮನಶ್ಶಾಸ್ತ್ರೀಯ ನೆಲೆಯನ್ನು ಕಾಣಲು ವಿಜಯಮ್ಮ ಪ್ರಯತ್ನಿಸುತ್ತಾರೆ. ಅಥವಾ ಪಕ್ವ ಜೀವನ ದರ್ಶನದಿಂದ ಹುಟ್ಟುವ ವಿವೇಕವೆಂದರೂ ಸರಿಯೇನೊ. ಮಕ್ಕಳ ಸಿಟ್ಟಿನ ಹಿಂದಿನ ಹತಾಶೆ, ಸೋಲು, ಆತಂಕಗಳನ್ನು ಗಮನಿಸಿ ಸಂತೈಸುವ ಅಮ್ಮನಂತೆ, ಅವಳ ಅಭಯ ಹಸ್ತದಂತೆ, ನಿರುಮ್ಮಳತೆಯ ನಾದವೊಂದು ಕೃತಿಯಲ್ಲಿ ನಿನದಿಸುತ್ತದೆ. ಆಮೂಲಾಗ್ರ ಸಿಟ್ಟು, ದ್ವೇಷ, ಪ್ರತೀಕಾರ ಭಾವನೆಗಳು ಇಲ್ಲೆಲ್ಲೂ ಭುಸುಗುಡುವುದಿಲ್ಲ. "ಇಷ್ಟಾದರೂ ನನಗೆ ಯಾರನ್ನಾದರೂ ಬೈಯಬೇಕೆನಿಸಲಿಲ್ಲ. ನನಗೆ ಸಿಟ್ಟು ಬರುವುದಿಲ್ಲ. ಯಾರ ಬಗೆಗಾದರೂ ಹೋಗಲಿ, ನನ್ನ ಗಂಡನ ಬಗ್ಗೆಯೇ ನನಗೆ ಸಿಟ್ಟು ಬರುವುದಿಲ್ಲ." ಸಂಬಂಧಗಳು ವಿಕಾಸಗೊಳ್ಳುವಾಗ ಸಂಘರ್ಷಗಳೂ ಸಹಜವೇನೋ! ಬೇರೆಬೇರೆ ಕೌಟುಂಬಿಕ, ಸಾಮಾಜಿಕ, ಭಾವನಾತ್ಮಕ ಪರಿಸರದಲ್ಲಿ ಬೆಳೆದ ಎರಡು ಜೀವಗಳು ಸಾಮರಸ್ಯದ ಹದದಲ್ಲಿ ಕರಗುವುದು ಸುಲಭದ ಮಾತಲ್ಲ. ಒಣ ಪ್ರತಿಷ್ಠೆ, ಶುಷ್ಕ ಮೌಲ್ಯಗಳು, ಜೊತೆಗೆ ಪುರುಷಾಹಂಕಾರವೂ ಸೇರಿ ಹೋದಾಗ ಸಂಬಂಧದಲ್ಲಿ ಹಿಂಸೆಯ ಆಯಾಮ ಪ್ರವೇಶಿಸಿಬಿಡುತ್ತದೆ. ಅಲ್ಲಿ ಹಿಂಸಿಸುವ ವ್ಯಕ್ತಿಯೂ ಸ್ವಯಂ ಹಿಂಸೆಗೊಳಗಾಗುತ್ತಿರುತ್ತಾನೆ. 'ಪೌರುಷ'ದ ಸಿದ್ಧ ಪರಿಕಲ್ಪನೆಯನ್ನೇ ಬದುಕಬೇಕಾದ ಒತ್ತಡದಲ್ಲಿರುವ ಪುರುಷ ಕೂಡಾ ಪೌರುಷವನ್ನು ಸ್ಥಾಪಿಸಲಾಗದ ಹತಾಶ ಸ್ಥಿತಿ ತಲುಪಿದಾಗ ಹಿಂಸಮೃಗದಂತಾಗುತ್ತಾನೆ. ಈ ಎಲ್ಲ ಒತ್ತಡಗಳನ್ನು ಮಾನವೀಯವಾಗಿ ಗ್ರಹಿಸುವ ಕಣ್ಣು 'ಕುದಿ ಎಸರು' ಕಟ್ಟಿದೆ. ಸಾಂಪ್ರದಾಯಿಕ ಬ್ರಾಹ್ಮಣ್ಯದ ಪರಿಸರ, ಆ ಜೀವನಕ್ರಮ, ಅಲ್ಲಿ ಆಧುನಿಕ ಜೀವನಕ್ರಮದ ಪ್ರವೇಶದಿಂದ ಉಂಟಾದ ಪಲ್ಲಟಗಳು, ತಲ್ಲಣಗಳು ಎಲ್ಲವನ್ನೂ ಸಾವಧಾನವಾಗಿ ಗ್ರಹಿಸುವ ಮನಸ್ಸು ಇಲ್ಲಿ ಕೆಲಸ ಮಾಡಿದೆ. ಆದ್ದರಿಂದಲೇ ಇದನ್ನು ಸ್ತ್ರೀವಾದಿ ಓದು, ಸಮಾಜಶಾಸ್ತ್ರೀಯ ಓದು, ಮನಶ್ಶಾಸ್ತ್ರೀಯ ಓದು... ಹೀಗೆ ಯಾವುದೇ ಏಕದೃಷ್ಟಿಯಿಂದ ನೋಡದೆ ಸಮಗ್ರತೆಯಲ್ಲಿ ಗ್ರಹಿಸಬೇಕಾದ ಅಗತ್ಯವನ್ನು ಕೃತಿ ತನ್ನ ನಿರೂಪಣೆಯ ಮೂಲಕವೇ ಓದುಗರಿಗೆ ಮನವರಿಕೆ ಮಾಡಿಕೊಡುತ್ತ ಹೋಗುತ್ತದೆ.

ಇದನ್ನೊಂದು ಜೀವನಯಾತ್ರೆಯೆಂದು ವಿಜಯಮ್ಮ ಭಾವಿಸುತ್ತಾರೆ. ಒಳಿತು–ಕೆಡಕು, ಸಿಹಿ–ಕಹಿಗಳೆಲ್ಲವೂ ಅಲ್ಲಿ ಸಹಜ. ಆದರೆ ಈ ಸಹಯಾನದಲ್ಲಿ ತುಂಬ ಅಸಹಜಗಳು ಘಟಿಸಿವೆ. ಓದುತ್ತ ಓದುತ್ತ ದಿಗ್ಭ್ರಮೆಗೊಳ್ಳುವಂತೆ ಮಾಡುವ ವಿವರಗಳು ಇಲ್ಲಿವೆ. ಮುಚ್ಚಿದ ಬಾಗಿಲುಗಳ ಹಿಂದೆ ಇಂಥ ಪರಮ ಹಿಂಸೆಯ ಬದುಕೊಂದು ಅಡಗಿರುವುದು ಸಾಧ್ಯವಾ ಎಂದು ನಾವು ವಿಹ್ವಲಗೊಳ್ಳುವಂತೆ ಮಾಡುತ್ತದೆ. ಗಂಡನಿಂದ ಪರಿತ್ಯಕ್ತೆಯಾಗುವವರೆಗಿನ ಬದುಕಿನ ತಲ್ಲಣಗಳು ಒಂದು ಹಂತವಾದರೆ, ಆಮೇಲೆ ಬದುಕು ಕಟ್ಟಿಕೊಳ್ಳುವ ಛಲದ, ಹೋರಾಟದ ಕತೆ ಮತ್ತೊಂದು ಹಂತ. ಆದ್ದರಿಂದ ಈ ಬರಹ ಪ್ರಾರಂಭವಾಗುವುದೇ ಬದುಕು ವಿಘಟನೆಗೊಳ್ಳುವ ಘಟನೆಗಳಿಂದ. ಇಂಥ ವಿಘಟನೆಗಳು, ಹಠಾತ್ ತಿರುವುಗಳು, ಅನಿರೀಕ್ಷಿತವಾಗಿ ಎದುರಾಗುವ ಸಂಕಟಗಳು, ತಬ್ಬಲಿತನ, ಅನಾಥಪ್ರಜ್ಞೆ, ಹಸಿವು–ದುಡಿತ, ಅನಾದರ, ಪ್ರೀತಿ ಕಾಣದ ಜಡಸ್ಥಿತಿಗಳು ಒಂದನ್ನೊಂದು ಹಿಂಬಾಲಿಸುತ್ತವೆ. ಸ್ವಪ್ರಜ್ಞೆ ಜಾಗೃತಗೊಳ್ಳುವ ಮೊದಲೇ ತಾಯಿಯನ್ನು

ಕಳೆದುಕೊಂಡು, ಕಂಡವರ ಹಂಗಿನಲ್ಲಿ, ಅನಾಸ್ಥೆಯಲ್ಲಿ ಅರಳದೆ ಬೆಳೆಯುವ ಹೆಣ್ಣೊಬ್ಬಳ ಜೀವನಗಾಥೆ ಮನಸ್ಸನ್ನು ಹಿಂಡಿಹಾಕುತ್ತದೆ. ಇಂಥ ಹೆಣ್ಣಿನ ಬದುಕಿನಲ್ಲಿ ಪ್ರವೇಶಿಸುವ ಅತಿಕಾಮಿ ಗಂಡಸಿಗೆ ಅವಳು ಬರಿಯ ದೇಹ ಮಾತ್ರ! ಯಾವ ಸಹಜ ಪುಲಕಗಳನ್ನೂ ಕಾಣದೆ ಕೊರಡಿನಂತೆ ಬಿದ್ದುಕೊಳ್ಳುವ ದೇಹ, ಆ ದೇಹದ ಮೇಲೆ ನಿರಂತರ ನಡೆಯುವ ಕ್ರೌರ್ಯ, ವಿಕೃತ ಲೈಂಗಿಕ ಕ್ರಿಯೆಗಳು... ಇದನ್ನೆಲ್ಲ ಯಾರ ಬಳಿಯೂ ಹೇಳಿಕೊಳ್ಳಲಾಗದೆ ಕರ್ತವ್ಯವೆಂಬಂತೆ ಸಹಿಸಬೇಕಾದ ಅನಿವಾರ್ಯತೆ... ಬೇಡದ ಬಸಿರುಗಳು... ಬಸಿರನ್ನು ಹಿಂಸ್ರವಿಧಾನದಲ್ಲಿ ನಿವಾರಿಸುವ ಗಂಡ... ವಿಪರೀತ ರಕ್ತಸ್ರಾವ, ನೋವು, ತಲ್ಲಣಗಳು... ಪ್ರಾಣಿಗೂ ಕಡೆಯಾದ ನರಕ ಸದೃಶ ಬದುಕು! ನಿಜಕ್ಕೂ ಅವಳ ದೇಹವೇ ಅವಳ ವಿಧಿ! ಎಂಬ ಮಾತನ್ನು ನೆನಪಿಸುತ್ತ ನಮ್ಮನ್ನು ಕಲಕಿಬಿಡುತ್ತವೆ. ಇಪ್ಪತ್ತನೆಯ ಶತಮಾನದಲ್ಲೂ ಬೆಂಗಳೂರಿನಂತಹ 'ಸುಸಂಸ್ಕೃತ ನಗರ'ದಲ್ಲೂ ಇಂಥ ಅನಾಗರಿಕ ಬದುಕು ಇತ್ತಾ? ಎಂಬ ಪ್ರಶ್ನೆಗಳೆಸೆಯುತ್ತವೆ.

ಪಾತಿವ್ರತ್ಯದ ಪರಿಕಲ್ಪನೆಯ ಮೂಲವೇ ಹೆಣ್ಣಿನ ಲೈಂಗಿಕತೆಯನ್ನು ನಿರ್ಬಂಧಿಸುವುದು. ಅದನ್ನು ಪುರುಷನ 'ಒಡೆತನ'ಕ್ಕೆ ಒಳಪಡಿಸುವುದು. ಇಲ್ಲಿ ಸಾಂಗತ್ಯದ ಭಾವ ಕ್ಷೀಣವಾಗಿ 'ಒಡೆತನ'ದ ಭಾವವೇ ಅಬ್ಬರಿಸತೊಡಗಿದಾಗ ನಿರ್ಬಂಧ-ಹಿಂಸೆ ಛಿಲ್ಲನೆ ಮೇಲೇಳುತ್ತದೆ. ನೀಲಿ ಚಿತ್ರಗಳನ್ನು ನೋಡುತ್ತಾ ಅದರ ವಿಕೃತಿಗಳನ್ನೆಲ್ಲ ದಿನವಿಡೀ ದುಡಿದು ಹೆಣವಾದ ಹೆಂಡತಿಯ ಮೇಲೆ ಪ್ರಯೋಗಿಸುವ ಗಂಡ, ಇದನ್ನೆಲ್ಲ ಯಾರ ಬಳಿಯೂ ಹೇಳಿಕೊಳ್ಳಲಾಗದ ಮೂಕ ವೇದನೆ, ತನಗಾಗಿ ಯೋಚಿಸಲು ಸಮಯ, ಸ್ಥಳ ಎರಡೂ ಇಲ್ಲದ ಕೂಡು ಕುಟುಂಬದ ಅಸಹನೀಯ ಬದುಕು, ಬೆಲೆಯಿಲ್ಲದ, ಅಲ್ಪ ಕೃತಜ್ಞತೆಯೂ ಇಲ್ಲದ ಗಾಣದೆತ್ತಿನಂತಹ ದುಡಿಮೆ... ತನ್ನನ್ನು ಹೇಗೆ ಅಸಹಾಯಕತೆಯ ಪಾತಾಳಕ್ಕೆ ತಳ್ಳುತ್ತ ಹೋಯಿತೆಂಬುದನ್ನು ಇಲ್ಲಿ ಎಳೆಎಳೆಯಾಗಿ ಕಟ್ಟಿಕೊಟ್ಟಿದ್ದಾರೆ ವಿಜಯಮ್ಮ. ಬದುಕಿಡೀ ಸಂಶಯದಿಂದ ಪೀಡಿತನಾದ ಗಂಡ, ಅದೇ ಸಂಶಯ, ಕೀಳರಿಮೆಗಳಿಂದ ನಲುಗುತ್ತಾ ಹಿಂಸೆಯನ್ನು ಹೆಚ್ಚು ಮಾಡುತ್ತಲೇ ಹೋಗುತ್ತಾನೆ. ಕೊನೆಗೆ ಅದೇ ಅವನ ಅಭಿವ್ಯಕ್ತಿಯ ಭಾಷೆಯಾಗಿಬಿಡುತ್ತದೆ! ನಾಲ್ಕು ಗೋಡೆಗಳ ನಡುವೆ ನಡೆಯುವ ಈ ಹಿಂಸಾ ಕ್ರಿಯೆ ಬಹಿರಂಗವಾಗಿ ನಡೆದಾಗ ವಿಜಯಮ್ಮನ ಬದುಕಿನಲ್ಲಿ ಹಠಾತ್ ತಿರುವು ಹಾಗೂ ಅಚಾನಕ್ ಧೈರ್ಯದ ಪ್ರವೇಶವಾಗಿ ಬಿಡುತ್ತದೆ. "ಆತ ನನ್ನನ್ನು ಎಳೆದಾಡಿದ... ತನ್ನ ಬೂಟುಗಾಲಿನಿಂದ ನನ್ನನ್ನು ರಸ್ತೆಯಲ್ಲಿ ಉರುಳಿಸತೊಡಗಿದ. ಟ್ಯಾಕ್ಸಿ ಸ್ಟ್ಯಾಂಡಿನಿಂದ ಹತ್ತಿರ ಕೃಷ್ಣರಾವ್ ಪಾರ್ಕ್‌ವರೆಗೂ ಉರುಳಿಸುತ್ತಲೇ ಇದ್ದ. ರಸ್ತೆಯ ಎರಡೂ ಬದಿ ಓಡಾಡುತ್ತಿದ್ದ ವಾಹನಗಳು ಬ್ರೇಕ್ ಹಾಕಿದವು... ಸಾಲುಗಟ್ಟಿ ನಿಂತವು... ಜನ ನುಗ್ಗಿ ನುಗ್ಗಿ ಬಂದರು. ನನ್ನ ಕೈಯಲ್ಲಿ ಆಗಷ್ಟೇ ಅಂಗಡಿಯಲ್ಲಿ ಬದಲಾಯಿಸಿ ತಂದಿದ್ದ ನನ್ನ ಮಗನ ಬೂಟುಗಳಿದ್ದವು... ಗಟ್ಟಿಯಾಗಿ ಹಿಡಿದಿದ್ದೆ. ಅದು ಬಿದ್ದು ಹಾಳಾಗಬಾರದು, ಮಗನಿಗೆ ಶಾಲೆಗೆ ಹೋಗಲು ತೊಂದರೆ ಆಗುತ್ತೆ ಎಂಬ ಒಳಗಿನ ಆತಂಕವಿರಬಹುದೇನೋ. ಜನರ ಹಾಹಾಕಾರ – ನನ್ನ ಚೀರಾಟ –ದಿಗ್ಭ್ರಮೆ... ಆತ ದೂಡುತ್ತಲೇ ಇದ್ದ. ಅದ್ಯಾವ ದೈತ್ಯ ಆತನ ಒಳಗೆ ಹೊಕ್ಕಿದ್ದನೋ..." ...ಹೀಗೆ ವಿಜಯಮ್ಮ ಬದುಕಿನ ಕರಾಳ ಮುಖಗಳನ್ನು ತೆರೆದಿಡುತ್ತಲೇ ಹೋದಂತೆ ಯಾರೇ ಆದರೂ ಒಂದು ಸಲ ಸ್ತಬ್ಧರಾಗದೇ ಇರಲು ಸಾಧ್ಯವಿಲ್ಲ!

ಅಲ್ಲಿಗೆ ಮರ್ಯಾದೆ, ಪ್ರತಿಷ್ಠೆ, ಪರಂಪರೆ... ಏನೆಲ್ಲ ಸಮರ್ಥನೆಗೂ ತಾಳದ ತಾಳಿ ಕಳಚಿಬೀಳುತ್ತದೆ. ಆ ಕ್ರೌರ್ಯದ ಉತ್ತುಂಗದಲ್ಲೇ ಸ್ವಾತಂತ್ರ್ಯದ ಬದುಕಿನ ಬೀಜ ಮೊಳಕೆಯೊಡೆಯುತ್ತದೆ. 'ಇನ್ನು ಸಾಕು' ಎಂಬ ನಿರ್ಧಾರವೊಂದು ಸದ್ದಿಲ್ಲದೆ ಹುಟ್ಟುತ್ತದೆ. ಇದಕ್ಕೆ ಪೂರಕವಾಗಿ ಅನೇಕ ಪುರುಷರ ಬೆಂಬಲ-ಸಹಕಾರಗಳು ಅವರಿಗೆ ಲಭಿಸುತ್ತವೆ. ಅದರಲ್ಲಿ ಅಪ್ಪ, ಚಿಕ್ಕಪ್ಪರಂಥವರೂ ಇದ್ದರು. ನಾಟಕ-ಸಾಹಿತ್ಯ ಕ್ಷೇತ್ರದ ಪ್ರಸಿದ್ಧ ಪುರುಷರೂ ಇದ್ದರು. ಆದರೂ ಅನುದಿನದ ಹೋರಾಟ ಮಾತ್ರ ಹೆಣ್ಣಿನದೇ. ಎಂಥ ಸವಾಲಿಗೂ ಮೈಕೊಡುವ ಛಲ. ಆ ಛಲದ ಹಿಂದೆ ಪ್ರೇರಣೆಯಾಗಿ ನಿಂತ ಇಬ್ಬರು ಗಂಡುಮಕ್ಕಳು. ಅವರ ಬದುಕಿನ ಕ್ಷಿತಿಜವನ್ನು ಹಿಗ್ಗಿಸಿದ ಸಂಜೆ ಕಾಲೇಜಿನ ಶಿಕ್ಷಣ, ಪತ್ರಕರ್ತೆಯಾಗಿ ದುಡಿಯಲು ಅವಕಾಶ ಕೊಟ್ಟ ಪತ್ರಿಕೆಗಳು, ರಂಗಭೂಮಿ, ಸಾಹಿತ್ಯಕ್ಷೇತ್ರ ಎಲ್ಲ! ನಂತರದ ಬದುಕಿನ ಈ ಬಗೆಯ ಬೆಳವಣಿಗೆ ಮಾತ್ರ ಬೆರಗು ಹುಟ್ಟಿಸುತ್ತದೆ. ಇಷ್ಟು ದಿನ ಈ ಧೈರ್ಯ, ಈ ಪ್ರತಿಭೆ ಎಲ್ಲಿ ಅಡಗಿತ್ತು ಎಂಬ ಬೆರಗು ಅದು. ಹೌದು, ಪ್ರತಿ ಹೆಣ್ಣಿನಲ್ಲೂ ಒಬ್ಬ ವಿಜಯಮ್ಮ ಇರುತ್ತಾಳೆ. ಅವಳನ್ನು ಕಾಣುವ, ಅವಳನ್ನು ಬಿಡುಗಡೆಗೊಳಿಸುವ ಸಂಕಲ್ಪ ಬೇಕು, ಅಷ್ಟೆ! ಆ ಕ್ಷಣಗಳೇ ಬದುಕಿನ ನಿರ್ಣಾಯಕ ಘಟ್ಟ.

"ಇದನ್ನು ಪರಿತ್ಯಕ್ತ ಮಹಿಳೆಯ ಜೀವನಗಾಥೆ ಎಂದುಕೊಳ್ಳಲು ಮನಸ್ಸೊಪ್ಪುವುದಿಲ್ಲ, ನಾನೇ ಗಂಡನಿಂದ ದೂರ ಸರಿದೆ" ಎಂದು ಈಗ ನಿರಾಳವಾಗಿ ಹೇಳುತ್ತಾರೆ ವಿಜಯಮ್ಮ. "ಮುಂದಿನ ಜೀವನಯಾತ್ರೆ 'ಸಾಗಾ ಆಫ್ ಡೆಸರ್ಟೆಡ್ ವುಮನ್' ಅನ್ನಲೇ? ನನಗೆ ಈ ತ್ಯಕ್ತ, ಡೆಸರ್ಟೆಡ್‌ನಂಥ ಶಬ್ದಗಳು ಹಿಡಿಸುವುದಿಲ್ಲ. ಓದುಗರು ಇದೆಂಥ ಪ್ರಯಾಣ ಎಂದು ನಿರ್ಧರಿಸಲಿ". "ಹಾಗೆ ನೋಡಿದರೆ ನಾನು ಏನನ್ನಾದರೂ ಆಯ್ಕೆ ಮಾಡಿಕೊಂಡೆನೇ? ಆಯ್ಕೆ-ಅಗತ್ಯಗಳ ಬಗ್ಗೆ ಯೋಚಿಸುವುದಕ್ಕೂ ಮೊದಲೇ ಅವೆಲ್ಲ ನನ್ನ ಉಡಿಗೆ ಬಿದ್ದವು. ಉಡಿಯಲ್ಲಿ ಕೆಂಡ ತುಂಬಿತ್ತೋ ಕೆಂಡಸಂಪಿಗೆಯೇ ತುಂಬಿತ್ತೋ ನೋಡಲೂ ಇಲ್ಲ. ಹೊಟ್ಟೆಗೆ ಒತ್ತಿ ಕಟ್ಟಿಕೊಂಡೆ, ಒಡಲು ಬೆಂದದ್ದೂ ಹೌದು... ಆಗ ಈಗ ಹಿತವೆನಿಸುವ ಬೆಚ್ಚಗಿನ ಅನುಭವವೂ ಆಗಿರಬಹುದು!... 'ಗಂಡ ಬಿಟ್ಟವಳು' ಎಂಬ ಪಟ್ಟ ಹೊರಲು ಹೆದರಿ ಎಲ್ಲ ಹಿಂಸೆಗಳನ್ನೂ ಸಹಿಸಿಕೊಳ್ಳುವ ಅನಿವಾರ್ಯತೆ ಹೆಣ್ಣಿಗೆ. ಜೊತೆಗೆ ಆರ್ಥಿಕ ಅವಲಂಬನೆ ಬೇರೆ. ಸ್ವತಂತ್ರ, ದುಡಿಯುವ ಹೆಣ್ಣನ್ನು ಒಪ್ಪಿಕೊಳ್ಳಲು ಅಂದಿನ ಸಮಾಜದ ಮನಃಸ್ಥಿತಿ ಸಿದ್ಧವಾಗಿರಲೂ ಇಲ್ಲ. ಬೆನ್ನಿಗೆ ನಿಂತವರೆಲ್ಲ ಹಿಂದೆ ಸರಿದರೂ ನೆಲಕಚ್ಚಿ, ಹಠತೊಟ್ಟು ನಿಲ್ಲುವ ಮರದಂತೆ ವಿಜಯಮ್ಮ ಭಾಸವಾಗುತ್ತಾರೆ. ನಾಶವಾಗಿ ಹೋಗಬಹುದಾಗಿದ್ದ ಬದುಕನ್ನು ಅತ್ಯಂತ ಕ್ರಿಯಾಶೀಲವಾಗಿ ಕಟ್ಟಿಕೊಂಡಿದ್ದು ಅವರ ಈ ಜೀವನಯಾನದ ಹಿರಿಮೆ. ರಂಗಭೂಮಿ, ಸಾಹಿತ್ಯ, ಸಿನಿಮಾ, ಪತ್ರಿಕೋದ್ಯಮ ಹೀಗೆ ಹಲವು ರಂಗಗಳಲ್ಲಿ ವಿಸ್ತರಿಸಿಕೊಂಡಿರುವ ವಿಜಯಮ್ಮ ಸ್ವಯಂ ವಿಕಾಸದ ಒಂದು ಮಾದರಿ ನಮಗೆ.

'ಕುದಿ ಎಸರು' ಎಂಬ ಆತ್ಮಕಥಾನಕವನ್ನು ಕಟ್ಟುವಾಗಲೂ ಅವರ ವಿಕಾಸಶೀಲ ಮನಸ್ಸಿನ ಪಕ್ವತೆ ಅನುಭವಕ್ಕೆ ಬರುತ್ತದೆ. ಆದ್ದರಿಂದಲೇ ಅವರಿಗೆ ಬದುಕು ಕಪ್ಪು-ಬಿಳುಪುಗಳಲ್ಲಿ ಮಾತ್ರ ಕಾಣುವುದಿಲ್ಲ. ಸರ್ವಚಟಗಳಿಗೂ ದಾಸನಾಗಿದ್ದ ತಂದೆಯಲ್ಲೂ ಉಜ್ವಲ ಮಾನವೀಯತೆ, ತಾಯಿಯ ಮಮತೆಯನ್ನವರು ಕಾಣುತ್ತಾರೆ. ಗಂಡನ ಕ್ರೌರ್ಯದಲ್ಲೂ ಅವನ ಅಸಹಾಯಕತೆಯನ್ನು ಗುರುತಿಸುತ್ತಾರೆ. ಅಜ್ಞಾನದಿಂದ ಕ್ಷುಲ್ಲಕವಾಗಿ ವರ್ತಿಸುವ ಬಂಧುಗಳನ್ನೂ ಅವರು ಕ್ಷಮಿಸುತ್ತಾರೆ. ಸಿದ್ಧ ನೈತಿಕತೆಗಿಂತ ಮಾನವೀಯ ತುಡಿತಗಳು ಅವರಿಗೆ ಮುಖ್ಯವಾಗುತ್ತವೆ. ತಮ್ಮ ಬದುಕಿನ ದಾರುಣತೆಯನ್ನು ಚಿತ್ರಿಸುತ್ತಲೇ ಆ ಬದುಕಿನ ಸಾಂಸ್ಕೃತಿಕ ಸೌಂದರ್ಯವನ್ನು ತೋರಿಸಲು ಅವರು ಮರೆಯುವುದಿಲ್ಲ. ಅಡಿಗೆ, ಉಡುಗೆ, ಹಬ್ಬ, ಹರಿದಿನ ಆಚರಣೆಗಳಲ್ಲಿ ಸಮೃದ್ಧ ಸಾಂಸ್ಕೃತಿಕ ವಿವರಗಳಿವೆ. ಅಂದಿನ ಬೆಂಗಳೂರಿನ ಸಾಂಸ್ಕೃತಿಕ ಲೋಕದ ಚಿತ್ರಗಳಿವೆ. ಸಾಹಿತ್ಯ, ಪತ್ರಿಕೋದ್ಯಮ... ಅಲ್ಲಿನ ಒಳಸುಳಿಗಳು ತೆರೆದುಕೊಳ್ಳುತ್ತವೆ. ಕರ್ನಾಟಕ ಲೇಖಕಿಯರ ಸಂಘದ ಬೆಳವಣಿಗೆ... ಸ್ತ್ರೀಯರು ಸಾಹಿತ್ಯ ಹಾಗೂ ಕಲಾಕ್ಷೇತ್ರಗಳ ನಾಯಕತ್ವ ವಹಿಸುವಂತಹ ವಾತಾವರಣ ನಿಧಾನವಾಗಿ ವಿಕಾಸವಾಗುತ್ತಿರುವ ವಿವರಗಳೆಲ್ಲ ಅಲ್ಲಿ ಲಭ್ಯವಾಗುತ್ತವೆ. ಮಾಸ್ತಿ, ಕಂಬಾರರಂತಹ ಹಿರಿ ಜೀವಗಳ ಔದಾರ್ಯ, ಕಿರಿಯರ ಬೆಂಬಲಗಳು ಮನ ತುಂಬುತ್ತವೆ. ತೆಲುಗು – ತಮಿಳು ಭಾಷಿಕ ಪರಿಸರ, ಸಾಮಾಜಿಕ ರಾಜಕೀಯ ಚಿತ್ರಗಳೂ ಅಲ್ಲಲ್ಲಿ ಬೆರೆಯುತ್ತ ಆ ಕಾಲದ ಚರಿತ್ರೆಯನ್ನು ಕಟ್ಟುವಲ್ಲಿ ಒಂದು ಭಾಗವಾಗಿ ಬೆರೆಯುತ್ತವೆ.

ಇನ್ನು 'ಕುದಿ ಎಸರು' ಎಂಬ ಶೀರ್ಷಿಕೆಯೂ ಕೂಡ ಕುದಿದು ಕುದಿದೇ ಅನ್ನವಾಗಿ ವಿಕಾಸ ವಾಗಬೇಕಾದ ಸತ್ವವನ್ನು ಹೇಳುತ್ತಿದೆ. ಕುದಿಯುವುದು ನೋವಿನ ಅನುಭವವಾದರೂ ಮನಸ್ಸು-ಪ್ರಜ್ಞೆಗಳ ವಿಕಾಸದಲ್ಲಿ ಕುದಿತದ ಪಾಲೂ ಇದೆಯಲ್ಲ! ಓದಿನ ಕೊನೆ ಗೊಂದು 'ಆಹ್'! ಎಂಬ ಉದ್ಗಾರ ಹೊಮ್ಮುತ್ತದೆ. ವಿಜಯಮ್ಮನ ಚೈತನ್ಯಕ್ಕೊಂದು ಸಲಾಂ.

ಗೀತಾ ವಸಂತ
ಸಹಾಯಕ ಪ್ರಾಧ್ಯಾಪಕರು, ವಿ.ವಿ. ವಿಜ್ಞಾನ ಕಾಲೇಜು
ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು





## ಸಾಹಿತ್ಯದ ಮೂಲಕವೂ ಸಾಧ್ಯ

# ವಿಜ್ಞಾನ ಅರಿವು

ವಿಜ್ಞಾನವನ್ನು ಸಾಹಿತ್ಯೀಕರಿಸುವುದು ಸಾಧ್ಯವೇ ಎಂಬ ಅನುಮಾನ ಸಹಜ. ಇದಕ್ಕೆ ಕಾರಣ ನಾವು ಪಡೆಯುತ್ತಿರುವ ಶಿಕ್ಷಣವು ವಿಜ್ಞಾನಕ್ಕೂ, ಸಾಹಿತ್ಯಕ್ಕೂ ಸಂಬಂಧವೇ ಇಲ್ಲವೆಂಬಂತಹ ಮನೋಭಾವವನ್ನು ರೂಢಿಸಿದೆ. ವಿಜ್ಞಾನ ಸಾಹಿತ್ಯ ಇತ್ತೀಚಿನ ದಿನದ್ದಲ್ಲ, ಪ್ರಾಚೀನ ಸಾಹಿತ್ಯದಲ್ಲಿಯೇ ಶಾಸ್ತ್ರಕಾವ್ಯ ಎಂಬ ಹೆಸರಿನಲ್ಲಿ ಸ್ವಲ್ಪ ಮಟ್ಟಿನ ವಿಜ್ಞಾನ ಸಾಹಿತ್ಯ ರಚನೆಯಾಗಿದೆ. ವಿಜ್ಞಾನವನ್ನು ಹೆಚ್ಚು ಜನರಿಗೆ ತಲುಪಿಸಲು, ಜನಪ್ರಿಯಗೊಳಿಸಲು ಅದನ್ನು ಸಾಹಿತ್ಯೀಕರಿಸಬೇಕು ಎಂಬ ಪ್ರಯತ್ನವನ್ನು ಪ್ರಾಚೀನರು ಮಾಡಿದ್ದರು.

ವಿಜ್ಞಾನ ಎಲ್ಲರ ಬದುಕಿನ ಭಾಗವಾಗಿದೆ. ಗಣಕಯಾಂತ್ರಿಕ ಯುಗದಲ್ಲಿ ಬದುಕುತ್ತಿರುವ ವ್ಯಕ್ತಿ ಎಲ್ಲಿಯೇ ಇರಲಿ, ಅವನಿಗೆ ಬೇಕಿರಲಿ ಬೇಡವಾಗಿರಲಿ, ವಿಜ್ಞಾನದ ಒಂದಲ್ಲ ಒಂದು ಪ್ರಭಾವದಿಂದ ಹೊರತಾಗಿ ಜೀವಿಸಲಾರ ಎಂಬುದು ನಮಗೆಲ್ಲರಿಗೂ ತಿಳಿದಿರುವುದೇ ಆಗಿದೆ. ವಿಜ್ಞಾನ ನಮ್ಮ ಬಾಹ್ಯ ಬದುಕಿನ ಭಾಗವಾಗಿರುವಂತೆ ನಮ್ಮ ಅಂತರ್‌ಮನದ ಸತ್ವವಾಗಿಲ್ಲ. ನಮ್ಮ ಆಚಾರ ವಿಚಾರಗಳನ್ನು ಹಾಗೂ ಚಿಂತನ ಧಾಟಿಯನ್ನು ರೂಪಿಸಿಕೊಳ್ಳಲು ನೆರವಾಗುವ ಸಿದ್ಧಾಂತ ಧಾರೆಯಾಗಿ ನಮ್ಮೊಳಗೆ ಬೆಸೆದುಕೊಂಡಿಲ್ಲ. ವಿಜ್ಞಾನದ ಬಗ್ಗೆ ಅನೇಕರಲ್ಲಿ ತಪ್ಪುಗ್ರಹಿಕೆ ಇದ್ದು, ವಿಜ್ಞಾನವನ್ನು ಕೇವಲ ಪ್ರಯೋಗಾಲಯದಲ್ಲಿ ನಡೆಸುವ ಪ್ರಯೋಗಗಳನ್ನು ಕುರಿತದ್ದಾಗಿದೆ ಎಂದು ತಿಳಿದಿರುವರು. ಆದರೆ ವಿಜ್ಞಾನ ಅದನ್ನು ಒಳಗೊಂಡಿರುವುದಲ್ಲದೇ ಅದನ್ನು ಮೀರಿದ್ದೂ ಆಗಿದೆ. ಇಡೀ ಬದುಕನ್ನು ಆವರಿಸಿಕೊಂಡಿರುವ ಮತ್ತು ಪ್ರಭಾವಿಸುವ ಒಂದು ಯಂತ್ರವಾಗಿದೆ. ಬಹುತೇಕರು ತಿಳಿದಿರುವಂತೆ ಸಾಧನ ಸಲಕರಣೆಗಳೇ ವಿಜ್ಞಾನವಲ್ಲ. ಅವೆಲ್ಲ ತಂತ್ರಜ್ಞಾನದ ಕೊಡುಗೆಗಳಷ್ಟೇ. ತಂತ್ರಜ್ಞಾನಕ್ಕೆ ಮೂಲ ವಿಜ್ಞಾನ. ವಿಜ್ಞಾನ ಅನ್ವಯ ತಂತ್ರಜ್ಞಾನ. ವಿಜ್ಞಾನ ಅರಿವಿನಷ್ಟೇ ಮುಖ್ಯವಾದದ್ದು, ಒಂದು ರೀತಿಯಲ್ಲಿ ವೈಜ್ಞಾನಿಕ ಚಿಂತನ ಕ್ರಮ, ಇನ್ನೊಂದು ರೀತಿಯಲ್ಲಿ ವೈಜ್ಞಾನಿಕ ಮನೋಭಾವ ವಿಜ್ಞಾನಕ್ಕಿಂತ ಮುಖ್ಯ. ಅದು ಬದುಕಿಗೊಂದು ದೃಷ್ಟಿಕೋನವನ್ನು ಒದಗಿಸುತ್ತದೆ. ಪ್ರತಿದಿನದ ಬದುಕಿನಲ್ಲಿ ಎದುರಾಗುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ತುಳಿಯಬೇಕಾದ ಹಾದಿ ತೋರಿಸುತ್ತದೆ.

ವೈಜ್ಞಾನಿಕ ಚಿಂತನ ಕ್ರಮದ ಮಹತ್ವವನ್ನು ಅನೇಕ ಕವಿಗಳು, ಸಾಹಿತಿಗಳು

**ಬಲಭೀಮ**

ವಿಜ್ಞಾನ ಎಲ್ಲರ ಬದುಕಿನ ಭಾಗವಾಗಿದೆ. ಗಣಕಯಾಂತ್ರಿಕ ಯುಗದಲ್ಲಿ ಬದುಕುತ್ತಿರುವ ವ್ಯಕ್ತಿ ಎಲ್ಲಿಯೇ ಇರಲಿ, ಅವನಿಗೆ ಬೇಕಿರಲಿ ಬೇಡವಾಗಿರಲಿ, ವಿಜ್ಞಾನದ ಒಂದಲ್ಲ ಒಂದು ಪ್ರಭಾವದಿಂದ ಹೊರತಾಗಿ ಜೀವಿಸಲಾರ ಎಂಬುದು ನಮಗೆಲ್ಲರಿಗೂ ತಿಳಿದಿರುವುದೇ ಆಗಿದೆ. ವಿಜ್ಞಾನ ನಮ್ಮ ಬಾಹ್ಯ ಬದುಕಿನ ಭಾಗವಾಗಿರುವಂತೆ ನಮ್ಮ ಅಂತರ್‌ಮನದ ಸತ್ವವಾಗಿಲ್ಲ. ನಮ್ಮ ಆಚಾರ ವಿಚಾರಗಳನ್ನು ಹಾಗೂ ಚಿಂತನ ಧಾಟಿಯನ್ನು ರೂಪಿಸಿಕೊಳ್ಳಲು ನೆರವಾಗುವ ಸಿದ್ಧಾಂತ ಧಾರೆಯಾಗಿ ನಮ್ಮೊಳಗೆ ಬೆಸೆದುಕೊಂಡಿಲ್ಲ. ವಿಜ್ಞಾನದ ಬಗ್ಗೆ ಅನೇಕರಲ್ಲಿ ತಪ್ಪುಗ್ರಹಿಕೆ ಇದ್ದು, ವಿಜ್ಞಾನವನ್ನು ಕೇವಲ ಪ್ರಯೋಗಾಲಯದಲ್ಲಿ ನಡೆಸುವ ಪ್ರಯೋಗಗಳನ್ನು ಕುರಿತದ್ದಾಗಿದೆ ಎಂದು ತಿಳಿದಿರುವರು. ಆದರೆ ವಿಜ್ಞಾನ ಅದನ್ನು ಒಳಗೊಂಡಿರುವುದಲ್ಲದೇ ಅದನ್ನು ಮೀರಿದ್ದೂ ಆಗಿದೆ. ಇಡೀ ಬದುಕನ್ನು ಆವರಿಸಿಕೊಂಡಿರುವ ಮತ್ತು ಪ್ರಭಾವಿಸುವ ಒಂದು ಯಂತ್ರವಾಗಿದೆ.

ಪ್ರಸ್ತಾಪಿಸಿದ್ದಾರೆ. ಈ ವಿಚಾರದಲ್ಲಿ ಮೊದಲು ನೆನಪಾಗುವುದು ರಾಷ್ಟ್ರಕವಿ ಕುವೆಂಪುರವರ ವಿಚಾರಕ್ರಾಂತಿಗೆ ಆಹ್ವಾನ ಮತ್ತು ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ಮುಂತಾದ ಉಪನ್ಯಾಸಗಳು ಮತ್ತು ಬರಹಗಳಲ್ಲಿ ಎಲ್ಲಾ ಜನರು ವೈಚಾರಿಕತೆಯನ್ನು ಬೆಳೆಸಿಕೊಳ್ಳ ಬೇಕೆಂದು ಕರೆ ನೀಡಿದ್ದಾರೆ. ಮೌಢ್ಯದ ವಿರುದ್ಧ, ವೈಚಾರಿಕತೆ ಮತ್ತು ವಿಜ್ಞಾನದ ಅರಿವಿನ ಪರವಾಗಿ ಅನೇಕ ಉಪನ್ಯಾಸಗಳನ್ನು ನೀಡಿದ್ದಾರೆ. ಮೌಢ್ಯತೆಯ ಮಾದರಿಯ ಹೊರದೂಡಲೈತನ್ನಿ। ವಿಜ್ಞಾನ ದೀವಿಗೆಯ ಹಿಡಿಯಬನ್ನಿ। ಎಂದು ಎಲ್ಲರಿಗೂ ಕಳಕಳಿಯ ಆಹ್ವಾನವಿತ್ತಿದ್ದಾರೆ. ಗ್ರಹಣದ ಬಗ್ಗೆ ನಮ್ಮಲ್ಲಿ ಅನೇಕ ಮೂಢನಂಬಿಕೆಗಳಿವೆ. ಅಂದು ಯಾರೂ ಹೊರಗೆ ಹೋಗಬಾರದು ಮತ್ತು ಗ್ರಹಣ ಕಾಲದಲ್ಲಿ ಏನನ್ನೂ ತಿನ್ನಬಾರದೆಂಬುದೂ ಅವುಗಳಲ್ಲಿ ಸೇರಿದೆ. ಗ್ರಹಣದ ಬಗ್ಗೆ ವೈಜ್ಞಾನಿಕ ಅರಿವುಳ್ಳವರೂ ಈ ಕಟ್ಟಳೆ ಮೀರಲು ಧೈರ್ಯ ತೋರುವುದಿಲ್ಲ. ಗ್ರಹಣದ ಸತ್ಯವನ್ನು ವಿಜ್ಞಾನ ಅರ್ಥಮಾಡಿಕೊಂಡು ಸುಮಾರು ೨೦೦ ವರ್ಷಗಳೇ ಕಳೆದಿದ್ದರೂ ಜನರ ನಂಬಿಕೆಗಳು ಬದಲಾಗಿಲ್ಲ. ಇಂಥ ನಂಬಿಕೆಗಳು ಅಚಲತೆಯನ್ನು ತೋರಿಸುತ್ತವೆ. ಧಾರ್ಮಿಕ ನಂಬಿಕೆಗಳೂ ವಿಮರ್ಶಿಸಿಕೊಂಡು ಬದಲಾಗಬೇಕು. ಇಂತಹ ಗುಣ ವಿಚಾರಕ್ಕೆ ಹೊಸ ಸತ್ಯದ ಬೆಳಕಿನಲ್ಲಿ ಬದಲಾಗುವ ತೆರೆದ ಮನಸ್ಸು ವಿಜ್ಞಾನಕ್ಕಿದೆ. ಇದೇ ವಿಜ್ಞಾನದ ವೈಶಿಷ್ಟ್ಯ. ಗ್ರಹಣದ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನಂತಹ ಅನೇಕ ಸಂಸ್ಥೆಗಳು ಗ್ರಹಣಕ್ಕೆ ಸಂಬಂಧಿಸಿದ ವಿಜ್ಞಾನ ಸತ್ಯವನ್ನು ಪ್ರಚುರಪಡಿಸಲು ಅನೇಕ ಕಾರ್ಯಕ್ರಮಗಳು, ಉಪನ್ಯಾಸಗಳನ್ನು ಹಮ್ಮಿಕೊಂಡು ಗ್ರಹಣ ಪ್ರಕೃತಿಯಲ್ಲಿ ನಡೆಯುವ ಸಹಜ ಪ್ರವೃತ್ತಿ ಎಂದು ಮನವರಿಕೆ ಮಾಡಿಸಿಕೊಡುವಲ್ಲಿ ಯಶಸ್ವಿಯಾಗಿವೆ. ಜನರು ಗ್ರಹಣಕಾಲದಲ್ಲಿ ಹೊರಬಂದು ಆಹಾರ ಸೇವಿಸುವಂತೆ ಮಾಡಿದ್ದು ತಮಗೆಲ್ಲ ಗೊತ್ತೇ ಇದೆ. ಇದು ಆಚಾರ ಮತ್ತು ವಿಚಾರಗಳ ನಡುವಿನ ಅಂತರವನ್ನು ಕಡಿಮೆ ಮಾಡಿದ ಪ್ರಾಯೋಗಿಕ ಕ್ರಿಯೆ ನಂಬಿಕೆಗಳ ಮೂಲವನ್ನು ವಿಜ್ಞಾನದ ಅರಿವಿನ ಬಲದಿಂದ ಹಿಡಿದು ವೈಜ್ಞಾನಿಕ ಚಿಂತನಕ್ರಮದ ಬೆಂಬಲದಿಂದ ಅಲ್ಲಾಡಿಸಿ ಹೊಸ ನಂಬಿಕೆಗಳನ್ನು ಪುನರ್‌ರೂಪಿಸುವುದರ ಮೂಲಕವೇ ನಂಬಿಕೆಗಳನ್ನು ವೈಚಾರಿಕಗೊಳಿಸುವುದು ಸಾಧ್ಯ ಎಂಬ ರಾಬರ್ಟ್‌ಸನ್ನರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಹಿರಿಯ ವಿಜ್ಞಾನ ಸಾಹಿತಿ ಜೆ. ಆರ್. ಲಕ್ಷ್ಮಣರಾಯರು ವಿಜ್ಞಾನಕ್ಕೊಂದು ಸಾಂಸ್ಕೃತಿಕ ಮೌಲ್ಯವಿದೆ ಎನ್ನುತ್ತಾರೆ. ಅವರು ವಿಜ್ಞಾನವೆಂಬುದು ತಂತ್ರವಿದ್ಯೆಯ ಮುಖಾಂತರ ನಮ್ಮ ಪ್ರಾಪಂಚಿಕತೆ ಅವಶ್ಯಕತೆಗಳನ್ನು ಪೂರೈಸಬಲ್ಲದೇ ವಿನಾ ಅದರ ಅಧ್ಯಯನದಿಂದ ಸಾಧ್ಯವಿಲ್ಲ, ಯಾವ ಬಗೆಯ ಸಂಸ್ಕಾರವೂ ದೊರಕದು ಎಂದು ಯಾರಾದರೂ ಭಾವಿಸಿದರೆ ಅದು ತಪ್ಪು. ಸಮಸ್ಯೆಗಳ ಪರಿಶೀಲನೆಗೆ




ವಿಜ್ಞಾನ ಒಂದು ವಿಶಿಷ್ಟ ವಿಧಾನವನ್ನು ಅನುಸರಿಸುತ್ತ ಬಂದಿದೆ. ಈ ವೈಜ್ಞಾನಿಕ ದೃಷ್ಟಿ ಮತ್ತು ವಿಜ್ಞಾನ ವಿಧಾನಗಳೇ ಅಪರಿಮಿತವಾದ ಸಾಧನೆಗಳಿಗೆ ಕಾರಣ.

ಇಂಥ ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳುವುದರಿಂದ, ವಿಜ್ಞಾನ ಮಾರ್ಗವನ್ನು ಮೈಗೂಡಿಸಿಕೊಳ್ಳುವುದರಿಂದ ದೊರಕುವ ಸಂಸ್ಕಾರಕ್ಕಿಂತ ಮಿಗಿಲಾದುದು ಯಾವುದು ? ಇನ್ನೂ ಸಾರ್ವತ್ರಿಕ ಮಾನ್ಯತೆ ಪಡೆದಿರುವ ಪ್ರಜಾಸತ್ತಾತ್ಮಕ ಜೀವನ ಮಾರ್ಗದ ತಿರುಳಾದರೂ ಏನು ? ವಿಜ್ಞಾನ ಮಾರ್ಗದ ವಿಶಿಷ್ಟ ಲಕ್ಷಣಗಳಾಗಿರುವ ಆಲೋಚನಾ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಪರಸ್ಪರ ಗೌರವ, ಪರಾಭಿಮತ, ಸಹಿಷ್ಣುತೆ ಇವೇ ಅಲ್ಲವೇ ? ಇಂಥ ಸಂಸ್ಕಾರವನ್ನು ದೊರಕಿಸಿಕೊಡುವಂತಹ ವಿಜ್ಞಾನ ಜನಕ್ಕೆ ಬೇಕು ಎನ್ನುತ್ತಾರೆ.

ಪ್ರಶ್ನಿಸುವ ಮೂಲಕ ಪ್ರಾರಂಭವಾಗುವ ವಿಶ್ಲೇಷಣೆ ಮತ್ತು ವಿಮರ್ಶೆ ಕೇವಲ ವಿಜ್ಞಾನ ವಸ್ತು ವಿಷಯದ ಅಧ್ಯಯನಕ್ಕಷ್ಟೇ ಸೀಮಿತವಾದುದಲ್ಲ. ಅದು ಮನುಷ್ಯನ ಬದುಕಿಗೆ ಸಂಬಂಧಿಸಿದ ಎಲ್ಲ ಜ್ಞಾನ ಶಾಖೆಗಳನ್ನು ಕುರಿತು ಸಲ್ಲುವ ಮಾತಾಗಿದೆ. ಅದು ರಾಜಕೀಯವಾಗಿರಬಹುದು, ಸಾಹಿತ್ಯಿಕವಾಗಿರಬಹುದು, ಐತಿಹಾಸಿಕವಾಗಿರಬಹುದು. ವಿಜ್ಞಾನ ಸಾಹಿತ್ಯದ ದಿಗ್ಗಜ ಜಿ. ಟಿ. ನಾರಾಯಣರಾಯರು ತಾಕತ್ತಿನ ತಾಣದಿಂದ ಬರೆಯ ಬೇಕೆನ್ನುತ್ತಾರೆ. ತಾಕತ್ತಿನ ತಾಣವನ್ನು ಆಳವಾದ ಅಧ್ಯಯನ, ಅಭ್ಯಾಸ, ಚರ್ಚೆ, ಪರಿಶ್ರಮ, ಶ್ರದ್ಧೆ ಇವುಗಳಿಂದ ತಲುಪಬಹುದು. ಜನಪ್ರಿಯ ವಿಜ್ಞಾನ ಸಾಹಿತಿಗಳು, ವಿಜ್ಞಾನಿಗಳು ಮತ್ತು ಜನಸಾಮಾನ್ಯರ ನಡುವೆ ಸೇತುವೆಯಿದ್ದ ಹಾಗೆ. ವಿಜ್ಞಾನಿಗಳು ಸಂಶೋಧಿಸಿದ ಸತ್ಯಗಳು ಮತ್ತು ತಂತ್ರಜ್ಞರು ರೂಪಿಸಿದ ವಸ್ತುಗಳನ್ನು ಮೊದಲೇ ತಾವು ಮನಃಪೂರ್ವಕವಾಗಿ ಪ್ರಯತ್ನಿಸಿ, ಗಂಭೀರವಾಗಿ ಅಧ್ಯಯನ ಮಾಡಿ, ವಸ್ತು ವಿಷಯಗಳನ್ನು ಸಂಪೂರ್ಣ ಕರಗತಮಾಡಿಕೊಂಡು ಅನಂತರ ಸಾರ್ವಜನಿಕರ ಪ್ರಯೋಜನಕ್ಕೆ ಅರ್ಥವಾಗುವ ಮತ್ತು ರಂಜಿಸುವ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ವಿಜ್ಞಾನ ವಸ್ತು ವಿಷಯ ಎಲ್ಲರಿಗೂ ತಲುಪಿಸುವ ಕಾರ್ಯದಲ್ಲಿ ಇವರ ಪಾತ್ರವೇ ಅತ್ಯಂತ ಮಹತ್ವವಾದದ್ದು, ಜವಾಬ್ದಾರಿಯುತವಾದದ್ದು. ವಿಜ್ಞಾನದ ಅರಿವಿನ ಆಸೆ ಹೊತ್ತ ಎಲ್ಲರೂ ನೋಡುವುದು ಇವರ ಕಡೆಗೆ, ನಂಬುವುದು ಇವರನ್ನೇ, ಎಲ್ಲ ಜನಸಾಮಾನ್ಯರ ನಂಬಿಕೆಗೆ ಅರ್ಹವಾಗುವಂತೆ ಜನಪ್ರಿಯ ವಿಜ್ಞಾನ ಸಾಹಿತಿಗಳೂ ನಡೆದುಕೊಳ್ಳಬೇಕಾದ ಗುರುತರ ಜವಾಬ್ದಾರಿ ಇವರ ಮೇಲಿದೆ. ಅಂದರೆ ಜನಪ್ರಿಯ ಸಾಹಿತ್ಯ ರಚನೆ ಒಂದು ಜವಾಬ್ದಾರಿ. ಸತ್ಯದರ್ಶನ ಮಾಡಿಸುವ ಪ್ರಾಮಾಣಿಕ ಪ್ರಯತ್ನ, ಉಡಾಫೆಯಲ್ಲ, ಅದೊಂದು ಗಂಭೀರಯತ್ನ. ವಿಜ್ಞಾನ ಸಾಹಿತಿ ಜೆ. ಆರ್. ಲಕ್ಷ್ಮಣರಾಯರು, "ವಿಜ್ಞಾನ ಎಲ್ಲರಿಗೂ ಬೇಕು ಕನ್ನಡದಲ್ಲಿ ಜನಪ್ರಿಯ ವಿಜ್ಞಾನ–ವಸ್ತು ಶೈಲಿ ಮತ್ತು ವಿನ್ಯಾಸ ಲೇಖನದಲ್ಲಿ ಜನಪ್ರಿಯ ವಿಜ್ಞಾನ ಕರ್ತೃವಿಗೆ ಭಾಷೆಯ ಮೇಲೆ ಸೃಜನಶೀಲ ಲೇಖಕರಲ್ಲಿ ಹೆಚ್ಚಿನ ಪ್ರಭುತ್ವವಿರಬೇಕು; ಈ ದಿಸೆಯಲ್ಲಿ ಕಥೆ, ಕಾದಂಬರಿ, ಲಲಿತ ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳ ಜವಾಬ್ದಾರಿ ಹೆಚ್ಚಿನದು" ವಿಜ್ಞಾನ ಲೇಖಕರದು, ಎನ್ನುತ್ತಾರೆ. ವಾಸ್ತವವಾಗಿ ವಿಜ್ಞಾನ ಸಾಹಿತ್ಯ ಈಚಿನದಲ್ಲ. ನಮ್ಮ ಪ್ರಾಚೀನ ಸಾಹಿತ್ಯದಲ್ಲೇ ಶಾಸ್ತ್ರಕಾವ್ಯ ಎಂಬ ಹೆಸರಿನಲ್ಲಿ ಅಷ್ಟಿಷ್ಟು ವಿಜ್ಞಾನ ಸಾಹಿತ್ಯ ದೊರಕುತ್ತದೆ ಎಂಬುದು ಗಮನಾರ್ಹ. ಹಿಂದೆ ವಿಜ್ಞಾನ ಶಾಸ್ತ್ರ ಎಂಬ ಅರ್ಥವನ್ನು ಒಳಗೊಂಡಿದ್ದು ಈ ಶಾಸ್ತ್ರದಲ್ಲಿ. ನಾವು ಇವತ್ತು ವಿಜ್ಞಾನದ ವಿವಿಧ ಪ್ರಕಾರಗಳೆಂದು ಕರೆಯುತ್ತಿರುವ ವೈದ್ಯಕೀಯ, ಗಣಿತ, ಖಗೋಳ, ಕೃಷಿ ಇತ್ಯಾದಿ ವಿಷಯಗಳಿಗೂ ಸಂಬಂಧಪಟ್ಟ ವಿಚಾರಗಳು ಸೇರಿದ್ದವು.




**ಬಲಭೀಮ**
ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ, ಶಂಕರಘಟ್ಟ – ೫೭೭ ೪೫೧, ಶಿವಮೊಗ್ಗ ಜಿಲ್ಲೆ

# ಬಂಪರ್ ಅನುದಾನ ಹರಿದರೂ ಉದ್ಧಾರವಾಗದ ಕರ್ನಾಟಕದ ಈಶಾನ್ಯ ನಗರಗಳು

**ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ನಾನಾ ಯೋಜನೆಗಳ ಅಡಿ ಸಾಕಷ್ಟು ಅನುದಾನ ಹರಿದು ಬರುತ್ತಿದೆ. ಆದರೂ ಈಶಾನ್ಯ ಜಿಲ್ಲೆಗಳಲ್ಲಿ ಮೂಲ ಸೌಕರ್ಯಗಳ ಸೃಷ್ಟಿ, ನಿರ್ಮಾಣ, ನಿರ್ವಹಣೆಯಲ್ಲಿ ಅಧಿಕಾರಿಗಳ-ಜನಪ್ರತಿನಿಧಿಗಳ ಪಾತ್ರ ಮಹತ್ವದ್ದಾಗಿದ್ದರೂ ಅವರು ಹಿಂದೆ ಬಿದ್ದಿರುವುದು ಆ ನಗರಗಳತ್ತ ನೋಡಿದರೆ ಅಭಿವೃದ್ಧಿಯ ಹಿನ್ನಡೆ ಕಣ್ಣಿಗೆ ರಾಚುತ್ತದೆ.**

ದೇಶಕ್ಕೆ ಸ್ವಾತಂತ್ರ್ಯ ದೊರೆತು ೬೯ ವರ್ಷ ಗತಿಸಿ ೭೦ನೇ ವರ್ಷಕ್ಕೆ ಕಾಲಿಡುತ್ತಿದ್ದೇವೆ. ಭಾಷಾವಾರು ಪ್ರಾಂತಗಳ ರಚನೆಯಾಗಿ ೬೦ ವರ್ಷಗಳು ಕಳೆದವು. ಆದರೂ ಸಮಗ್ರ ಸರ್ವಾಂಗೀಣ ಅಭಿವೃದ್ಧಿಯ ಪರಿಪೂರ್ಣತೆ ಕರ್ನಾಟಕದಲ್ಲಿ ಗೋಚರಿಸುತ್ತಿಲ್ಲ. ಏಕೀಕೃತ ಕರ್ನಾಟಕದ (ಆಗ ಮೈಸೂರು) ಸರ್ವಾಂಗೀಣ ಪ್ರಗತಿಯೇ ಭಾಷಾವಾರು ಪ್ರಾಂತಗಳ ರಚನೆಯ ಮೂಲ ಉದ್ದೇಶವಾಗಿತ್ತು. ಆದರೆ ಕರ್ನಾಟಕದ ಈಶಾನ್ಯ ಭಾಗದ ಜಿಲ್ಲೆಗಳಲ್ಲಿ ಮೂಲ ಸೌಕರ್ಯಗಳೂ ಸೇರಿದಂತೆ ಒಟ್ಟಾರೆ ಪ್ರಗತಿಯ ಚಿತ್ರಣ ಇಂದಿಗೂ ಅಸ್ಪಷ್ಟ. ರಾಜ್ಯದ ಇತರೆ ಜಿಲ್ಲೆಗಳಿಗೆ ಹೋಲಿಸಿದರೆ ಬಹುತೇಕ ಎಲ್ಲ ರಂಗಗಳಲ್ಲಿಯೂ ಹಿನ್ನಡೆ ಎದ್ದು ಕಾಣುತ್ತದೆ. ಈಶಾನ್ಯ ಜಿಲ್ಲೆಗಳು ಅಂದರೆ, ಈಗ ಹೈದರಾಬಾದ್ ಕರ್ನಾಟಕದ ಪ್ರದೇಶವೆಂದು ಹೇಳುವ ಭಾಗದ (ಕನ್ನಡ ಭಾಷಿಕ ಪ್ರದೇಶಗಳಾದ ಬೀದರ್, ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ) ಜೊತೆಗೆ ಅದಕ್ಕೆ ಮುಂಬೈ ಕರ್ನಾಟಕ ಭಾಗದ ಅವಿಭಜಿತ ಬಿಜಾಪುರ ಜಿಲ್ಲೆಯ (ಈಗ ಬಾಗಲಕೋಟೆ, ಬಿಜಾಪುರ) ಕೆಲ ಪ್ರದೇಶಗಳನ್ನು ಸಹ ಸೇರಿಸಿಕೊಳ್ಳಬಹುದಾಗಿದೆ.

ಆಡಳಿತದ ಚುಕ್ಕಾಣಿ ಹಿಡಿದ ವಿವಿಧ ಪಕ್ಷಗಳ ಸರಕಾರಗಳೆಲ್ಲವೂ ಈ ಭಾಗದ ಸರ್ವಾಂಗೀಣ ಅಭಿವೃದ್ಧಿ ದೃಷ್ಟಿಯಿಂದ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಳ್ಳುತ್ತಲೇ ಬಂದಿವೆ. ಇದೇ ಉದ್ದೇಶಕ್ಕಾಗಿ ಪ್ರತ್ಯೇಕ ಅಭಿವೃದ್ಧಿ ಮಂಡಳಿಗಳನ್ನು ಸಹ ರಚಿಸಲಾಯಿತು. ಈಶಾನ್ಯ ಜಿಲ್ಲೆಗಳಿಗಾಗಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯನ್ನು ಸಹ ರಚಿಸಲಾಯಿತು. ಗುಲ್ಬರ್ಗ ವಿಭಾಗವನ್ನು ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಸೇರಿಸಲಾಯಿತು. ಗುಲ್ಬರ್ಗ ಮತ್ತು ಹುಬ್ಬಳ್ಳಿ-ಧಾರವಾಡದಲ್ಲಿ ಹೈಕೋರ್ಟ್‌ನ ಸಂಚಾರಿ ಪೀಠಗಳು ಕಾರ್ಯಾರಂಭ ಮಾಡಿದ ನಂತರ ಆಡಳಿತಾತ್ಮಕ ದೃಷ್ಟಿಯಿಂದ ಬಿಜಾಪುರ ಜಿಲ್ಲೆಯನ್ನು ಗುಲ್ಬರ್ಗ ಸಂಚಾರಿ ಪೀಠದ ವ್ಯಾಪ್ತಿಗೆ ಸೇರಿಸಲಾಯಿತು. ಅದೇ ರೀತಿ ಬಿಜಾಪುರ ಜಿಲ್ಲೆ ಸಾರಿಗೆ ವಿಭಾಗವನ್ನು ಈಶಾನ್ಯ ಸಾರಿಗೆ ಸಂಸ್ಥೆಯ ವ್ಯಾಪ್ತಿಗೆ ಒಳಪಡಿಸಲಾಯಿತು.

ಹೀಗೆ ರಾಜ್ಯದಲ್ಲಿನ ಈಶಾನ್ಯ ಪ್ರದೇಶದ ಜಿಲ್ಲೆಗಳಿಗೆ ವಿವಿಧ ರೀತಿಯ ಸವಲತ್ತುಗಳನ್ನು ಒದಗಿಸುತ್ತ ಬಂದರೂ ೨೦೦೧ರವರೆಗೂ ಅಲ್ಲಿ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಔದ್ಯೋಗಿಕ ಮತ್ತು ಆರ್ಥಿಕ ಸ್ಥಿತಿಗಳಲ್ಲಿ ಗಮನಾರ್ಹ ಬದಲಾವಣೆಗಳೇನೂ ಆಗಲಿಲ್ಲ. ಹಿಂದುಳಿದ ಪ್ರದೇಶಗಳೆಂಬ ಹಣೆಪಟ್ಟಿಯೂ ಬದಲಾಗಲಿಲ್ಲ. ಜಿಲ್ಲೆಗಳ ಪುನರ್ ವಿಂಗಡಣೆ ನಂತರ ಗುಲ್ಬರ್ಗ ವಿಭಾಗದ ಜಿಲ್ಲೆಗಳ ಸಂಖ್ಯೆ ಆರಕ್ಕೇರಿತು. ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳ ಭಾಗಗಳನ್ನು ವಿಭಜಿಸಿ ಕ್ರಮವಾಗಿ ಯಾದಗಿರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ರಚಿಸಲಾಯಿತು.

ರಾಜ್ಯದ ಒಟ್ಟಾರೆ ೧೭೫ (ಈಗ ೧೭೭) ತಾಲೂಕುಗಳಲ್ಲಿ ೩೯ ತಾಲೂಕುಗಳು ಅತ್ಯಂತ ಹೆಚ್ಚು ಹಿಂದುಳಿದ ತಾಲೂಕುಗಳೆಂದು, ೪೦ ಅತಿ ಹಿಂದುಳಿದ ತಾಲೂಕುಗಳೆಂದೂ, ೩೫ ಹಿಂದುಳಿದ ತಾಲೂಕುಗಳೆಂದು ಮತ್ತು ಉಳಿದ ೬೧ ತಾಲೂಕುಗಳನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಪ್ರದೇಶಗಳೆಂದು ಗುರುತಿಸಲಾಯಿತು. ವಿಚಿತ್ರದ ಸಂಗತಿ ಎಂದರೆ ಗುಲ್ಬರ್ಗ ವಿಭಾಗದ ಒಟ್ಟು ೩೧ ತಾಲೂಕುಗಳಲ್ಲಿ ೨೮ ತಾಲೂಕುಗಳು ಹಿಂದುಳಿದವುಗಳಾಗಿದ್ದವು. ಅವುಗಳಲ್ಲಿ ೨೧ ಅತ್ಯಂತ ಹೆಚ್ಚು ಹಿಂದುಳಿದ, ೫ ಹೆಚ್ಚು ಹಿಂದುಳಿದ ಮತ್ತು ೨ ಹಿಂದುಳಿದ ತಾಲೂಕುಗಳಾಗಿದ್ದವು. ಕೇವಲ ಮೂರು ತಾಲೂಕುಗಳನ್ನು ಮಾತ್ರ ಅಭಿವೃದ್ಧಿ ಹೊಂದಿದ ತಾಲೂಕುಗಳೆಂದು ಗುರುತಿಸಲಾಗಿತ್ತು. ಅಂದರೆ ಹಿಂದುಳಿದಿರುವಿಕೆಯ ಪ್ರಮಾಣ ಬೇರೆ ಜಿಲ್ಲೆಗಳಿಗೆ ಹೋಲಿಸಿದರೆ ಈಶಾನ್ಯ ಜಿಲ್ಲೆಗಳಲ್ಲಿಯೇ ಅತ್ಯಂತ ಹೆಚ್ಚಾಗಿತ್ತು. ಇದು ಡಾ॥ ನಂಜುಂಡಪ್ಪ ವರದಿಯಲ್ಲಿ ಎದ್ದು ಕಾಣುವ ಅಂಶ.

**ಬೆನಕನಹಳ್ಳಿ ಶೇಖರ್‌ಗೌಡ**

ಮೂಲ ಸೌಕರ್ಯಗಳ ಸೃಷ್ಟಿಗಾಗಿಯೇ ಕೇಂದ್ರದ ೧೦ ಮತ್ತು ೧೧ನೇ ಹಣಕಾಸು ಆಯೋಗಗಳು ಹಿಂದುಳಿದಿರುವಿಕೆಯನ್ನು ಆಧರಿಸಿ ನಗರ ಮತ್ತು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗಾಗಿಯೇ ಅನುದಾನ ಹಂಚಿಕೆ ವ್ಯವಸ್ಥೆಯನ್ನು ರೂಪಿಸಿದವು. ೧೦ನೇ ಹಣಕಾಸು ಆಯೋಗ ಅನುದಾನ ಹಂಚಿಕೆಗೆ ಪಂಚಾಯಿತಿಗಳ ವಿಷಯದಲ್ಲಿ ಗ್ರಾಮೀಣ ಜನಸಂಖ್ಯೆಯನ್ನು ಪುರಸಭೆ ಮತ್ತು ನಗರ ಸಭೆಗಳ ವಿಚಾರದಲ್ಲಿ ಕೊಳಚೆ ಪ್ರದೇಶದ ಜನಸಂಖ್ಯೆಯನ್ನು ಆಧಾರವಾಗಿಟ್ಟುಕೊಂಡಿತು. ಆದರೆ ೧೧ನೇ ಆಯೋಗ ಇದಕ್ಕಾಗಿ ತಲಾವಾರು ಆದಾಯ ಹಾಗೂ ರಾಜ್ಯಗಳ ಭೌಗೋಳಿಕ ವಿಸ್ತೀರ್ಣವನ್ನು ಮಾನದಂಡವನ್ನಾಗಿ ಮಾಡಿಕೊಂಡಿತು. ಇದು ಸಹ ಈಶಾನ್ಯ ಜಿಲ್ಲೆಗಳಿಗೆ ವರದಾನವಾಗಲಿಲ್ಲ.

ಕೇಂದ್ರ ಹಣಕಾಸು ಆಯೋಗದ ಅನುದಾನ ಹೊರತುಪಡಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳಿಗೆ ರಾಜ್ಯ ಸರಕಾರದಿಂದ ೨೦೦೪-೦೫ನೇ ಹಣಕಾಸು ವರ್ಷದವರೆಗೆ ಯಾವುದೇ ರೀತಿಯ ನೆರವು ಲಭಿಸುತ್ತಿರಲಿಲ್ಲ. ೨೦೦೫ರ ನಂತರ ಕರ್ನಾಟಕ ಸರಕಾರ ಸ್ಥಳೀಯ ಸಂಸ್ಥೆಗಳಿಗಾಗಿಯೇ ರಾಜ್ಯ ಹಣಕಾಸು ಆಯೋಗದಿಂದ ಅನುದಾನ ನೀಡಿಕೆ ವ್ಯವಸ್ಥೆಯನ್ನು ರೂಪಿಸಿ ಜಾರಿಗೊಳಿಸಿತು. ಈ ದಿಟ್ಟ ಕ್ರಮ ಸದಾ ಆರ್ಥಿಕ ಸಮಸ್ಯೆಗಳಿಂದ ತತ್ತರಿಸುತ್ತಲೇ ಇದ್ದ ರಾಜ್ಯದಲ್ಲಿನ ಸ್ಥಳೀಯ ಸಂಸ್ಥೆಗಳಿಗೆ ಸಂಜೀವಿನಿಯಾಯಿತು. ನೂರಾರು ಕೋಟಿ ರೂಪಾಯಿಗಳ ಈ ಅನುದಾನ ಈಶಾನ್ಯ ಜಿಲ್ಲೆಗಳಲ್ಲಿನ ರಸ್ತೆಗಳ ಅಭಿವೃದ್ಧಿ, ಒಳ ಚರಂಡಿ ವ್ಯವಸ್ಥೆ ಅಳವಡಿಕೆ/ಸುಧಾರಣೆ, ಮಳೆ ನೀರಿನ ಚರಂಡಿಗಳ ನಿರ್ಮಾಣ, ಕುಡಿವ ನೀರಿನ ಯೋಜನೆ, ವಿದ್ಯುದೀಕರಣ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮ, ಕೊಳಚೆ ಪ್ರದೇಶಗಳ ನಿರ್ಮೂಲನೆಗಾಗಿ ಬಳಸಿಕೊಳ್ಳುವಂತೆ ಮಾರ್ಗ ಸೂಚಿಗಳಲ್ಲಿ ಹೇಳಲಾಗಿದೆ.

ಈಶಾನ್ಯ ಜಿಲ್ಲೆಗಳಲ್ಲಿನ ನಗರ ಸ್ಥಳೀಯ ಸಂಸ್ಥೆಗಳ ಪಟ್ಟಿಯನ್ನು ಅವಲೋಕಿಸಿದಾಗ ಇರುವುದು ಎರಡೇ ಮಹಾನಗರ ಪಾಲಿಕೆಗಳು. ಗುಲ್ಬರ್ಗ ಮತ್ತು ಬಳ್ಳಾರಿ ಮಹಾನಗರ ಪಾಲಿಕೆಗಳು. ಇನ್ನುಳಿದಂತೆ ಬೀದರ್, ಯಾದಗಿರಿ, ಬಿಜಾಪುರ, ರಾಯಚೂರು ಮತ್ತು ಕೊಪ್ಪಳ ಜಿಲ್ಲಾ ಕೇಂದ್ರಗಳಲ್ಲಿ ನಗರ ಸಭೆ(೫)ಗಳಿವೆ.

ಹೊಸಪೇಟೆ, ಸಿರಗುಪ್ಪ, ಶಹಾಬಾದ್, ಬಸವ ಕಲ್ಯಾಣ, ಸಿಂಧನೂರು, ಗಂಗಾವತಿ, ಸುರಪುರ, ಶಹಾಪುರ ಇತರ ನಗರ (೮) ಸಭೆಗಳಾಗಿವೆ. ಜಿಲ್ಲಾ ಕೇಂದ್ರದ ನಗರ ಸಭೆ ಮತ್ತು ಇತರೆ ನಗರ ಸಭೆಗಳಿಗೆ ಪ್ರತ್ಯೇಕ ಅನುದಾನ ಹಂಚಿಕೆ ವ್ಯವಸ್ಥೆಯಿದೆ. ಹೂವಿನ ಹಡಗಲಿ, ಸೊಂಡೂರು, ಕಂಪ್ಲಿ, ಚಿಟಗುಪ್ಪ, ಅಫಜಲಪುರ, ಗುರುಮತಕಲ್, ಕುರಗೋಡು, ಹಗರಿಬೊಮ್ಮನಹಳ್ಳಿ, ಕರೆಕುಪ್ಪ, ಭಾಲ್ಕಿ, ಹುಮನಾಬಾದ್, ಆಳಂದ, ಚಿತ್ತಾಪುರ, ಸೇಡಂ, ವಾಡಿ, ಶಹಪುರ, ಸುರಪುರ, ಚಿಂಚೋಳಿ, ಜೇವರ್ಗಿ, ಮಾನವಿ, ದೇವದುರ್ಗ, ಲಿಂಗಸಗೂರು, ಕುಷ್ಟಗಿ, ಯಲಬುರ್ಗ, ಕಾರಟಗಿ, ಕನಕಗಿರಿ, ಕುಕನೂರು, ಭಾಗ್ಯನಗರ, ತಾತಳಗೇರಾ, ದೇವರನಗರ, ಮುದಗಲ್, ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ, ಇಂಡಿ, ಮುದ್ದೇಬಿಹಾಳ, ಸಿಂಧಗಿ, ತಾಳಿಕೋಟೆ ಹೀಗೆ ೩೦ಕ್ಕೂ ಹೆಚ್ಚು ಪುರಸಭೆಗಳು ಇವೆ.

ಪಟ್ಟಣ ಪಂಚಾಯಿತಿಗಳಲ್ಲಿಯೂ ವರ್ಗೀಕರಣ ಮಾಡಲಾಗಿದ್ದು, ತಾಲೂಕು ಕೇಂದ್ರಗಳ ಪಟ್ಟಣ ಪಂಚಾಯಿತಿ ಹಾಗೂ ಇತರೆ ಪಟ್ಟಣ ಪಂಚಾಯಿತಿ ಗಳೆಂದು ಹೇಳಲಾಗಿದೆ. ಔರಾದ್, ಅಫಜಲಪುರ, ಚಿಂಚೋಳಿ, ಜೇವರಗಿ, ಕೂಡ್ಲಿಗಿ, ಯಲಬುರ್ಗ... ಹೀಗೆ ೭ ಸ್ಥಳಗಳು ತಾಲೂಕು ಕೇಂದ್ರದ ಪಟ್ಟಣ ಪಂಚಾಯಿತಿಗಳು ಪುರಸಭೆಗಳಾಗಿ ಮೇಲ್ದರ್ಜೆಗೇರಿವೆ. ಕುಡಿತಿನಿ, ಮರಿಯಮ್ಮನಹಳ್ಳಿ, ಕಮಲಾಪುರ, ಕೊಟ್ಟೂರು, ತೆಕ್ಕಲಕೋಟೆ, ಮುದಗಲ್, ಕಕ್ಕೇರಾ, ಕೆಂಭಾವಿ ಸೇರಿದಂತೆ ಇತರೆ ಗ್ರಾಮಗಳು ಪಟ್ಟಣ ಪಂಚಾಯಿತಿಗಳಾಗಿದ್ದು, ಭೀಮರಾಯನ ಗುಡಿ, ಹಟ್ಟಿ (ಚಿನ್ನದ ಗಣಿ) ಇವು ಮೂರು ಸ್ಥಳಗಳು ಅಧಿಸೂಚಿತ ಪಟ್ಟಣ ಪಂಚಾಯಿತಿಗಳಾಗಿವೆ.

ಈಶಾನ್ಯ ಜಿಲ್ಲೆಗಳಲ್ಲಿನ ಜಿಲ್ಲಾ ಕೇಂದ್ರಗಳ ೫ ನಗರ ಸಭೆಗಳಿಗೆ ಕಳೆದ ಏಳು ವರ್ಷಗಳಲ್ಲಿ ಎಸ್‌ಎಫ್‌ಸಿಯಿಂದ ಸರಾಸರಿ ಸುಮಾರು ೭೫೦ ಕೋಟಿ ರೂಪಾಯಿಗಳಿಗೂ ಹೆಚ್ಚು ಅನುದಾನ ಲಭಿಸಿದೆ. ಅದೇ ರೀತಿ ಇತರೆ ೫ ನಗರ ಸಭೆಗಳಿಗೆ ಸುಮಾರು ೨೫೦ ಕೋಟಿ ರೂ., ೨೧ ಪುರಸಭೆಗಳಿಗೆ ಸುಮಾರು ೫೭೦ ಕೋಟಿ ರೂ., ತಾಲೂಕು ಕೇಂದ್ರದ ೭ ಪಟ್ಟಣ ಪಂಚಾಯಿತಿಗಳಿಗೆ ೧೨೫ ಕೋಟಿ ರೂ., ಇನ್ನುಳಿದ ೧೪ ಪಟ್ಟಣ ಪಂಚಾಯಿತಿಗಳಿಗೆ ಸುಮಾರು ೧೦೦ ಕೋಟಿ ರೂ., ಅನುದಾನ ಹಂಚಿಕೆಯಾಗಿದೆ.

ಗುಲ್ಬರ್ಗ ಹಾಗೂ ಬಳ್ಳಾರಿ ಮಹಾ ನಗರ ಪಾಲಿಕೆ ಗಳನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ, ೨೦೦೬–೦೭ನೇ ಸಾಲಿನಿಂದ ಪ್ರತಿ ವರ್ಷ ತಲಾ ನೂರು ಕೋಟಿ ರೂಪಾಯಿಗಳಂತೆ ಇಲ್ಲಿಯವರೆಗೆ ಒಟ್ಟು ೧,೨೦೦ ಕೋಟಿ ರೂಪಾಯಿ ಹಣ ರಾಜ್ಯ ಹಣಕಾಸು ಆಯೋಗದ ಅನುದಾನವೊಂದರಿಂದಲೇ ಬಂದಿದೆ.

ರಾಜ್ಯ ಸರಕಾರ ಎಂಟು ವರ್ಷಗಳ ಅವಧಿಯ ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಹೂಡಿಕೆ ಯೋಜನೆಯನ್ನು ೨೦೦೫–೦೬ರಲ್ಲಿ ಜಾರಿಗೊಳಿಸಿತು. ೨೫ ನಗರ ಮತ್ತು ಪಟ್ಟಣ ಪ್ರದೇಶಗಳು ಈ ಯೋಜನೆ ವ್ಯಾಪ್ತಿಗೆ ಒಳಪಟ್ಟಿದ್ದು, ಇದರ ಅಂದಾಜು ವೆಚ್ಚ ಒಟ್ಟಾರೆ ೧೯೮೦ ಕೋಟಿ ರೂಪಾಯಿಗಳು. ಈಶಾನ್ಯ ಜಿಲ್ಲೆಗಳ ಗುಲ್ಬರ್ಗ ಮತ್ತು ಬಳ್ಳಾರಿ ಮಹಾನಗರ ಪಾಲಿಕೆ, ಬೀದರ್, ಬಿಜಾಪುರ, ಗಂಗಾವತಿ, ಕೊಪ್ಪಳ, ಹೊಸಪೇಟೆ, ರಾಯಚೂರು, ಬಸವ ಕಲ್ಯಾಣ, ಯಾದಗಿರಿ, ಸಿಂಧನೂರು, ಶಹಾಬಾದ್ ಪಟ್ಟಣಗಳು ಸೇರಿವೆ.




ಈ ಯೋಜನೆ ಎರಡು ಹಂತಗಳಿಂದ ಕೂಡಿದ್ದು ಎರಡನೇ ಹಂತದಲ್ಲಿ ಕೆರೆ ಅಭಿವೃದ್ಧಿಗೆ ಆದ್ಯತೆ ನೀಡಲಾಗುತ್ತದೆ ಎಂದು ಹೇಳಲಾಗಿದೆ. ಇದರ ಅನ್ವಯ ಈಶಾನ್ಯ ಭಾಗದ ಜಿಲ್ಲೆಗಳಲ್ಲಿನ ಎರಡು ಮಹಾನಗರ ಪಾಲಿಕೆಗಳೂ ಸೇರಿದಂತೆ ಒಟ್ಟು ೧೨ ಸ್ಥಳೀಯ ಸಂಸ್ಥೆಗಳಿಗೆ ಸುಮಾರು ೧ ಸಾವಿರ ಕೋಟಿ ರೂಪಾಯಿಗಳಿಗೂ ಹೆಚ್ಚು ಹಣಕಾಸಿನ ನೆರವು ಲಭಿಸಿದೆ. ಯೋಜನೆಯ ಕಾಲಮಿತಿಯ ಅಂತಿಮ ಘಟ್ಟ ಈಗ ಹತ್ತಿರವಾಗುತ್ತಿದೆ. ಎಲ್ಲವೂ ಯೋಜನಾಬದ್ಧವಾಗಿ ನಡೆದಿದ್ದರೆ ಮೇಲೆ ಹೇಳಲಾದ ಸ್ಥಳೀಯ ಸಂಸ್ಥೆಗಳು ಈ ಯೋಜನೆಯಡಿ ಕೈಗೊಂಡ ಕಾಮಗಾರಿಗಳು ಮುಕ್ತಾಯದ ಹಂತದಲ್ಲಾದರೂ ಇರಬೇಕಿತ್ತು. ಬಹುತೇಕ ಸ್ಥಳೀಯ ಸಂಸ್ಥೆಗಳಲ್ಲಿ ಕಾಮಗಾರಿಗಳು ಆರಂಭಗೊಂಡಿದ್ದರೂ ಅವು ಶೇಕಡಾ ಅರ್ಧದಷ್ಟು ಸಹ ಪೂರ್ಣಗೊಂಡಿಲ್ಲ. ಆಗಿರುವ ಅರ್ಧದಷ್ಟು ಕಾಮಗಾರಿಗಳ ಗುಣಮಟ್ಟ ಮಾರ್ಗಸೂಚಿಗಳ ಪ್ರಕಾರ ಇಲ್ಲವೇ ಇಲ್ಲ. ಕೆಲವು ಭಾಗಗಳಲ್ಲಿ ಗುತ್ತಿಗೆದಾರರು ಕಾಮಗಾರಿಗಳನ್ನು ಅರ್ಧಕ್ಕೇ ನಿಲ್ಲಿಸಿ ಓಡಿ ಹೋಗಿರುವ ಉದಾಹರಣೆ ಗಳುಂಟು. ಉದಾಹರಣೆಗೆ, ಗುಲ್ಬರ್ಗ ಮತ್ತು ಬಳ್ಳಾರಿ ಮಹಾನಗರ ಪಾಲಿಕೆಗಳಲ್ಲಿ ಈ ಯೋಜನೆಯ ಹಣವನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು ಆಗುತ್ತಿಲ್ಲ. ಮೂಲ ಸೌಕರ್ಯಗಳಿಗಾಗಿ ಹಣ ಪ್ರವಾಹೋಪಾದಿಯಾಗಿ ಬರುತ್ತಿದ್ದರೂ ಜನ ಸಕಲ ಸೌಕರ್ಯಗಳನ್ನು ಪಡೆದುಕೊಂಡಿಲ್ಲ.

ಕಳೆದ ಏಳು ವರ್ಷದ ಅವಧಿಯಲ್ಲಿ ಈಶಾನ್ಯ ಜಿಲ್ಲೆಗಳಿಗೆ ಎಸ್‌ಎಫ್‌ಸಿ, ಕೇಂದ್ರ ಹಣಕಾಸು ಆಯೋಗ, ಎಡಿಬಿ, ಮುಖ್ಯಮಂತ್ರಿಗಳ ನಗರೋತ್ಥಾನ ಮತ್ತು ಗುಲ್ಬರ್ಗ ಸಂಪುಟ ನಿರ್ಧಾರದ ಅನುದಾನ ಗಳಿಂದ ಒಟ್ಟಾರೆ ೫,೬೦೪ ಕೋಟಿ ರೂಪಾಯಿಗೂ ಹೆಚ್ಚು ಅನುದಾನ ಬಂದಿದೆ. ಇದರ ಜೊತೆಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ತನ್ನದೇ ಆಸ್ತಿಗಳಿಂದ (ಉದಾಹರಣೆಗೆ, ಮಾರುಕಟ್ಟೆ ಸಂಕೀರ್ಣಗಳಿಂದ ಬರುವ ಬಾಡಿಗೆ) ಬರುವ ಆದಾಯ, ಸ್ವಯಂ ಘೋಷಿತ ಆಸ್ತಿ ತೆರಿಗೆಯಿಂದ ಬರುವ ಮೊತ್ತ, ಕೈಗಾರಿಕೆಗಳು, ವ್ಯಾಪಾರ, ವಾಣಿಜ್ಯ ವಹಿವಾಟು ಸಂಸ್ಥೆಗಳ ಸ್ಥಾಪನೆ, ನವೀಕರಣ ಶುಲ್ಕ, ಕುಡಿವ ನೀರು, ಒಳ ಚರಂಡಿಗಳ ಶುಲ್ಕ ಹೀಗೆ ಈ ಮೊತ್ತವೂ ಕೋಟಿ ರೂಪಾಯಿ (ನಗರ ಸಭೆಯಾಗಿದ್ದರೆ) ದಾಟುತ್ತದೆ.

ಹೊಸ ಜಿಲ್ಲಾ ಕೇಂದ್ರವೂ ಆದ ಯಾದಗಿರಿ ನಗರವಂತೂ ಅಭಿವೃದ್ಧಿಯಲ್ಲಿ ಇನ್ನೂ ಬಹಳಷ್ಟು ಹಿಂದಿರುವುದು ಸುಳ್ಳಲ್ಲ. ಯಾದಗಿರಿ ನಗರ ಇನ್ನೂ ತಾಲೂಕು ಕೇಂದ್ರದಂತೆಯೇ ಇದೆ. ಇಲ್ಲಿನ ಸೌಕರ್ಯಗಳು ಇನ್ನೂ ಜಿಲ್ಲಾ ಕೇಂದ್ರದ ಮಟ್ಟಕ್ಕೆ ಏರಿಲ್ಲ ಎಂಬುದು ಯಾದಗಿರಿಗೊಮ್ಮೆ ಭೇಟಿ ನೀಡಿದರೆ ತಿಳಿದೀತು. ಹಾಗಂತ ಯಾದಗಿರಿಯೊಂದೇ ಅಭಿವೃದ್ಧಿಯಲ್ಲಿ ಹಿಂದಿಲ್ಲ, ಉತ್ತರ ಭಾಗದ, ಅದರಲ್ಲೂ ಈಶಾನ್ಯ ಕರ್ನಾಟಕದ ಅನೇಕ ನಗರ–ಪಟ್ಟಣಗಳು ಅಭಿವೃದ್ಧಿಯಲ್ಲಿ ಇನ್ನೂ ಬಹಳ ಹಿಂದಿರುವುದು ಸ್ಪಷ್ಟ.

ಈ ನಗರಗಳಲ್ಲಿ ಹೇಳಿಕೊಳ್ಳುವಂತಹ ಸರಿಯಾದ ಚರಂಡಿ ವ್ಯವಸ್ಥೆಯೂ ಇಲ್ಲ, ನಗರದ ಒಳಗಿನ ರಸ್ತೆಗಳ ಸ್ಥಿತಿಯನ್ನಂತೂ ಹೇಳುವುದೇ ಬೇಡ. ಸಮರ್ಪಕ ಕುಡಿಯುವ ನೀರಿನ ವ್ಯವಸ್ಥೆಯೂ ಇಲ್ಲ. ಈ ನಗರಗಳಲ್ಲಿ ಹೇಳಿಕೊಳ್ಳುವಂತಹ ಯಾವುದೇ ಉತ್ತಮ ನಾಗರಿಕ ಸೌಲಭ್ಯಗಳೇ ಇಲ್ಲ ಎಂದ ಮೇಲೆ ಈ ಈಶಾನ್ಯ ನಗರಗಳ ಸ್ಥಿತಿಗತಿ ಕುರಿತು ಮಾತನಾಡುವುದಕ್ಕಿಂತ ಮೌನವಾಗಿರುವುದೇ ಲೇಸು ಎನ್ನುವಂತಹ ಪರಿಸ್ಥಿತಿ ಇದೆ.

ಹೀಗೆ ಬಂದ ಅನುದಾನ ಹಾಗೂ ಆದಾಯಗಳನ್ನು ಉದಾಹರಣೆಗಾಗಿ ಬೀದರ್ ನಗರ ಸಭೆಯೊಂದಕ್ಕೆ ಮಾತ್ರ ತಾಳೆ ಹಾಕಿ ನೋಡಿ ಲೆಕ್ಕ ಹಾಕಿದಾಗ ಪ್ರತಿದಿನವೊಂದಕ್ಕೆ ಸುಮಾರು ೨೦ ಲಕ್ಷ ರೂಪಾಯಿಗೂ ಹೆಚ್ಚು ಅನುದಾನ ಲಭ್ಯವಾಗಿದೆ. ಆದರೆ ಅಲ್ಲಿ ದಿನವೊಂದಕ್ಕೆ ೨೦ ಲಕ್ಷ ರೂ., ಕಾಮಗಾರಿ ನಡೆದಿವೆಯೆ ಎಂಬುದನ್ನು ಸ್ಥಳೀಯ ಸಂಸ್ಥೆಗಳಲ್ಲಿನ ಜನಪ್ರತಿನಿಧಿಗಳು ಮತ್ತು ಅಧಿಕಾರಿಗಳು ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ. ನಾನಾ ಮೂಲಗಳ ಅನುದಾನವಿರುವ ನಗರ–ಪಟ್ಟಣಗಳ ಸ್ಥಿತಿಯೇ ಹೀಗಿರುವಾಗ, ಇನ್ನು ಈ ಈಶಾನ್ಯ ಕರ್ನಾಟಕದ ಗ್ರಾಮಗಳನ್ನು ಆ ಭಗವಂತ ಕಲಬುರಗಿ ಶರಣಬಸವೇಶ್ವರನೇ ಕಾಪಾಡಬೇಕು.

**ಚೆನಕನಹಳ್ಳಿ ಶೇಖರ್‌ಗೌಡ**
'ಸಿರಿ', ಓಂ ಶಕ್ತಿ ದೇವಾಲಯದ ಬಳಿ
ಬಂಜಾರ ಬಡಾವಣೆ ಒಳಗೆ ಹೊರಮಾವು ಅಂಚೆ
ಬೆಂಗಳೂರು – ೫೬೦ ೦೪೩

# ಊರ ಸಂತೆ ಎಲ್ಲಿರಬೇಕು?

ಸತ್ಯವತಿ ಹರಿಕೃಷ್ಣನ್

ಫ್ಲೈ ಓವರ್ ಬಂದ ಮೇಲೆ ಊರಿನ ಜನರೆಲ್ಲಾ ಅದರ ಮೇಲೆ ಜಮಾಯಿಸಿ, ತಮ್ಮೂರಿನ ಸೊಬಗನ್ನು ಕಣ್ತುಂಬ ತುಂಬಿಸಿಕೊಂಡು, ದಾರಿ ತೋರದೆ ಫ್ಲೈ ಓವರ್ ಮೇಲೆ ಓವರ್ ಸ್ಪೀಡಲ್ಲಿ ಬರುವ ವಾಹಗಳಿಗೆ ಅಡ್ಡ ಬರುವುದು ಜಾಸ್ತಿ ಆಯ್ತು. ಇವರನ್ನು ನಿಯಂತ್ರಿಸುವುದು ಪೊಲೀಸರಿಗಂತೂ ದೊಡ್ಡ ತಲೆನೋವೇ ಆಯ್ತು.

ಮನೆಯಲ್ಲಿದ್ದ ಚಿಳ್ಳೆಪಿಳ್ಳೆಗಳನ್ನೆಲ್ಲ ಕಟ್ಟಿಕೊಂಡು ಬಂದು, "ನೋಡ್ರೋ, ಚೆನ್ನಾಗಿ ನೋಡ್ರೋ. ಇಷ್ಟು ಮೇಲಿಂದ ನೋಡಕ್ಕೆ ಎಷ್ಟು ಚೆನ್ನಾಗಿರುತ್ತೆ ಅಲ್ವಾ? ವಿಮಾನದಿಂದ ತಲೆ ಹೊರಗೆ ಹಾಕಿ ಕೆಳಗೆ ಬಗ್ಗಿ ನೋಡಿದಾಗ ಹೀಗೇ... ಎಲ್ಲಾನು ಪಿಳ್ಳೆ ಪಿಳ್ಳೆನೇ ಕಾಣ್ಸೋದು" ಎಂದು ರೈಲು ಬಿಡುವವರು ದಿನದಿಂದ ದಿನಕ್ಕೆ ಜಾಸ್ತಿಯಾಗುತ್ತಿದ್ದರು. ಆಗಸದಲ್ಲಿ ಹಾರಾಡ್ತಾ ಇರೋ ವಿಮಾನದಿಂದ "ಹೊರಗೆ ಬಗ್ಗಿ ನೋಡಿದ"(!)ವರು ಅಲ್ಲಿ ಇಪ್ಪತ್ತು ಮೂವತ್ತು ಮಂದಿಯಾದರೂ ಇದ್ದರು.

ಊರಿನ ಹೆದ್ದಾರಿಗೆ ಅಂಟಿಕೊಂಡು, ವಾರ ವಾರ ನಡೆಯುತ್ತಿದ್ದ ಸಂತೆಗೆ ಮಾತ್ರ ಈ ಫ್ಲೈ ಓವರ್‌ನಿಂದ ಭಾರೀ ತೊಂದರೆ ಒದಗಿತ್ತು. ಹೆದ್ದಾರಿಯ ಮೇಲೆ ನಿರ್ಮಿತವಾದ ಈ "ಆಕಾಶ ರಸ್ತೆ"ಯ ನಿರ್ಮಾಣ ಕಾರ್ಯ ಸಾಗುವಾಗ ಅದಕ್ಕಾಗಿ ಬಂದು ಸೇರಿದ ಕಲ್ಲು, ಮಣ್ಣು, ಸಿಮೆಂಟ್, ಅರ್ತ್ ಮೂವರ್, ಕಬ್ಬಿಣದ ಸರಳುಗಳು ಮುಂತಾದವುಗಳೆಲ್ಲ ಒಟ್ಟಾಗಿಬಿಟ್ಟವು. ಮತ್ತೆ, ಸಂತೆಯಲ್ಲಿ "ಗೆಟ್ ಟುಗೆದರ್" ಆಚರಿಸುತ್ತಿದ್ದ ಮೂಲಂಗಿ, ಈರುಳ್ಳಿ, ಬೆಳ್ಳುಳ್ಳಿ, ಬೆಂಡೆ, ತೊಂಡೆ, ಸೊಪ್ಪು – ಸದೆ ಮುಂತಾದವುಗಳನ್ನು ಪ್ರವಾಹೋಪಾದಿಯಲ್ಲಿ ಅಟ್ಯಾಕ್ ಮಾಡಿ, ಎಲ್ಲವನ್ನೂ ಸದೆಬಡಿದು, ಅವುಗಳ ಜಾಗವನ್ನು ಆಕ್ರಮಿಸಿ, ಇದು ತಮ್ಮದೇ ಭೂಮಿ ಎನ್ನುವಂತೆ ಸ್ಥಾಪಿತವಾದವು.

ಆಗ ಬೆಂಡೆ ತೊಂಡೆಗಳ ಯಜಮಾನರುಗಳೂ ಕೋಪದಿಂದ, "ಬಂಡೆ ಎಸೆದು ಬಂಡಾಯ ಮಾಡ್ತೀವಿ. ನಮ್ಮ ಸಂತೆಯ ಜಾಗವನ್ನು ನಿಂತಲ್ಲೇ ನುಂಗಿದವರ ಕಾಲೆತ್ತಿ ನೆಲಕ್ಕೆ ಅಪ್ಪಳಿಸುತ್ತೀವಿ" ಎಂದು ಹಾರಾಡತೊಡಗಿದರು.

ಇವರು ತಾವು ಹೇಳಿದ ಹಾಗೆಯೇ ಬೆಂಡೆಯನ್ನು ಅಲ್ಲೇ ಬಿಟ್ಟು, ಬಂಡೆಯಿಂದ ಫ್ಲೈ ಓವರ್ ಕಂಬಗಳನ್ನು ಚಚ್ಚಿ, ಬಡಿದು ತುಂಡರಿಸಿಬಿಟ್ರೆ ಫ್ಲೈಓವರ್ ನೆಲಕಚ್ಚುವುದರಲ್ಲಿ ಅನುಮಾನವೇ ಇರಲಿಲ್ಲ. "ತಾಳಿದವನು ಬಾಳಿಯಾನು ಅಂತಾರೆ, ಸ್ವಲ್ಪ ಕಾಲ ತಾಳಿ, ಫ್ಲೈ ಓವರ್ ಆದ ಕೂಡಲೇ, ಅದರ ಅಡಿಯಲ್ಲೇ ನೀವು ಸಂತೆ ನಡೆಸಬಹುದು. ಬಿಸಿಲು ಮಳೆಗಳಿಂದ ರಕ್ಷಣೆಯೂ ದೊರಕುತ್ತೆ. ಈಗ ಸದ್ಯಕ್ಕೆ ಮಣ್ಣು ಕಲ್ಲು ಸರಳುಗಳ ಮಧ್ಯೆ ಕುಳಿತು ಸುಧಾರಿಸಿಕೊಳ್ಳಿ" ಎಂದು ಸಮಾಧಾನ ಪಡಿಸಿದರು.

ಕಲ್ಲು ಮಣ್ಣುಗಳ ನಡುವೆ ಕುಳಿತ ವ್ಯಾಪರಸ್ಥರಿಗೆ ಒಂದು ವಿಚಿತ್ರ ಅನುಭವ ಉಂಟಾಯ್ತು. ಅವರಿಗೆ ಹೆದ್ದಾರಿ ಬದಿಯಲ್ಲಿ ಬಂದ ಲಾಭಕ್ಕಿಂತ ಅಧಿಕ ಲಾಭ ಈ ಕಿರಿ ಕಲ್ಲುಗುಡ್ಡ, ಮಣ್ಣುಗುಡ್ಡಗಳ ಎಡೆಯಲ್ಲಿ ಬಂದಿತ್ತು. ಕಾರಣ ಇಷ್ಟೆ... ಅರ್ತ್ ಮೂವರ್ ಅಥವಾ ಅಷ್ಟೇ ಭಾರದ ವಾಹನಗಳು ಅಲ್ಲಿ ಓಡಾಡಿದಾಗ, ಕಾರ್ಯನಿರತವಾದಾಗ ಭೂದೇವಿ ಖುಷಿಯಿಂದ ನಡುಗುತ್ತಿದ್ದಳು. ಕೂಡಲೆ ಅದಕ್ಕೆ ಸ್ಪಂದಿಸಿದ ಸಣ್ಣ ಮಣ್ಣುಗುಡ್ಡೆ, ಕಲ್ಲುಗುಡ್ಡಗಳು ಅದುರಿ, ಜರಿದು ತರಕಾರಿಯೊಳಗೆ ಅಡಗಿ ಕುಳಿತುಕೊಂಡು ಬಿಡುತ್ತಿದ್ದವು. ಹೀಗಾಗಿ ತರಕಾರಿಯನ್ನು ತೂಗಿ ನೋಡಿದಾಗ, ಒಂದಕ್ಕೆ



ಎರಡರಷ್ಟೋ, ಒಂದಕ್ಕೆ ನಾಲ್ಕರಷ್ಟೋ ಜಾಸ್ತಿ ತೂಕ ತೋರಿಸುತ್ತಿತ್ತು. ಕಲ್ಲು ಅಡಗಿದ್ದರೆ ಜಾಸ್ತಿ ತೂಕ, ಮಣ್ಣು ಅಡಗಿದ್ದರೆ ಸ್ವಲ್ಪ ಕಮ್ಮಿ ತೂಕ... ಹೀಗೆ!

ಮಳೆಗಾಲದಲ್ಲಂತೂ ಕಿರಿ ಗುಡ್ಡಗಳ ನಡುವೆ ಹಾಗೂ ಗುಡ್ಡಗಳ ಮೇಲಿಂದ ಇಳಿದು ಬಂದ ಮಳೆನೀರು (ಫ್ರೂಟ್ ಸಲಾಡ್ ಜೊತೆ ಐಸ್ ಕ್ರೀಮ್ ಬೆರೆತಂತೆ), ತಾನು ಕೂಡಾ ಕಲ್ಲು – ಮಣ್ಣು – ತರಕಾರಿಗಳೊಂದಿಗೆ ಬೆರೆತು ಹೋಗುತ್ತಿದ್ದರಿಂದ, ತರಕಾರಿ ತೂಕ ಇದ್ದಲ್ಲೇ ಏರಿ, ವ್ಯಾಪಾರಿಗಳಿಗೆ ಆರೇಳು ಪಟ್ಟು ಹೆಚ್ಚು ಲಾಭ ಬರುತ್ತಿತ್ತು. ಆದ್ದರಿಂದ ಅವರು ಕಲ್ಲು, ಮಣ್ಣು ಹಾಗೂ ಮಳೆಯನ್ನು ತುಂಬ ಪ್ರೀತಿಸತೊಡಗಿದರು. ಇದೇ ಕಾರಣಕ್ಕೆ ಫ್ಲೈ ಓವರ್ ಕೆಲಸ ಮುಗಿಯುವುದೇ ಬೇಡವೆಂದು ಅವರು ಕಂಡ ಕಂಡ ದೇವರಲ್ಲಿ ಬೇಡತೊಡಗಿದರು.

ಇವರ ಪ್ರಾರ್ಥನಾ ಬಲ ಎಷ್ಟಿತ್ತು ಎಂದರೆ, ಆರು ತಿಂಗಳಲ್ಲಿ ಮುಗಿಯಬೇಕಾಗಿದ್ದ ಕೆಲಸ ಆರು ವರ್ಷಗಳಾದರೂ ಮುಗಿಯಲಿಲ್ಲ. ಊರಿನ ಜನರು, ಕಾರಿನ ಜನರು, ಬಸ್ಸಿನ ಓನರ್, ರಿಕ್ಷಾ ಡ್ರೈವರ್ ಎಲ್ಲಾ ಸೇರಿ ಕೋರ್ಟು ಕಚೇರಿಗಳಿಗೆ ಎಡತಾಕಿದ್ದೇ ಎಡತಾಕಿದ್ದು. ಆದರೂ "ನಿಧಾನವೇ ಪ್ರಧಾನ, ಅವಸರವು ಅವಘಡಕ್ಕೆ ಕಾರಣ" ಮುಂತಾದ ಚಾಲಕರಿಗೆ ಚಿರಪರಿಚಿತವಾದ ಉಪದೇಶಾಮೃತಗಳಿಂದ ಅವರನ್ನು ಮತ್ತೆ ನಾಲ್ಕು ವರ್ಷಗಳ ಕಾಲ ತಣ್ಣಗಿರಿಸಿದ ಮೇಲೆಯೇ, ಸಾಕಷ್ಟು ಅಧಿಕಾರಿಗಳ ಹೊಟ್ಟೆ ತುಂಬಿದ ಮೇಲೆಯೇ ಒಂದು ದಿನ ವಿಧಿ ಇಲ್ಲದೆ ಫ್ಲೈ ಓವರ್ ಲೋಕಾರ್ಪಣೆಗೊಂಡಿತು.

ಹೆದ್ದಾರಿಯ ಪಕ್ಕದಲ್ಲಿ, ಸಂತೆ ನಡೆಯುತ್ತಿದ್ದ ಜಾಗದಲ್ಲಿ ಸರ್ವಿಸ್ ರಸ್ತೆ ಬರಬೇಕಿತ್ತು. ಅದು ಬೇಗನೆ ಆಗಬೇಕೆಂದು ಇದ್ದಬದ್ದ ಸಂಘ ಸಂಸ್ಥೆಯವರೆಲ್ಲ ಗುಂಪು ಕಟ್ಟಿಕೊಂಡು ಗುಲ್ಲೆಬ್ಬಿಸತೊಡಗಿದ್ದರಿಂದ ಸಂತೆಯನ್ನು ಸ್ಥಳಾಂತರಿಸದೆ ಸಾಧ್ಯವಿಲ್ಲ ಎಂಬ ಸ್ಥಿತಿಗೆ ಬಂದು ಮುಟ್ಟಿತು ಪರಿಸ್ಥಿತಿ.

ಫ್ಲೈ ಓವರ್ ಅಡಿಯ ಜಾಗ ವಾಹನ ನಿಲುಗಡೆಗೆ ಪ್ರಶಸ್ತವಾಗಿರುವುದರಿಂದ, ಅಲ್ಲಿ ರಿಕ್ಷ, ಟೆಂಪೋ, ಟ್ಯಾಕ್ಸಿ ನಿಲ್ದಾಣವೇ ಆಗಬೇಕೆನ್ನುತ್ತಾ ಅವರೆಲ್ಲ ಯಾರಿಗೂ ಕಾಯದೆ, ತಾವೇ ಬಂದು ಸ್ಥಾಪಿತರಾಗಿಬಿಟ್ಟರು. ಸಂತೆಯವರಿಗೆ ಈಗ ಆ ಜಾಗದ ಮೇಲೆ ಆಸಕ್ತಿ ಇರಲಿಲ್ಲವಾಗಿ ಅವರೂ ಕೂಡ ತಕರಾರು ಮಾಡಲಿಲ್ಲ. ಆದರೆ ಅವರ ಬೇಡಿಕೆ ಬೇರೆಯೇ ಇತ್ತು. ಫ್ಲೈ ಓವರ್ ಕಟ್ಟುವಷ್ಟು ಕಾಲ ತಮಗೆ ನೀಡಿದಂತಹುದೇ ಇನ್ನೊಂದು ಸೂಪರ್ ಜಾಗವನ್ನು ಕೊಟ್ಟರೆ ಮಾತ್ರ ಸ್ಥಳಾಂತರಿಸುತ್ತೇವೆ; ಇಲ್ಲವಾದರೆ ಈಗಿರುವ ಜಾಗವನ್ನು ಬಿಟ್ಟು ಕದಲುವುದಿಲ್ಲ ಎಂದು ಸಂತೆಯವರು ಪಟ್ಟು ಹಿಡಿದು ಕುಳಿತರು.

ನಗರಪಾಲಿಕೆಯವರಿಗೆ ತಲೆ ಕೆಟ್ಟಂತಾಯ್ತು. ಕಾರ್ಪೊರೇಟರುಗಳು ತಮ್ಮ ಕೂದಲನ್ನು ಎಳೆದೆಳೆದು ಕಿತ್ತುಕೊಳ್ಳುತ್ತಾ ಊರು ತುಂಬ ಸುತ್ತಾಡಿದರು. ಆದರೆ ಯಾರ ಕಣ್ಣಿಗೂ ಸಂತೆಯವರಿಗೆ ಪ್ರಶಸ್ತವಾಗಬಹುದಾದಂತಹ ಜಾಗ ಕಾಣಲೇ ಇಲ್ಲ.

ಊರ ಮಧ್ಯದಲ್ಲಿ ಕಸ ಹಾಕುವ ದೊಡ್ಡ ಜಾಗವೊಂದಿತ್ತು. ಅಲ್ಲಿ ಸ್ವಚ್ಛ ಮಾಡಿಸಿ, ಸಂತೆ ನಡೆಸಬಹುದೆಂದು ಒಬ್ಬ "ಕ್ಲೀನರ್", ಅಂದರೆ ಊರನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವುದರಲ್ಲಿ ಕಾಳಜಿ ಉಳ್ಳ ಪರಿಸರ ಪ್ರೇಮಿಯೊಬ್ಬ ಉಸುರಿದ.

"ಇಲ್ಲ ಇಲ್ಲ. ಈ ಊರಿನ ಕಸವನ್ನೆಲ್ಲಾ ಹಾಕಲು ಅದೊಂದೇ ಜಾಗ ಇರೋದು. ಅದು ತನ್ನೊಳಗಿನಿಂದ ಹೊರಡಿಸುವ ವಾಸನೆ ಅಲ್ಲಿ ಸುತ್ತಮುತ್ತ ಇರುವವರಿಗೆ ತುಂಬ ಇಷ್ಟ. ಅವರ ನಾಸಿಕ ರಂಧ್ರ ಸದಾ ಓಪನ್ ಆಗಿ ಇರೋದಕ್ಕೆ ಮುಖ್ಯ ಕಾರಣವೇ ಈ ವಾಸನೆ ಉತ್ಪಾದಕ ಘಟಕದಿಂದ ಉತ್ಪನ್ನವಾಗುವ ನಿತ್ಯ ನೂತನ ವೈವಿಧ್ಯಮಯ ವಾಸನೆಗಳು! ಆದ್ದರಿಂದ ಇಂಥ ಜನಪ್ರಿಯ ಬೃಹತ್ ಕಸದ ರಾಶಿಯನ್ನು ಸ್ಥಳಾಂತರಿಸುವ ವಿವೇಕರಹಿತ ಆಲೋಚನೆಯನ್ನು ಬಿಟ್ಟುಬಿಡಿ. ಇಲ್ಲಾಂದರೆ "ಹೊಸ ಕಸ–ಹೊಸ ವಾಸನೆ" ಎಂದು ಸಂಭ್ರಮಿಸುತ್ತಿರುವ ಅಲ್ಲಿಯ ಮಂದಿ ಅಟ್ಟಿಸಿಕೊಂಡು ಬಂದು ನಮ್ಮನ್ನು ಹೊಡೆದು ಹಾಕ್ತಾರೆ" ಎಂದು ಕೆಂಪು ನಿಶಾನೆ ತೋರಿಸಿದ "ಕಸ ಪ್ರೇಮಿ"ಯೊಬ್ಬ. ಕಲ್ಲು ಮಣ್ಣುಗಳ ರಾಶಿ ಇರದ ಜಾಗವನ್ನು ತೋರಿಸಲೇಬೇಡಿ ಎಂದು ಹಟ ಹಿಡಿದು ಕುಳಿತರು ತರಕಾರಿಯವರು.

"ಸ್ವಲ್ಪ ಊರಾಚೆಯಾದರೂ ಸರಕಾರಕ್ಕೇ ಸೇರಿದ ವಿಶಾಲ ಜಾಗವೊಂದು ಖಾಲಿ ಇದೆ. ಅಲ್ಲಿ ಸುಂದರ ಸುಸಜ್ಜಿತ ಸಂತೆ ಮಾರುಕಟ್ಟೆಯನ್ನು ನಿರ್ಮಿಸಿ, ಎಲ್ಲರಿಗೂ ನಾವು ಮಾದರಿಯಾಗಬಹುದು" ಎಂದು ಶಿಷ್ಟ ಅಧಿಕಾರಿಯೊಬ್ಬ ಸೂಚಿಸಿದ.

ಅಂಥ ಕಡೆ ಸಂತೆ ಇಟ್ಟರೆ ಏನು ಪ್ರಯೋಜನ? ಒಂದೆರಡು ದಿನಪತ್ರಿಕೆಗಳಲ್ಲಿ "ಮಾದರಿ ಸಂತೆ ಮಾರುಕಟ್ಟೆ" ಎಂದು ಹೊಗಳಿ ಬರೆದು, ಮತ್ತೆ ಮರೆತೇ ಬಿಡುತ್ತಾರೆ. ಒಂದು ಊರಿನ ಬಗ್ಗೆ, ಒಂದು ಕೆಲಸದ ಬಗ್ಗೆ ಎಲ್ಲರಿಗೂ ನೆನಪಾಗ್ತಾನೇ ಇರಬೇಕು. ಹಾಗೆ ಅದು ಜೀವಂತವಾಗಿರಬೇಕು ಅಂದ್ರೆ ಅಲ್ಲೊಂದು "ತಕರಾರು" ಇರಲೇ ಬೇಕು. ಆಗ ಅದಕ್ಕೆ ಸಂಬಂಧಪಟ್ಟ ಅಧಿಕಾರಿಗಳ ಹೆಸರು ದಿನಪತ್ರಿಕೆಗಳಲ್ಲಿಯೂ, ಟಿ.ವಿ. ಮಾಧ್ಯಮಗಳಲ್ಲೂ, ಸಾಮಾನ್ಯ ಜನರ ಬಾಯಲ್ಲೂ ನಿತ್ಯ ನಲಿದಾಡಿ ಅವರೆಲ್ಲ ನಿತ್ಯ ಪ್ರಾತಃಸ್ಮರಣೀಯರಾಗಿಬಿಡುತ್ತಾರೆ. ಅಧಿಕಾರಕ್ಕೆ ಬಂದ ಮೇಲೆ ಜನರು ಇಷ್ಟೂ ನೆನೆಸಿಕೊಳ್ಳಲಿಲ್ಲ ಅಂದರೆ ಏನು ಪ್ರಯೋಜನ? ಇಷ್ಟು ಸಾಲದು ಎಂಬಂತೆ ತಮ್ಮ ಆಲೋಚನೆಗೆ ಪೂರಕವಾಗಿಯೇ ಸಂತೆಯ ಮಾರಾಟಗಾರರ ಮನೋಭಾವವೂ ಇದೆ. ಆದ್ದರಿಂದ ಅದಕ್ಕೆ ತಕ್ಕುದಾದಂಥ ಜಾಗವನ್ನು ಹುಡುಕಲೇಬೇಕು ಎಂದು ಸಭೆಯಲ್ಲಿ ತೀರ್ಮಾನಿಸಲಾಯಿತು.

ಊರೆಲ್ಲಾ ಸರ್ವೆ ಮಾಡಿ, ಸಂತೆಗೆ ತಕ್ಕ ಸ್ಥಳ ಹುಡುಕುವ ಅಭಿಯಾನ ಶುರುವಾಯ್ತು. ದೊಡ್ಡ ಖಾಲಿ ಸೈಟ್ ಬೇಡ; ಅದು ಅಪಾರ್ಟ್‌ಮೆಂಟ್ ಅಥವಾ ಬೃಹತ್ ಕಟ್ಟಡ ಕಟ್ಟಲಿಕ್ಕೆ ಬೇಕಾಗುತ್ತದೆ ಎಂದು ಖಾಲಿ ಜಾಗಗಳನ್ನು ಕೈಬಿಡಲಾಯಿತು.

ಊರಾಚೆ ಸ್ಥಳ ಇದ್ದರೂ ಜನರು ಅಲ್ಲಿಗೆ ಹೋಗುವುದು ಡೌಟು ಎಂದು ಆ ಆಲೋಚನೆಯನ್ನು ಬದಿಗೊತ್ತಲಾಯಿತು. ಊರ ನಡುವೆ, ಜನಭರಿತ, ಕಲ್ಲು ಮಣ್ಣು ರಾಶಿ ಭರಿತ ಸ್ಥಳಕ್ಕೆ ಆದ್ಯತೆ ನೀಡಬೇಕೆಂಬ ಯೋಜನೆಗೆ ಸರ್ವಾನುಮತ ದೊರಕಿತು.

ಅಂತೆಯೇ ಹುಡುಕಲಾಗಿ ಒಂದು ಪ್ರಶಸ್ತವಾದ ಜಾಗವೂ ಸಿಕ್ಕಿಯೇ ಬಿಟ್ಟಿತು. ಹೆದ್ದಾರಿಗೆ ತಾಗಿಕೊಂಡು ಒಂದು ಅಡ್ಡದಾರಿ! ಅಲ್ಲಿ ಒಂದು ಶಾಲೆ, ಎರಡು ಬ್ಯಾಂಕು ಹಾಗೂ ಒಂದು ನರ್ಸಿಂಗ್ ಹೋಂ ಇದ್ದವು. ಹಳೆ ಕಟ್ಟಡಗಳನ್ನು ಕೆಡವಿ, ನೂತನ ಅಂಗಡಿ ಸಮುಚ್ಚಯಗಳು ನಿರ್ಮಾಣಗೊಳ್ಳುತ್ತಿರುವ ಸುಂದರ ತಾಣ ಅದಾಗಿತ್ತು. ಕಲ್ಲು, ಮಣ್ಣು, ಕಬ್ಬಿಣದ ಸರಳುಗಳು, ಮುರಿದ ಗೋಡೆ, ಬಿರಿದ ರಸ್ತೆ, ಕಸ ಕಟ್ಟಿಕೊಂಡು ಇಡೀ ದಿನ ವಾಸನೆ ಬೀರುವ ಮೋರಿ ಇವೆಲ್ಲವುಗಳಿಂದ "ಶೋಭಿಸುತ್ತಿದ್ದ" ಆ ದಾರಿಯಲ್ಲಿ ಸದಾ ಗಿಜಿಬಿಜಿ ಜನ! 'ಇನ್ನೇಕೆ ತಡ?' ಎಂದು ನಗರಾಭಿವೃದ್ಧಿ ಯೋಜನೆ ನಿಗಮ ನಿಯಮಿತ, ನಗರ ಪಾಲಿಕೆ ಮುಂತಾದವರೆಲ್ಲ ಸೇರಿ ಒಪ್ಪಿಗೆಯ ಮುದ್ರೆ ಒತ್ತಿಯೇಬಿಟ್ಟರು.

ಹೆದ್ದಾರಿಯ ಬದಿಯ ಸಂತೆ, ಹೆದ್ದಾರಿಗೆ ಅಂಟಿಕೊಂಡ ಅಡ್ಡದಾರಿಯಲ್ಲಿ ಸ್ಥಾಪಿತವಾಯ್ತು. ಇಷ್ಟು ವರ್ಷಗಳ ಕಾಲವೂ ತಮಗೆ ಸರಿಯಾದ ಸ್ಥಳ ಇಲ್ಲದಿದ್ದರಿಂದ(!) ವ್ಯಾಪಾರದಲ್ಲಿ ನಷ್ಟ ಅನುಭವಿಸಿ ಅನುಭವಿಸಿ, ಮಕ್ಕಳೆಲ್ಲಾ ಬೀದಿ ಪಾಲಾಗಿದ್ದಾರೆ. ಅವರನ್ನು ಶಾಲೆಗೆ ಕಳಿಸಬೇಕಾದರೆ ದುಡ್ಡು ಬೇಕು. ಆದ್ದರಿಂದ ಇನ್ನಾದರೂ ವಾರಕ್ಕೆ ಎರಡು ಸಲ ಸಂತೆ ನಡೆಸಲು ಅನುಮತಿ ನೀಡಬೇಕು ಎಂಬ ನ್ಯಾಯಯುತ(!) ಬೇಡಿಕೆಯನ್ನು ಸಂತೆಮಾಳದವರು ಎದುರಿಗಿಟ್ಟರು.

ವಿದ್ಯಾ ಪಕ್ಷಪಾತಿಗಳೂ, ಬಡಜನ ಪ್ರೇಮಿಗಳೂ, ನ್ಯಾಯಮೂರ್ತಿಗಳೂ, ಜನಹಿತ ರಕ್ಷಕರೂ, ಊರ ಸಕಲ ಚರಾಚರ ಜೀವಿಗಳ ಸಂರಕ್ಷಕರೂ ಆದ, ಜನರಿಂದಲೇ ಆಯ್ಕೆಗೊಂಡ ಈ ಜನನಾಯಕರು ಸಂತೆ ವ್ಯಾಪಾರಿಗಳ ಬೇಡಿಕೆಗೆ ಅಸ್ತು ಎಂದರು. ಸೋಮವಾರ ಮತ್ತು ಗುರುವಾರಗಳಂದು ಸಂತೆ ನಡೆಯಬೇಕೆಂದು ತೀರ್ಮಾನವಾಯ್ತು. ಅಂತೆಯೇ ಒಂದು ಜನಹಿತ ಮುಹೂರ್ತದಲ್ಲಿ "ವಾರಕ್ಕೆರಡು ಸಂತೆ"ಗೆ ಚಾಲನೆ ದೊರಕಿತು. ವ್ಯಾಪಾರ ವಹಿವಾಟು ಭರ್ಜರಿಯಿಂದ ಸಾಗತೊಡಗಿತು.

ಈ ಸಂತೆಯಿಂದ ಶಾಲೆಯವರೂ, ನರ್ಸಿಂಗ್ ಹೋಮಿನವರೂ ಅಸಮಾಧಾನಗೊಂಡರು. ಸಂತೆಯ ಆಗಮನದಿಂದ ತಮಗೆ ನಾನಾ ರೀತಿಯ ಕಷ್ಟಗಳುಂಟಾಗಿವೆ ಎಂದು ದೂರಿದರು.

ಸಂತೆಯು ರಸ್ತೆಯಲ್ಲಿಯೇ ನಡೆಯುವುದರಿಂದ ನಡೆಯಲು ಮಾರ್ಗವೇ ಇಲ್ಲದಂತಾಗಿದೆ. ಆ ಕಿರಿದಾದ ರಸ್ತೆಯ ಇಕ್ಕೆಲಗಳಲ್ಲಿಯೂ ತರಕಾರಿ ಇಟ್ಟುಕೊಳ್ಳುವುದರಿಂದ ರಸ್ತೆಯೆಲ್ಲಾ ಮುಚ್ಚಿಹೋಗಿ ವಾಹನಗಳು ಓಡಾಡದಂತಾಗಿವೆ. ಹಾಗಾಗಿ ಶಾಲೆಗೂ, ಆಸ್ಪತ್ರೆಗೂ ಬರುವ ಮಕ್ಕಳಿಗೂ, ಅಶಕ್ತರಿಗೂ, ರೋಗಿಗಳಿಗೂ ತುಂಬಾ ತುಂಬಾ ತೊಂದರೆ ಆಗಿದೆ. ರಸ್ತೆ ಇರುವುದು ವಾಹನ ಸಂಚಾರಕ್ಕಾಗಿ ಎಂಬುದನ್ನು ನಗರ ಪಾಲಿಕೆಯವರು ಮರೆತಂತಿದೆ. ರೋಗ ಉಲ್ಬಣಗೊಂಡು ರೋಗಿಗಳು ತುರ್ತಾಗಿ ಆಸ್ಪತ್ರೆಗೆ ಬರುವಾಗ ಸಂತೆ ಅಡ್ಡ ಆಗಿ, ಸಂತೆಯ ಮಧ್ಯದಲ್ಲೇ ಅವರ ಪ್ರಾಣಪಕ್ಷಿ ಹಾರಿಹೋಗುವ ಸಂದರ್ಭ ಇರುವುದರಿಂದ, ಸಂತೆಯನ್ನು ಈ ದಾರಿಯಿಂದ ಎತ್ತಂಗಡಿ ಮಾಡಬೇಕು. ಸೀರಿಯಸ್ ಆಗಿರುವ ರೋಗಿಗೆ ಹೆಚ್ಚು



*ರಸ್ತೆಯಲ್ಲಿಯೇ ಸಂತೆಯು ನಡೆಯುವುದರಿಂದ ನಡೆಯಲು ಮಾರ್ಗವೇ ಇಲ್ಲದಂತಾಗಿರುವುದು*

ಕಡಿಮೆ ಆಗಿ ಪ್ರಾಣಹೋಗುವುದರ ಒಳಗೆ ಅವರು ಆಸ್ಪತ್ರೆಗೆ ಸೇರುವ ಹಾಗೆ ಅನುಕೂಲವನ್ನು ಕಲ್ಪಿಸಿಕೊಡಬೇಕು– ಎಂದು ಅವರು ಒತ್ತಾಯಿಸತೊಡಗಿದರು.

ಸಂತೆ ಮುಗಿದ ಮೇಲೆ ಉಳಿದ ತರಕಾರಿ ತ್ಯಾಜ್ಯದ ವಿಲೇವಾರಿ ತಡ ಆಗಿ, ಅದೊಂದು ಸೊಳ್ಳೆ – ನೊಣಗಳ ಬೀಡಾಗಿದೆ ಎಂದು ಅವರ ತಕರಾರು ಎತ್ತಿದರು. ಇದರಿಂದಾಗಿ ಶಾಲಾ ಮಕ್ಕಳು ಹಾಗೂ ಶಿಕ್ಷಕರು ನಾನಾ ರೋಗಗಳಿಗೆ ತುತ್ತಾಗುತ್ತಿದ್ದಾರೆಂದು ದೂರತೊಡಗಿದರು.

ಶಾಲಾ ಸಿಬ್ಬಂದಿಗಳು, ವೈದ್ಯರು, ನರ್ಸುಗಳು, ಆಗಾಗ್ಗೆ ಸ್ಟ್ರೈಕ್ ಮಾಡಿ ಸಂತೆಗೆ ಬೇರೆ ಜಾಗ ಮಾಡಿಕೊಟ್ಟು, ಬೆಳೆಯುವ ಮಕ್ಕಳ ಆರೋಗ್ಯವನ್ನು ಕಾಪಾಡಬೇಕೆಂದು ಗಲಾಟೆ ಮಾಡತೊಡಗಿದರು.

ಸಂತೆಯ ಗಲಾಟೆ ಹಾಗೂ ತ್ಯಾಜ್ಯಗಳೆರಡೂ ರೋಗಿಗಳ ಆರೋಗ್ಯಕ್ಕೆ ಮಾರಕವಾದ್ದರಿಂದ ಆದಷ್ಟು ಬೇಗ ಈ ಸಂತೆಯನ್ನು ಎತ್ತಂಗಡಿ ಮಾಡಿ ರೋಗಮುಕ್ತ, ಆರೋಗ್ಯಯುಕ್ತ ಶಾಂತ ವಾತಾವರಣ ಮಕ್ಕಳಿಗೂ, ರೋಗಿಗಳಿಗೂ ದೊರಕುವಂತೆ ಮಾಡಬೇಕೆಂದು ದಿನ ನಿತ್ಯ ನೆನಪುಮಾಡಿ ಕಾಡತೊಡಗಿದರು.

ದಿನೇ ದಿನೇ ಪತ್ರಿಕೆಗಳಲ್ಲಿ ಈ ಬಗ್ಗೆ ವರದಿಗಳು ಪುಂಖಾನುಪುಂಖವಾಗಿ ಬರಲಾರಂಭಿಸಿದವು. ದೂರದರ್ಶನದವರು ದಿನದ ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ವೈದ್ಯರು ಹಾಗೂ ಶಾಲಾಡಳಿತದವರ ದೂರುಗಳನ್ನು ಬಿತ್ತರಿಸಿದರು. ಇದರ ಬಗ್ಗೆ ಸಾಕಷ್ಟು ಚರ್ಚಾಕೂಟಗಳನ್ನೂ ನಡೆಸಿದರು. ಊರ ನಾಗರಿಕರ ಅಭಿಪ್ರಾಯಗಳನ್ನು ಸಂಗ್ರಹಿಸಿ ಜನತೆಯೆದುರು ತೆರೆದಿಟ್ಟರು. ಊರವರೆಲ್ಲ ದೂರದರ್ಶನದಲ್ಲಿ ದರ್ಶಿತರಾಗಿ(!) ಧನ್ಯರಾದರು. ಕೆಲವರು ತಾನು ತಾನು ಎಂದು ಮುಗಿಬಿದ್ದು ಹೇಳಿಕೆ ಕೊಟ್ಟು ಮತ್ತಷ್ಟು ಪ್ರಸಿದ್ಧರಾದರು. ಇದರಿಂದಾಗಿ ತುಂಬ ಆಲೋಚಿಸಿ, ಸಂತೆಯನ್ನು ಇಲ್ಲಿಗೆ ಸ್ಥಳಾಂತರಿಸಿದ ಬುದ್ಧಿವಂತ ಅಧಿಕಾರಿಗಳಿಗೆ ಸಂತೃಪ್ತಿಯಾಯಿತು.

ನಗರದ ಅಭಿವೃದ್ಧಿಗಾಗಿ ಹಗಲಿರುಳು ಶ್ರಮಿಸುತ್ತಿರುವ ನಗರ ಪಾಲಕರು ದೂರದರ್ಶನದವರ ಕರೆಯನ್ನು ಮನ್ನಿಸಿ ತಾವೂ ಚರ್ಚಾಕೂಟದಲ್ಲಿ ಭಾಗವಹಿಸಿದರು. ಮಾತ್ರವಲ್ಲ, ತಾವು ಮಾಡಿರುವುದು 'ಅವ್ಯವಸ್ಥೆ ಅಲ್ಲ. ಅದೊಂದು ಬಹು ಆಲೋಚಿತ ಸುವ್ಯವಸ್ಥೆ' ಎಂಬುದನ್ನು ಅತಿ ಸುಂದರವಾದ ಸಮರ್ಪಕ ಸಮರ್ಥನೆಗಳ ಮೂಲಕ ಬಿಂಬಿಸಿದರು. ಮನುಕುಲವೆಲ್ಲ ಇವರ ಹೇಳಿಕೆಗಳನ್ನು ಒಪ್ಪಿಕೊಂಡು, "ಅಹುದಹುದು" ಎಂದು ಮೆಚ್ಚಿ ತಲೆದೂಗುವಂತೆ ಮಾಡಿದರು.

'ಇದೇ ಜಾಗದಲ್ಲಿ ಸಂತೆ, ಅದರಲ್ಲೂ ಎರಡೆರಡು ಸಂತೆ ನಡೆಸಲು ಒಪ್ಪಿಗೆ ಕೊಡಲು ಮುಖ್ಯವಾದ ಕಾರಣ ಇಡೀ ಊರಿನವರ ಆರೋಗ್ಯ ವೃದ್ಧಿ!' ಎಂದು ಹೇಳಿಕೆ ಕೊಟ್ಟಿದ್ದಲ್ಲದೆ, ಅದು ಹೇಗೆ ಎಂಬುದನ್ನೂ ಅವರು ಚೆನ್ನಾಗಿ ವಿವರಿಸಿದರು.

ಊರಿನ ಮಕ್ಕಳೆಲ್ಲಾ ಈ ಶಾಲೆಗೆ ಬರುತ್ತಾರೆ. ಅವರನ್ನು ಶಾಲೆಗೆ ಬಿಡಲು, ಕರೆದೊಯ್ಯಲು ಅವರ ಅಪ್ಪ ಅಮ್ಮ ಬರುತ್ತಾರೆ. ಹಾಗೆ ಬಂದವರು ಫ್ರೆಶ್ ತರಕಾರಿಯನ್ನು ವಾರಕ್ಕೆರಡು ಬಾರಿ ಕೊಂಡೊಯ್ದು ಫ್ರೆಶ್ ಅಡುಗೆ ಮಾಡಿ ಮನೆ ಮಂದಿಗೆ ಬಡಿಸುತ್ತಾರೆ. ಇದರಿಂದ ಮನೆಯವರೆಲ್ಲರ ಆರೋಗ್ಯ ಸೂಪರ್ ಆಗಿರುತ್ತೆ. ಶಾಲಾ ಶಿಕ್ಷಕರೂ ಕೂಡ ಮನೆಗೆ ಹೋಗುವಾಗ ಫ್ರೆಶ್ ತರಕಾರಿಗಳನ್ನು ತೆಗೆದುಕೊಂಡು ಹೋಗಬಹುದು. ಆಸ್ಪತ್ರೆಯ ಕ್ಯಾಂಟೀನಿನವರು ಸಹ ಫ್ರೆಶ್ ತರಕಾರಿ ಉಪಯೋಗಿಸಿ ರೋಗಿಗಳ ಆರೋಗ್ಯ ಸುಧಾರಣೆಗೆ ಪೂರಕವಾದ ರುಚಿಕಟ್ಟಾದ ಅಡುಗೆಯನ್ನು ತಯಾರಿಸಬಹುದು. ಒಳ್ಳೆಯ ತರಕಾರಿ ಕೈಗೆಟಕುವ ಜಾಗದಲ್ಲೇ ದೊರಕುವುದರಿಂದ, ಸಮಯ, ಶ್ರಮ ಎರಡೂ ಉಳಿಯುವುದು, ಹಾಗಾಗಿ ಅಲ್ಲಿನ ಸಿಬ್ಬಂದಿಗಳು ಹೆಚ್ಚಿನ ಉತ್ಸಾಹದಿಂದ ಶೀಘ್ರವಾಗಿ ಆಹಾರವನ್ನು ನೀಡಬಹುದು. ಇದರಿಂದ ರೋಗಿಗಳು ಬೇಗನೆ ಚೇತರಿಸಿಕೊಳ್ಳುತ್ತಾರೆ. ಹಳೇ ರೋಗಿಗಳು ಬೇಗನೆ ಗುಣಮುಖರಾದಲ್ಲಿ ಅವರ ಬೆಡ್ ಹೊಸ ರೋಗಿಗೆ ಬೇಗನೆ ತೆರವಾಗುತ್ತದೆ. ಇದು ನರ್ಸಿಂಗ್ ಹೋಮ್ ಅವರಿಗೂ ಒಳ್ಳೆಯದೇ ತಾನೆ? ಈ ನರ್ಸಿಂಗ್ ಹೋಮಿಗೆ ಬಂದವರು ಬೇಗ ಗುಣಮುಖರಾಗುತ್ತಾರೆ ಎನ್ನುವುದು ಅವರಿಗೆ ಒಂದು ಹೆಗ್ಗಳಿಕೆ ಅಲ್ವಾ?



*ಸಂತೆಯು ಮುಗಿದ ಮೇಲೆ ಉಳಿದ ತರಕಾರಿ ತ್ಯಾಜ್ಯ*

ಇನ್ನು ತರಕಾರಿ ಕಸದ ವಿಷಯಕ್ಕೆ ಬರೋಣ. ನಿಮಗೆಲ್ಲಾ ತಿಳಿದಿರುವಂತೆ ತರಕಾರಿಯ ಕಸವೇ 'ಗೊಬ್ಬರ'! ಅಡುಗೆ ಮನೆಯ ಕಸದ ಡಬ್ಬಿಯಲ್ಲಿ ದಿನವಿಡೀ ಕುಳಿತು, ಕೊಳೆತು ಹೋಗುವ ತರಕಾರಿ ಕಸ, ಹಣ್ಣಿನ ಸಿಪ್ಪೆಗಳ ಬಗ್ಗೆ ತಕರಾರು ಎತ್ತದ ಮಂದಿ, ತಮ್ಮ ಗಿಡಗಳ ಬುಡಕ್ಕೇ ಅದನ್ನು ಹಾಕಿದಾಗ ಮೌನವ್ರತವನ್ನು ಆಚರಿಸುವ ಮಂದಿ, ಇಲ್ಲಿ ಸಂತೆ ಮುಗಿದ ಮೇಲೆ ಅಲ್ಲೆಲ್ಲೋ 'ದಾರಿಯಲ್ಲಿ' ಬಿದ್ದಿರುವ ಕಸದ ಬಗ್ಗೆ ತಕರಾರು ಎತ್ತುವುದು ಏಕೆ? ಇವರ ಮನೆಯ ಕಸದ ಡಬ್ಬಿಯಲ್ಲಿ ಇರುವ ನೊಣ ದೇವಲೋಕದ್ದೇ? ಇವರ ತೋಟದಲ್ಲಿ ಇರುವ ಸೊಳ್ಳೆ ಗಂಧರ್ವಲೋಕದ್ದೇ? ರಸ್ತೆ ಮೇಲೆ ಇರುವ ನೊಣ – ಸೊಳ್ಳೆಗಳೂ ಮಾತ್ರ ರೋಗಕಾರಕವೇ? ಇವರ ಮನೆಯ ಕಸ ಬಿಸಿಬೇಳೆಭಾತೇ? ಇವರ ಮನೆಯ ಗೊಬ್ಬರ ವಾಂಗೀಭಾತೇ? ಇವರ ಮನೆಯ ಕೊಳೆತು ಬರುವ ವಾಸನೆ ಶ್ರೀಗಂಧದ ಪರಿಮಳವೇ? ರಸ್ತೆ ಮೇಲಿನ ತರಕಾರಿ ಕಸ ಮಾತ್ರ ಕಚಡವೇ? ಅದರ ವಾಸನೆ ಮಾತ್ರ ಕೆಟ್ಟ ದುರ್ನಾತವೇ?

ಮನೆಯ ಒಳಗೇ ಇರುವ ಅಡುಗೆ ಮನೆಯಲ್ಲಿ ತರಕಾರಿ ಇರಬಹುದಂತೆ. ಆದರೆ ಇವರ ಶಾಲೆಯ ಬಳಿ, ರಸ್ತೆ ಮೇಲೆ ಎಲ್ಲಾ ಇರಬಾರದಂತೆ. ಶಾಲೆಗೆ ಹೋಗುವ ರಸ್ತೆಯಲ್ಲಿದ್ದರೆ ಅದೇನು ಓಡಿ ಬಂದು ಇವರನ್ನು ಕಚ್ಚುತ್ತಾ? ನಿಜ ಹೇಳಬೇಕೆಂದರೆ ಅದರಿಂದ ಇವರ ಮಕ್ಕಳಿಗೇ ಲಾಭ. ಶಾಲೆಯ ಬಳಿಯೇ ವೈವಿಧ್ಯಮಯ ತರಕಾರಿಗಳು ಇರುವುದರಿಂದ, ಶಿಕ್ಷಕರು ಮಕ್ಕಳನ್ನು ಸಂತೆಗೆ ಕರೆದೊಯ್ದು, ಉಚಿತವಾಗಿ ಎಲ್ಲಾ ತರಕಾರಿಗಳ ಪರಿಚಯ ಮಾಡಿಸಬಹುದು. ಮಕ್ಕಳನ್ನು ಹಾಗೆ ಕರೆದೊಯ್ಯುವುದರಿಂದ ಬಿಸಿಲು ಮೈಮೇಲೆ ಬಿದ್ದು ಅವರ ಮೈಯಲ್ಲಿ ವಿಟಮಿನ್ 'ಡಿ' ಉತ್ಪತ್ತಿಯಾಗುತ್ತೆ. ನಡೆದು, ಬಗ್ಗಿ, ಎದ್ದು, ಆಚೆ ಈಚೆ ನೋಡಿ ವ್ಯಾಯಾಮ ಆಗುತ್ತೆ. ಮೊಬೈಲ್ ಬಂದ ಮೇಲೆ ಮಕ್ಕಳಿಗೆ ಈ ವ್ಯಾಯಾಮಗಳೆಲ್ಲ ಮರೆತೇಹೋಗಿದೆ. ಇಲ್ಲಿ ಅದನ್ನು ಮಾಡಿಸಿದರೆ ಹೆತ್ತವರಿಗೆ ಏನು ತೊಂದರೆ?

ರಸ್ತೆಯ ಮೇಲೆ ತರಕಾರಿಗಳು ಬಂದು ಆವರಿಸಿಕೊಂಡ ಮೇಲೆ, ವಾಹನ ಸಂಚಾರಕ್ಕೆ ಭಾರೀ ಅಡಚಣೆಯಾಗಿದೆ ಎಂಬುದು ಅವರ ವಾದ. ಆದರೆ ರಸ್ತೆ ಇರುವುದು ವಾಹನ ಸಂಚಾರಕ್ಕಾಗಿ ಮಾತ್ರ ಎಂದು ಹೇಳಿದವರಾರು? ಮನುಷ್ಯರು, ಪ್ರಾಣಿಗಳು ಎಲ್ಲರಿಗೂ ಅಲ್ಲಿ ಓಡಾಡುವ ಹಕ್ಕಿದೆ. ಆದ್ದರಿಂದ ವಾಹನ ಇರುವವರು ಹೀಗೆ ಧಿಮಾಕು ತೋರಿಸಬಾರದು. ವೈದ್ಯರಿಗೂ, ಶಾಲೆಯ ಅಧಿಕಾರಿಗಳಿಗೂ ಇದು ಶೋಭಿಸುವುದಿಲ್ಲ.

ಇನ್ನು ಕಾಯಿಲೆಯ ವಿಚಾರ. ಅದು ಎಲ್ಲಿದ್ದರೂ ಬರಬಹುದು. ಶಾಲೆಯ ಮಕ್ಕಳಿಗೆ ಬಂದರೆ, ಆಸ್ಪತ್ರೆ ಪಕ್ಕದಲ್ಲೇ ಇದೆಯಲ್ಲಾ. ಇನ್ನೇನು ಭಯ? ಇಲ್ಲಸಲ್ಲದ ವಿಷಯಗಳನ್ನೆತ್ತಿ ಸುಮ್ಮನೆ ತಕರಾರು ಮಾಡಬಾರದು.

ನೊಣ – ಸೊಳ್ಳೆ ಇದೇಂತ ಗಲಾಟೆ. ಅವು ಎಲ್ಲಿ ಇಲ್ಲ, ನೀವೇ ಹೇಳಿ. ಅವೂ ನಮ್ಮ ಹಾಗೇನೇ ಜೀವ ಇರುವ, ಹೊಟ್ಟೆಪಾಡಿಗಾಗಿ ಹೋರಾಡುವ ಕೀಟಗಳಲ್ಲವೆ? ಅವುಗಳ ಮೇಲೆ ಕಿಂಚಿತ್ತಾದರೂ ದಯೆ ಬೇಡವೆ? ಅವು ತಮ್ಮ ಪಾಡಿಗೆ ತಾವು ತರಕಾರಿ ತ್ಯಾಜ್ಯದ ಮೇಲೆ ಕುಳಿತಿದ್ದರೆ ಇವರದೇನು ತಕರಾರು? ಇದು ತೀರಾ ಅತಿಯಾಯ್ತು ಅನ್ಸಲ್ವಾ?

ಇನ್ನು ರೋಗಿಗಳ ಪ್ರಾಣ ಹೋಗೋ ವಿಷಯ. ಅದು ಎಲ್ಲಿ ಹೋಗಬೇಕೂಂತ ಅವರ ಹಣೆಯಲ್ಲಿ ಬರೆದಿರುತ್ತೋ ಅಲ್ಲೇ ಹೋಗುತ್ತೆ. ಅದು ಇವರ ನರ್ಸಿಂಗ್ ಹೋಮ್‌ನಲ್ಲೇ ಹೋಗಬೇಕು ಅಂತ ಹಟ ಯಾಕೆ? ಅಲ್ಲೇನು ಸತ್ತ ಪ್ರೇತಾತ್ಮಗಳಿಗಾಗಿ ವಾರ್ಡ್ ಇದೆಯಾ?

ಅದೂ ಅಲ್ಲದೆ ದಾರಿಯಲ್ಲಿ ರೋಗಿಯ ಪ್ರಾಣ ಹೋದರೆ, ಇವರ ಆಸ್ಪತ್ರೆಗೆ ಬಂದೋರೆಲ್ಲಾ ಸಾಯ್ತಾರೆ ಅನ್ನೋ ಕೆಟ್ಟ ಹೆಸರಿಂದ ಇವರು ಪಾರಾಗಲ್ವ? ಇಷ್ಟೆಲ್ಲಾ ಒಳ್ಳೆಯದೇ ಆಗ್ತಾ ಇರೋವಾಗಲೂ ಇವರು ಸಂತೆಯನ್ನು ದೂರುವುದು ಸರಿಯಲ್ಲ.

ಸಂತೆಯ ಶಬ್ದದಿಂದ ಒಳರೋಗಿಗಳಿಗೆ ತೊಂದರೆ ಆಗುತ್ತದೆ ಅಂತ ಹೇಳ್ತಾರೆ. ಆದರೆ ನಿಜಾಂಶ ಏನು ಗೊತ್ತಾ? ಆ ಶಬ್ದ ಕೇಳ್ತಾ ಕೇಳ್ತಾ ಅವರಿಗೆ ಕಾಯಿಲೆ ವಿಷಯವೇ ಮರೆತುಹೋಗಿ, ಅವರೆಲ್ಲಾ ಬೇಗನೆ ಗುಣಮುಖರಾಗುತ್ತಿದ್ದಾರೆ. ನರ್ಸಿಂಗ್ ಹೋಮಲ್ಲಿರುವ ಕೆಲವು ವೈದ್ಯರಿಗೂ, ದಾದಿಯರಿಗೂ ಕೆಲವು ಶ್ರೀಮಂತ ರೋಗಿಗಳು ಇನ್ನೊಂದಷ್ಟು ದಿನ ತಮ್ಮಲ್ಲೇ ಇದ್ದರೆ ಇನ್ನಷ್ಟು ದುಡ್ಡು ಮಾಡಿಕೊಳ್ಳಬಹುದಲ್ವ ಅನ್ನೋ ದುರಾಸೆ. ಹಾಗಾಗಿ ಅವರು ಬೇರೆಯವರ ಕಿವಿ ಊದಿ ಗಲಾಟೆ ಮಾಡಿಸುತ್ತಾ ಇರ್ತಾರೆ.

ಸಂತೆಯ ವ್ಯಾಪಾರಿಗಳು ತಾವು ಮಾರುವ ವಸ್ತು ಹಾಗೂ ಅದರ ಬೆಲೆಯನ್ನು ವಿವಿಧ ಸ್ವರ ವಿನ್ಯಾಸಗಳಿಂದ ಅರಚಿ, ಕಿರುಚಿ ಗ್ರಾಹಕರನ್ನು ಸೆಳೆಯುವ ಪರಿ ಅಮೋಘವಾದದ್ದು. ಅದನ್ನು ಅಭ್ಯಾಸ ಮಾಡಿ ಛದ್ಮವೇಷ ಸ್ಪರ್ಧೆಯಲ್ಲಿ ಅನುಕರಿಸಿ ತೋರಿಸಿದ ಈ ಶಾಲೆಯ ಮಕ್ಕಳಿಗೆ ರಾಜ್ಯ ಮಟ್ಟದಲ್ಲಿ ಪ್ರಥಮ ಬಹುಮಾನ ಬಂದಿದೆ ಎಂಬುದನ್ನು ನಾವು ಮರೆಯಬಾರದು. ಸಂತೆಯ ಶಬ್ದವನ್ನು ಆಲಿಸಿದ್ದರಿಂದ ತಾನೇ ಈ ಮಕ್ಕಳಿಗೆ ಬಹುಮಾನ ಬಂದಿದ್ದು. ವಿಷಯ ಹೀಗಿರುವಾಗ ಸಂತೆಯ ಶಬ್ದವನ್ನು ಹೀಗಳೆಯೋದು ಸರೀನಾ? ಯಾವ ಸಂತೆಯ ಶಬ್ದದಿಂದ ಆಸ್ಪತ್ರೆಗೂ, ಶಾಲೆಗೂ ಕೀರ್ತಿ ಬರುತ್ತಿದೆಯೋ, ಆ ಶಬ್ದವನ್ನು ತುಚ್ಛವಾಗಿ ಕಂಡರೆ ಅದು ಶಬ್ದ ದೇವತೆಯನ್ನೇ ಅವಮಾನಿಸಿದಂತೆ ಆಗುತ್ತದೆ ಎಂಬುದನ್ನು ಸಂಬಂಧಪಟ್ಟವರು ಮರೆಯಬಾರದು.

ಸಂತೆ ತಮ್ಮ ರಸ್ತೆಗೇ ಬಂದದ್ದರಿಂದ ತಮಗೇನೋ ಭಾರೀ ಆಪತ್ತೇ ಬಂದೊದಗಿದಂತೆ ಬೂಟಾಟಿಕೆ ಮಾಡುವ ಈ ಮಂದಿ, ಸಂತೆಯವರ ಕಷ್ಟಗಳ ಬಗ್ಗೆ ಒಮ್ಮೆಯಾದರೂ ಆಲೋಚಿಸಿದ್ದಾರಾ? ಕೇವಲ ಸ್ವಾರ್ಥ ಚಿಂತನೆಯಲ್ಲಿ ತೊಡಗಿಕೊಂಡವರಿಗೆ ಬೇರೆಯವರ ಒಳ್ಳೆಯ ಗುಣ, ಕಷ್ಟ ಸಹಿಷ್ಣುತೆಯ ಬಗ್ಗೆ ಅರಿವೇ ಇರುವುದಿಲ್ಲ.

ಸಂತೆಯವರೂ ಕೂಡ ಆ ರಸ್ತೆಯ ಇಕ್ಕೆಲಗಳಲ್ಲಿ ಕಟ್ಟುತ್ತಿರುವ ಕಟ್ಟಡಗಳಿಗಾಗಿ, ರಸ್ತೆಯಲ್ಲಿ ಬಂದು ಬಿದ್ದಿರುವ ಕಲ್ಲು – ಮಣ್ಣು ಗುಡ್ಡಗಳ ರಾಶಿಯ ನಡುವಲ್ಲಿ ಹೇಗೋ ಜಾಗ ಮಾಡಿಕೊಂಡು ಕುಳಿತುಕೊಳ್ಳುವುದಿಲ್ವಾ? ಅವರೇನಾದ್ರು ಇವರ ಹಾಗೆ ಗಲಾಟೆ ಮಾಡ್ತಾ ಇದ್ದಾರ? "ಕಲ್ಲು ಮಣ್ಣಿನ ಗುಡ್ಡಗಳಿರೋ ಜಾಗಾನಾದ್ರೂ ಕೊಡಿ, ನಾವು ಹೇಗೋ ಬದುಕಿಕೊಳ್ತೀವಿ" ಅಂತ ಹೇಳಿದವರು ಅವರು!! ಪಾಪ! ಮುಂದೆ ಆ ಕಟ್ಟಡಗಳನ್ನೆಲ್ಲಾ ಕಟ್ಟಿ ಆದ ಮೇಲೆ, ಅಲ್ಲಿನ ಮನೆಯವರು, ಅಂಗಡಿಯವರು ತಮ್ಮ ಬಳಿ ತರಕಾರಿಯನ್ನು ಖರೀದಿಸಬಹುದು ಎಂಬ ದೂರದ ಆಸೆಯಿಂದ ಕಾಯುತ್ತಿದ್ದಾರೆ. ಆ ದಾರಿಯಲ್ಲಿ ಬರುವ ಕೆಲವು ವಾಹನಗಳ ಚಾಲಕರು ನಿಷ್ಕರುಣೆಯಿಂದ ತಮ್ಮ ತರಕಾರಿಯ ಮೇಲೇ ವಾಹನಗಳನ್ನು ಚಲಾಯಿಸಿದರೂ, ಅವಾಚ್ಯ ಶಬ್ದಗಳಿಂದ ನಿಂದಿಸಿದರೂ ಅವೆಲ್ಲವನ್ನೂ ಬಹಳ ತಾಳ್ಮೆಯಿಂದ ಸಂತೆಯವರು ಸಹಿಸಿಕೊಂಡಿದ್ದಾರೆ. ನಾಲ್ಕು ದಿನಗಳಿಗೊಮ್ಮೆ ಸ್ಟ್ರೈಕ್ ಮಾಡುತ್ತಾ ಶಾಲೆಯ ಹಾಗೂ ಆಸ್ಪತ್ರೆಯ ಆಡಳಿತಾಧಿಕಾರಿಗಳು ಕಿರಿಕಿರಿ ಮಾಡುತ್ತಿದ್ದರೂ ಹಲ್ಲು ಕಚ್ಚಿ ಸಹಿಸಿಕೊಂಡಿದ್ದಾರೆ. ಇಂಥಾ ಸಂತೆಯ ಮಾರಾಟಗಾರರಿಗೆ ಅಂಗಡಿ ಎಂಬ ಸೂರು ಇಲ್ಲ ಎಂಬ ಕಾರಣಕ್ಕೆ ಅವರನ್ನು ಇಷ್ಟು ಹೀನಾಯವಾಗಿ ಕಾಣುವುದೆ? ದೊಡ್ಡವರು, ವಿದ್ಯಾವಂತರು ಎನ್ನಿಸಿಕೊಂಡ ಇವರಿಗೆ ಹೀಗೆ ನಡೆದುಕೊಳ್ಳಲು ನಾಚಿಕೆಯಾಗುವುದಿಲ್ಲವೆ? ಮನುಷ್ಯ ಮನುಷ್ಯನನ್ನೇ ತುಳಿಯುವುದೆ?

ಅಥವಾ ಇವೆಲ್ಲ ವಿರೋಧ ಪಕ್ಷದವರ ಕುತಂತ್ರವೂ ಆಗಿರಬಹುದೇನೋ! ಮುಂದಿನ ಚುನಾವಣೆಯಲ್ಲಿ ತಾವು ಗೆಲ್ಲಬೇಕೆಂದು ಅವರು ನಮ್ಮ ಒಳ್ಳೆಯ ಕೆಲಸಗಳಲ್ಲಿ ತಪ್ಪು ಹುಡುಕುತ್ತಾ, ಯಾರಯಾರನ್ನೋ ಎತ್ತಿಕಟ್ಟುತ್ತಾ ಇದ್ದಾರೆಂದು ನಮಗೆ ನಂಬಲರ್ಹವಾದ ಮೂಲದಿಂದ ಮಾಹಿತಿ ಬಂದಿದೆ. ಕೂಲಂಕಷವಾಗಿ ತನಿಖೆ ಮಾಡಿದರೆ ಸತ್ಯ ಹೊರಬೀಳುತ್ತದೆ. ಇಲ್ಲದಿದ್ದರೆ ಶಾಲೆಯ ಮಕ್ಕಳಿಗೆ, ಹೆತ್ತವರಿಗೆ, ಶಿಕ್ಷಕರಿಗೆ, ವೈದ್ಯರಿಗೆ, ರೋಗಿಗಳಿಗೆ, ಅಂಗಡಿಯವರಿಗೆ, ಸಾರ್ವಜನಿಕರಿಗೆ, ಅಪಾರ್ಟ್‌ಮೆಂಟಿನ ಮಹಿಳೆಯರಿಗೆ – ಹೀಗೆ ಎಲ್ಲರಿಗೂ ಅನುಕೂಲಕರವಾಗಿರುವ ಸಂತೆ ಬಗ್ಗೆ ಇಷ್ಟು ಗಲಾಟೆಯೇ? .... ಎಂಬ ನಗರಾಡಳಿತದವರ ವಾದ ಕೇಳಿ ಜನರು ದಂಗಾದರು. ದೂರದರ್ಶನದವರಿಗೆ ಮಾತೇ ಮರೆತುಹೋಯಿತು. ಇನ್ನೂ ಕೇಳಬೇಕೆಂದಿದ್ದ ಪ್ರಶ್ನೆಗಳೆಲ್ಲ ಸತ್ತು ಸಮಾಧಿಯಾದವು.

ಇದಾದ ಕೆಲವೇ ದಿನಗಳಲ್ಲಿ ಈ ವಿಷಯ ಬೇರೊಂದು ತಿರುವು ಪಡೆದು ಆಡಳಿತ ಪಕ್ಷ – ವಿರೋಧ ಪಕ್ಷದವರ ಜಟಾಪಟಿಗೆ ಕಾರಣವಾಯ್ತು. ಅಂತೂ ಇಂತೂ ದಿನಪತ್ರಿಕೆ ಹಾಗೂ ಟಿ.ವಿ.ಗಳಲ್ಲಿ ಈ ಸಂತೆಯ ವಿಷಯ ಸದಾ ಜೀವಂತವಾಗಿ ನಲಿದಾಡುತ್ತಾ, ಸಂತೆಯ ಸ್ಥಾಪನಾಕರ್ತರಿಗೆ ಬೇಕಾದಂತೆ ಚಿರಂಜೀವಿಯಾಯಿತು.

**ಸತ್ಯವತಿ ಹರಿಕೃಷ್ಣನ್**
'ಕೌಸ್ತುಭ', ಮೈದಾನ ರಸ್ತೆ, ಸುರತ್ಕಲ್
ಮಂಗಳೂರು – ೫೭೫ ೦೧೪

# ಗಝಲ್

ಹಣೆ ಬರಹವೆಂದು ಕೈಕಟ್ಟಿ ಮಾತಿದ್ದೂ ಸುಮ್ಮನೆ ಕೂಡಬೇಕೆ ಈ ಲೋಕದೆದುರು
ಒಳಮನೆಯ ಹೊಸ್ತಿಲಳೊಗೆ ಮೈಲಿಗೆಂದು ಕುದಿಯಬೇಕೆ ಈ ಲೋಕದೆದುರು

ಮಡಿ ಮೈಲಿಗೆಯ ಮನದೆದುರು ಬೆತ್ತಲೆ ಒಂದಾಗಿದೆ ಬದುಕು
ಮನಸಿಗೆ ಮೈಲಿಗೆ ಇಲ್ಲವೆಂದು ತಿಳಿದರೂ ದೂರವಾಗಬೇಕೆ ಈ ಲೋಕದೆದುರು

ಮೂರರೊಳಗೆ ಬಂಧನ ಮೂರರೊಳಗೆ ಬೆಂದೆನಾ ಧರ್ಮದೆದುರು
ಹೆಣ್ಣನೇ ದೇವರು ಮಾಡಿದ ಬದುಕಿನೊಳಗೆ ಮಾತನು ಅಡವಿಡಬೇಕೆ ಈ ಲೋಕದೆದುರು

ಬೆಂಕಿಗೆ ಹಾರಿದವಳೊಬ್ಬಳು ಬೆನ್ನು ಹತ್ತಿದವಳೊಬ್ಬಳು ಕಲ್ಲಾಗಿ ಕಾದವಳೊಬ್ಬಳು ಚರಿತ್ರೆಯೇ ಹೀಗೆ
ಗಾದೆಯೊಳಗೆ ನೇಣು ಬಿಗಿದರೂ ನಮ್ಮ ಕುಲವನು ಕುರುಡಾಗಬೇಕೆ ಈ ಲೋಕದೆದುರು

'ರೇಣು' ಕೇಳೆ ಮುಡಿಗಳೆಲ್ಲ ಒಂದಾಗಬೇಕು ನಡೆ ನುಡಿಯೊಳಗೆ ಇಂದೇ
ಕತ್ತಲಾದ ಬೊಗಸೆಯೊಳಗೆ ಮೈಲಿಗೆ ತೊಳೆದು ಬೆಳಕ ಬುಗ್ಗೆ ಚಿಮ್ಮಿಸಬೇಕು ಈ ಲೋಕದೆದುರು.

**ರೇಣುಕಾ ಎ. ಕಠಾರಿ, ಕೋಂ. ಅರುಣಕುಮಾರ ಕಠಾರಿ**
ಲಕ್ಷ್ಮೀನಗರ, ೧ನೇ ಕ್ರಾಸ್, ಪೆಟ್ರೋಲ್ ಬಂಕ್ ಹತ್ತಿರ, ಪೋಸ್ಟ್ ಕಾಕತಿ – ೫೯೧ ೧೧೩
ಬೆಳಗಾವಿ ತಾಲೂಕು ಮತ್ತು ಜಿಲ್ಲೆ



# ಕಾಲಕ್ಕೆ ತಕ್ಕಂತೆ...

ನಮ್ಮಲ್ಲಿ ಕಾಲವನ್ನೇ ಮೃತ್ಯು ಎಂಬುದಾಗಿಯೂ ಬಳಸುತ್ತೇವೆ. ಯಾರಾದರೂ ತೀರಿಕೊಂಡಾಗ ಅವರು ಕಾಲವಶವಾದರು, ಕಾಲನ ಕರೆಗೆ ಓಗೊಟ್ಟರು ಎಂದು ಮುಂತಾಗಿ ಬಳಸುತ್ತೇವೆ. ಅದೇನೇ ಇರಲಿ, ವ್ಯಕ್ತಿತ್ವ ವಿಕಸನ ತರಬೇತಿದಾರರೆಲ್ಲ ಹೇಳುವಂತೆ ದೊಡ್ಡವರಿಗೂ, ಚಿಕ್ಕವರಿಗೂ, ಬಡವರಿಗೂ, ಶ್ರೀಮಂತರಿಗೂ, ಗಂಡಸರಿಗೂ, ಹೆಂಗಸರಿಗೂ, ಒಟ್ಟಿನಲ್ಲಿ ಪ್ರಪಂಚದ ಪ್ರತಿಯೊಬ್ಬರಿಗೂ ಸಮಾನವಾಗಿ ಸಿಕ್ಕಿರುವುದೆಂದರೆ ಸಮಯ. ಎಲ್ಲರಿಗೂ ಸರಿಯಾಗಿ ಗಂಟೆಗೆ ೬೦ ನಿಮಿಷ, ದಿನಕ್ಕೆ ೨೪ ಗಂಟೆ. ಒಂದು ಸೆಕೆಂಡ್ ಹೆಚ್ಚಿಲ್ಲ ಕಡಿಮೆಯಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಕಾಲವನ್ನು ಅಥವಾ ಸಮಯವನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದರ ಮೇಲೆ ಅವರವರ ಜೀವನ ನಿರ್ಧಾರವಾಗುತ್ತದೆ. ಅವರೇ ಹೇಳುವ ಹಾಗೆ ಸದಾಕಾಲ ಚಟುವಟಿಕೆಯಿಂದಿರುವವರಿಗೆ ಎಲ್ಲ ಕೆಲಸಗಳಿಗೂ ಸಮಯ ಇರುತ್ತದೆ.

**ವಿ. ಶ್ರೀನಿವಾಸ**

**‘ಕಾ**ಲ ಕೆಟ್ಟುಹೋಯಿತು’ ‘ನಮ್ಮ ಕಾಲದಲ್ಲಿ ಹೀಗಿರಲಿಲ್ಲ’, ಏನು ಚನ್ನಾಗಿತ್ತು ಅಂತೀರಿ..., ನಮ್ಮ ಬಾಲ್ಯದಲ್ಲಿ ನಾವಂತೂ ಎಷ್ಟು ಎಂಜಾಯ್ ಮಾಡ್ತಿದ್ವಿ, ಈಗಿನ ಮಕ್ಳು ನೋಡಿ..., ಛೇ..., ನಾವು ಚಿಕ್ಕೋರಿದ್ದಾಗ ವಿಡಿಯೋ ಗೇಮ್ ಅಂತ ಒಂದಿತ್ತು, ಅದ್ರಲ್ಲಿ ಎಷ್ಟು ಆಟ ಆಡ್ತಿದ್ವಿ ಅಂತೀರಾ.., ಆಮೇಲೆ ಅದೆಂತದ್ದೋ ಕೀ ಬೋರ್ಡ್‌ನ್ನು ಟಿ.ವಿ.ಗೆ ಕನೆಕ್ಟ್ ಮಾಡಿ ಅದ್ರಲ್ಲಿ ವೀಡಿಯೋ ಗೇಮ್ಸ್ ಆಡ್ತಿದ್ವಿ. ಆಮೇಲೆ ಮನೆಗೇ ಕಂಪ್ಯೂಟರ್ ಬಂತು. ಅದ್ರಲ್ಲೂ ಆಟ..., ಆಟ..., ಅಪ್ಪ ಅಮ್ಮ ನೋಡ್ತಿರಬೇಕಾದರೆ ಪೈಂಟ್ ಬ್ರಷ್ಯು...,!! ಆಹಾ ಏನು ಮಜಾ ಇತ್ತು ಅಂತೀರಿ..., ಆಮೇಲೆ ಕಂಪ್ಯೂಟರ್‌ಗೆ ಇಂಟರ್‌ನೆಟ್ ಬಂತು. ಊಂ..., ಅದೇನೋ ಮರ್ರ್ತೋಯ್ತಲ್ಲ..., ಹೂಂ..., ಆರ್ಕುಟ್ಟು! ..., ಆರ್ಕುಟ್ಟು ಅಂತ ಒಂದು ಇತ್ತು. ನಮಗಂತೂ ಅದರ ಹುಚ್ಚೇ ಹತ್ತಿತ್ತು. (ಅದಕ್ಕೆ ಸೇರೋಕೆ ೧೮ ವರ್ಷ ಆಗಬೇಕು ಅಂತಿತ್ತು. ನಾವೆಲ್ಲ ಸುಳ್ಳು ಸುಳ್ಳೇ ಕೊಟ್ಟು ಸೇರಿದ್ವಿ!) ಅದ್ಯಾಕೋ ಸ್ವಲ್ಪ ದಿನಕ್ಕೇ ಹೋಗ್ಬಿಡ್ತಪ್ಪ. ಹೂಂ..., ಫೇಸ್‌ಬುಕ್ ಬಂದ್ಮೇಲೆ. ಹೌದು ಫೇಸ್‌ಬುಕ್ ಬಂದಮೇಲೆ ಆರ್ಕುಟ್ ಹೋಗೇಬಿಡ್ತು. ಫೇಸ್‌ಬುಕ್ ಅಂತೂ ಒಂದು ಎಂಜಾಯ್ ಮಾಡಿದಿವೀ ಅಂದ್ರೇ..., ಅಷ್ಟಿಷ್ಟಲ್ಲ..., ಈಗಿನ್ ಮಕ್ಳು ನೋಡಿ ಅವೆಲ್ಲ ಏನೂ ಇಲ್ಲ..., ಛೇ..., ನಾವು ಎಂಜಾಯ್ ಮಾಡಿದ ಬಾಲ್ಯ ಇವುಕ್ಕೆಲ್ಲಿ ಬರ್ಬೇಕು? ಆಮೇಲೆ ಫೇಸ್‌ಬುಕ್ಕಲ್ಲಿ ನಮ್ಮ ಅಪ್ಪ ಅಮ್ಮಗಳೂ ಸೇರ್ಕಂಡು ನಾವೇನು ಮಾಡ್ತಿದಿವೀ ಅಂತ ಇಣುಕಿ, ಕಾಮೆಂಟ್ ಮಾಡೋಕೆ ಶುರು ಹಚ್ಕೊಂಡ್ರು. ಅಷ್ಟೊತ್ತಿಗೆ ನಾವು ಮೆಲ್ಲಗೆ ಫೇಸ್‌ಬುಕ್ಕಿಂದ ವಾಟ್ಸ್ಯಾಪ್‌ಗೆ ಎಸ್ಕೇಪಾದ್ವಿ. ಹೂಂ..., ಈ ವಾಟ್ಸ್ಯಾಪ್‌ಗೆ ಮೊದ್ಲು ಮೊಬೈಲಲ್ಲೇ ಮೆಸೇಜು..., ಅಬ್ಬಾ! ಫ್ರೆಂಡ್ಸ್ ಜೊತೆ ಅದೇನ್ ಚ್ಯಾಟಿಂಗು. ವಾಟ್ಸ್ಯಾಪ್ ಬಂದಮೇಲೆ ಫೋಟೋ, ವೀಡಿಯೋ, ಸೆಲ್ಫೀ, ಅವೆಲ್ಲ ಇತ್ತು. ಅದುಕ್ಮುಂಚೆ ಬರೀ ಮೆಸೇಜ್ ಮಾಡೋದೇ ಎಷ್ಟು ಥ್ರಿಲ್ಲಿಂಗ್ ಆಗಿತ್ತು..., ಅಪ್ಪ ಅಮ್ಮಂಗೆ ಕಾಣದಂಗೆ ಬುಕ್ಕೊಳಗೇ ಮೊಬೈಲ್ ಇಟ್ಕೊಂಡು ಏನ್ ಫಾಸ್ಟಾಗಿ ಮೆಸೇಜ್ ಮಾಡ್ತಿದ್ವಿ. ಆ ಕಾಲ ಎಷ್ಟು ಚನ್ನಾಗಿತ್ತು. ಈಗಿನ ಮಕ್ಳು ನೋಡಿ..., ‘ಕಾಲ ಕೆಟ್ಹೋಯ್ತು...’

ಇನ್ನು ಸ್ವಲ್ಪ ದಿನಗಳ ನಂತರ ಈ ಥರದ ಮಾತುಗಳು ಕೇಳಿಬಂದರೆ ಆಶ್ಚರ್ಯವಿಲ್ಲ. ಆಶ್ಚರ್ಯ ಏನು? ಬಂದೇ ಬರುತ್ವೆ ನೋಡ್ತಾ ಇರಿ. ಯಾಕೇಂದ್ರೆ, ಈಗಿನ ಮಧ್ಯವಯಸ್ಕರು ಹೇಳೋದು ಕೇಳ್ತಿಲ್ವೇ? ‘ಕಾಲ ಕೆಟ್ಟುಹೋಯಿತು’, ‘ನಮ್ಮ ಕಾಲದಲ್ಲಿ ಹೀಗಿರಲಿಲ್ಲ’, ಏನು ಚನ್ನಾಗಿತ್ತು ಅಂತೀರಿ..., ನಮ್ಮ ಬಾಲ್ಯದಲ್ಲಂತೂ ಆಟ..., ಆಟ. ಈಗಿನ ಮಕ್ಕಳ ಹಾಗೆ ಬರೀ ಓದು ಓದು ಹೋಂ ವರ್ಕು ಅಂತಿರಲಿಲ್ಲ. ಗೋಲಿ, ಬುಗುರಿ, ಕುಂಟೆಬಿಲ್ಲೆ, ಕಲ್ಲಾಟ, ಮಣ್ಣಾಟ, ಕೋಲಾಟ, ಜೂಟಾಟ, ಮರಕೋತಿ ಆಟ, ಅಬ್ಬಬ್ಬ..., ಏನು ಕುಣಿ..., ಕುಣೀ ಕುಣೀತಿದ್ವಿ. ಈಗಿನ ಮಕ್ಳಿಗೆ ಅವೆಲ್ಲ ಏನೂ ಇಲ್ಲ. ಬರೀ ಮೊಬೈಲು, ಕಂಪ್ಯೂಟರ್ರು. ನಾವೆಲ್ಲ ರಜ ಬಂದ್ರೆ ಸಾಕು ಅಜ್ಜ ಅಜ್ಜಿ ಮನೆಗೆ ಹಳ್ಳಿಗೆ ಹೋಗ್ತಿದ್ವಿ, ಅಲ್ಲಿ ಗದ್ದೆ ತೋಟ ಕೆರೆ, ನದೀಲಿ ಈಜು, ಏನ್ ಚನ್ನಾಗಿರ್ತಿತ್ತು ಅವಾಗ... ಈಗ ಏನೂ ಕೇಳ್ಬೇಡಿ, ಕಾಲ ಕೆಟ್ಹೋಯ್ತು, ಅಂತ ಈಗಿನ ತಂದೆ ತಾಯಿಯರು ಹೇಳೋದು ಕೇಳಿಲ್ವೇ?

ಇನ್ನು ಈಗಿನ ತಂದೆ ತಾಯಂದಿರ ಅಪ್ಪ ಅಮ್ಮನೂ ಹಾಗೇ ಹೇಳ್ತಿದ್ರು. ‘ಕಾಲ ಕೆಟ್ಹೋಯ್ತು’. ನಮ್ಮ ಕಾಲದಲ್ಲಿ ಎಷ್ಟು ಚನ್ನಾಗಿತ್ತು. ಹಳ್ಳೀಲಿ ಎಲ್ಲ ಸೊಂಪಾಗಿ ಬೆಳೀತಿತ್ತು. ಆಗ ಬಡತನ ಇದ್ರೂ ಎಂಥ ಸುಖ ಇತ್ತು. ಒಂದೊಂದು ಕೂಡು ಕುಟುಂಬದಲ್ಲಿ ಒಂದೊಂದು ಶಾಲೆಗಾಗುವಷ್ಟು ಮಕ್ಕಳು ಒಂದೇ ಮನೆಯಲ್ಲಿರ್ತಿದ್ವಿ. ಈಗ ನೋಡಿ ಒಂದು ಎರಡು ಸಾಕೋಕೇ ಏನ್ ಆಡ್ತಾರೆ ಅಂದ್ರೆ..., ಭಾಳ ನಾಜೂಕಾಗೋಗಿದಾರೆ. ನಮ್ಮ

ಕಾಲದಲ್ಲಿ ೧೦-೧೨ ಮಕ್ಕಳನ್ನು ಹಡೆದೂ ಗಟ್ಟಿಮುಟ್ಟಾಗಿರೋರು. ಈಗ ನೋಡಿ ಸಣ್ಣ ವಯಸ್ಸಿಗೆ ಆ ನೋವು ಈ ನೋವು, ಬೀಪಿ, ಶುಗರ‍್ರು ಏನೇನೋ. ಶಾಲೆಗೆ ೪-೫-೬ ಮೈಲಿ ನಡಕೊಂಡೇ ಹೋಗ್ತಿದ್ವಿ. ಹೋಗ್ತಾ ಬರ‍್ತಾ ದಾರೀಲಿ ಸಿಗೋ ಗಿಡ ಮರಗಳಲ್ಲಿ ಬಿಟ್ಟಿರುತ್ತಿದ್ದ ಹಣ್ಣುಹಂಪಲುಗಳನ್ನೆಲ್ಲ ತಿನ್ಕೊಂಡ್ ಬರ‍್ತಿದ್ವಿ. ಈಗ ಬಿಡಿ ಕಾಲ ಕೆಟ್ಹೋಯ್ತು... ಹೀಗೆ ಫ್ಲ್ಯಾಷ್‌ಬ್ಯಾಕ್ ಮುಂದುವರಿಯುತ್ತೆ.

ಅಂದರೆ 'ಕಾಲ ಕೆಟ್ಹೋಯ್ತು' ಅನ್ನೋ ಮಾತನ್ನು ಹಿಂದೆಯೂ ಹೇಳುತ್ತಿದ್ದರು. ಈಗಲೂ ಹೇಳುತ್ತಿದ್ದಾರೆ ಹಾಗೇ ಮುಂದೆಯೂ ಹೇಳುತ್ತಲೇ ಇರುತ್ತಾರೆ ಅಂತಾಯಿತು. ಇದರಿಂದ ತಿಳಿದುಬರೋದು ಏನೆಂದರೆ ಕಾಲ ಭೂತಕಾಲದಲ್ಲೂ ಕೆಟ್ಹೋಗಿತ್ತು ವರ್ತಮಾನದಲ್ಲೂ ಕೆಟ್ಹೋಗಿದೆ, ಹಾಗೇ ಭವಿಷ್ಯದಲ್ಲೂ ಕೆಡುತ್ತಲೇ ಇರುತ್ತೆ ಅಂತಾಯಿತು. ಹಾಗಾದರೆ ಕೆಡುವುದೇ ಕಾಲದ ಗುಣವೇ ಅಂತ ಕೇಳಿದ್ರೆ, 'ಇದು ಕಲಿಗಾಲ ಕಣ್ರೀ'..., ಅಂತ ಕೆಲವರು ಹೇಳಬಹುದು, ಇನ್ನು ಕೆಲವರು 'ಕೆಟ್ಟಿರೋದು ಕಾಲ ಅಲ್ಲ ಜನಗಳು' ಅಂತ ಹೇಳಬಹುದು. ಕಾಲ ಕೆಟ್ಹೋಯ್ತು, ನಮ್ಮ ಕಾಲದಲ್ಲಿ ಹೀಗಿರಲಿಲ್ಲ ಅನ್ನೋ ಮಾತುಗಳನ್ನು ಯಾರಾದ್ರೂ ಹೇಳ್ತಿದಾರೆ ಅಂದ್ರೆ ಅವ್ರ ಮುಖ ನೋಡದೇ ಹೇಳಬಹುದು ಅವರಿಗೆ ಮಧ್ಯ ವಯಸ್ಸು ದಾಟಿದೆ ಅಂತ. ನಮ್ಮ ಕಾಲ ಮುಗೀತಪ್ಪ ಇನ್ನು ನಿಮ್ಮದೇ ಕಾಲ ಎಂದು ಅನ್ನೋ ಮಾತುಗಳನ್ನು ಕೇಳಿರಬಹುದು. ಹೆಚ್ಚಿನವರು ಬಾಲ್ಯ ಹಾಗೂ ಯೌವನ ಮಾತ್ರ ತಮ್ಮ ಕಾಲ, ಮಧ್ಯ ವಯಸ್ಸು, ವೃದ್ಧಾಪ್ಯ ತಮ್ಮ ಕಾಲ ಅಲ್ಲ ಅಂತ ತಿಳಿದುಕೊಂಡಹಾಗಿದೆ. ಹಾಗಾಗಿ ಅವರ ಬಾಲ್ಯ ಹಾಗೂ ಯೌವನದ ಕಾಲ ಚನ್ನಾಗಿರುತ್ತೆ. ನಂತರ ಕೆಡಲು ಆರಂಭವಾಗುತ್ತೆ! ಇದೆಂಥ ಕಾಲದ ಮಹಿಮೆ! ಬಾಲ್ಯ, ಯೌವನದಲ್ಲಿ ಕಾಲಕ್ಕೆ ತಕ್ಕಂತೆ ನಡೀತಿರೋದ್ರಿಂದ ಆ ಕಾಲ ಚನ್ನಾಗಿರುತ್ತೆ. ನಡೆದೂ ನಡೆದೂ ಸುಸ್ತಾಗಿ ಕಾಲದ (ಬದಲಾವಣೆಯ) ವೇಗಕ್ಕೆ ನಡೆಯಲಾಗದೆ ನಮ್ಮ ನಡೆ ನಿಧಾನವಾದಾಗ ಕಾಲ ಕೆಡುತ್ತಿದೆ ಅನ್ನಿಸೋಕೆ ಶುರುವಾಗುತ್ತೆ. ಕಾಲಕ್ಕೆ ತಕ್ಕಂತೆ ನಡೆಯುವುದು ಪೂರ್ತಿ ನಿಂತುಹೋದರೆ ಕಾಲ ಕೆಟ್ಟುಹೋಯಿತು ಅನ್ನೋಕೆ ಶುರುವಾಗುತ್ತೆ. ಹಾಗಾಗಿ ಕಾಲ ಕೆಟ್ಟುಹೋಗೋದು ಚನ್ನಾಗಿರೋದು ಅದರ ಗುಣ ಅಲ್ಲ! ಅದು ತನ್ನ ಪಾಡಿಗೆ ತಾನು ನಡೆಯುತ್ತಲೇ..., ಧಾವಿಸುತ್ತಲೇ ಇರುತ್ತದೆ. (ಕಾಲವನ್ನು ತಡೆಯೋರು ಯಾರೂ ಇಲ್ಲ..., – ಹಾಡನ್ನು ಕೇಳಿಲ್ಲವೇ ?) ಅದರ ವೇಗಕ್ಕೆ ನಾವು ಹೊಂದಿಕೊಳ್ಳಲಾಗದಿದ್ದಾಗ ಕಾಲದ ಬಗೆಗಿನ ನಮ್ಮ ಅಭಿಪ್ರಾಯ ವ್ಯತ್ಯಾಸ ಆಗುತ್ತೆ.

'ಕಾಲಕ್ಕೆ ತಕ್ಕ ಕೋಲ' ಎಂಬ ಗಾದೆ ಮಾತನ್ನು ಕೇಳಿದೀರ. ಹಾಗೇ 'ಕಾಲಕ್ಕೆ ತಕ್ಕಂತೆ ನಡೆಯಬೇಕು...,' ಅಂತ ಅಣ್ಣಾವ್ರು ಹಾಡಿದ ಮುತ್ತಿನಂಥ ಮಾತನ್ನೂ ಕೇಳಿದೀವಿ. ಆದ್ರೆ ಎಷ್ಟು ಸಮಸ್ಯೆ ಆಗುತ್ತೆ ನೋಡಿ. ಸಿನಿಮಾನೋ ಮತ್ತೊಂದೋ ನೋಡಿ ಹುಡುಗಿಯರು ಏನೋ ಒಂದು ಫ್ಯಾಷನ್ ಮಾಡ್ತಾರೆ. ಉದಾಹರಣೆಗೆ, ಲಂಗ ಬ್ಲೌಸು ಬಿಟ್ಟು ಚೂಡಿದಾರ್ ಹಾಕಲು ಶುರು ಮಾಡಿದರು. ಸ್ವಲ್ಪ ದಿನಕ್ಕೇ ಆಂಟಿಯರೂ ಸೀರೆ ಬಿಟ್ಟು ಚೂಡಿದಾರ್ ಹಾಕಲು ಶುರು ಮಾಡಿದರು. ಹೋಗ್ಲಿ ಅಂದ್ರೆ ಇನ್ನೂ ಸ್ವಲ್ಪ ದಿನಕ್ಕೆ ಅಜ್ಜಿಯರೂ ಚೂಡಿದಾರ್ ಹಾಕಲು ಶುರು ಮಾಡಿದರು! ಅದೇನು ಆಂಟಿ, ಅಜ್ಜಿಯರು ಚೂಡಿದಾರ್ ಹಾಕಲು ಶುರು ಮಾಡಿದರೋ ಅಥವಾ ಚೂಡಿದಾರ್ ಹಾಕಲು ಶುರು ಮಾಡಿದವರೇ ಅಷ್ಟು ಬೇಗ ಆಂಟಿ ಅಜ್ಜಿಯರಾದರೋ ಗೊತ್ತಿಲ್ಲ. ಒಟ್ಟಿನಲ್ಲಿ ಹುಡುಗಿಯರು ಏನು ಫ್ಯಾಷನ್ ಮಾಡ್ತಾರೋ ಆಂಟಿಯರೂ ಅದನ್ನೇ ಮಾಡಿ ಹುಡುಗಿಯರ ಥರ ಕಾಣಲು ಶತಪ್ರಯತ್ನ ಮಾಡ್ತಾರೆ. ಪಾಪ ಹುಡುಗಿಯರು ಆಂಟಿಯರಿಗಿನ್ನ ಭಿನ್ನವಾಗಿ ಕಾಣಲು ಬೇರೆ ಫ್ಯಾಷನ್ ಶುರು ಮಾಡ್ತಾರೆ. (ಉದಾಹರಣೆಗೆ ಚೂಡಿದಾರ್ ಬಿಟ್ಟು ಜೀನ್ಸ್ ಹಾಕೋಕೆ ಶುರು ಮಾಡಿಲ್ವೇ, ಹಾಗೆ) ಇವರೂ ಅದನ್ನು ಮಾಡಕ್ಕಾಗಲಿಲ್ಲ ಅಂದ್ರೆ ಕಾಲ ಕೆಟ್ಹೋಯ್ತು ಅಂತ ವರಾತ ಶುರು ಮಾಡ್ತಾರೆ! ಹೀಗೆ ಹುಡುಗಿಯರು ಹುಡುಗಿಯರ ಹಾಗೆ ಕಾಣಲು, ಆಂಟಿಯರೂ ಮಮ್ಮಿಯರೂ ಹುಡುಗಿಯರ ಹಾಗೆ ಕಾಣುವ ಪ್ರಯತ್ನಗಳೂ ಪೈಪೋಟಿಗಳೂ ನಡೀತಾನೇ ಇರುತ್ವೆ.

ಈ ವಿಷಯ ಹೇಳುತ್ತಿರುವ ಹಾಗೇ ನನ್ನ ಸೆನ್ಸಾರ್ ಮಂಡಳಿ ಹಸ್ತಪ್ರತಿ ಪರಿಶೀಲನೆಯಲ್ಲಿ ತೊಡಗಿರುವುದರಿಂದ ಮೇಲಿನ ಪ್ಯಾರಾದ ವಿಷಯ ಬಿಟ್ಟು ಕಥಾ ಕಾಲಕ್ಷೇಪದ ಬಗ್ಗೆ ಬರೆಯಲು ಶುರುಮಾಡಿದೆ. (ಮದುವೆಯಾದವರಾಗಿದ್ದರೆ ನಿಮಗೆ ನನ್ನ ಕಷ್ಟ ಅರ್ಥವಾಗಿರುತ್ತೆ). ಹರಿಕತೆ ಎಂಬುದನ್ನು ನೀವೆಲ್ಲ ಕೇಳಿದ್ದೀರಿ ತಾನೆ ? ಅದಕ್ಕೆ ಕಥಾ ಕಾಲಕ್ಷೇಪ ಅಂತಾನೂ ಹೇಳ್ತಿದ್ರು. ಕಾಲಕ್ಷೇಪ ಅಂದ್ರೆ ಕಾಲ ಕಳೆಯುವುದು ಎಂದು ಅರ್ಥ. ಕಾಲ ಕಳೆಯಲು ಒಬ್ಬೊಬ್ಬರಿಗೂ ಒಂದೊಂದು ಹವ್ಯಾಸ ಇರುತ್ತದೆ. ಹಾಡು, ಹಸೆ, ಓದೋದು, ಬರ‍್ಯೋದು, ಆಡೋದು, ಕುಣಿಯೋದು, ಟಿವಿ, ಕಂಪ್ಯೂಟರ್, ಮೊಬೈಲು, ಏನೂ ಮಾಡದೆ ನಿದ್ದೆ ಮಾಡೋದು ಇತ್ಯಾದಿ... ಇನ್ನು ಕೆಲವರಿಗೆ ಕಾಲ ಕಳೆಯೋದಲ್ಲ, ಇರೋ ೨೪ ಗಂಟೆ ಕಾಲವೂ ಸಾಲದು. ಸದಾ ಧಾವಂತ, ಅವರು ಕಾಲದ ವೇಗವನ್ನು ಮೀರಿ ಓಡೋ ಪ್ರಯತ್ನ ಮಾಡ್ತಿರ‍್ತಾರೆ. ಕಾಲ ಕಳೆಯೋದನ್ನು ಇಂಗ್ಲಿಷಿನಲ್ಲಿ ಟೈಮ್ ಕಿಲ್ಲಿಂಗ್ ಅಂತಾರೆ. ಕಾಲ ಕಳೆಯೋದು ಅಂದ್ರೆ ಕಾಲದ ಕೊಲೆಗೆ ಸಮ ಎಂಬರ್ಥವೋ ಏನೋ ?

ನಮ್ಮಲ್ಲಿ ಕಾಲವನ್ನೇ ಮೃತ್ಯು ಎಂಬುದಾಗಿಯೂ ಬಳಸುತ್ತೇವೆ. ಯಾರಾದರೂ ತೀರಿಕೊಂಡಾಗ ಅವರು ಕಾಲವಶವಾದರು, ಕಾಲನ ಕರೆಗೆ ಓಗೊಟ್ಟರು ಎಂದು ಮುಂತಾಗಿ ಬಳಸುತ್ತೇವೆ. ಅದೇನೇ ಇರಲಿ, ವ್ಯಕ್ತಿತ್ವ ವಿಕಸನ ತರಬೇತಿದಾರರೆಲ್ಲ ಹೇಳುವಂತೆ ದೊಡ್ಡವರಿಗೂ, ಚಿಕ್ಕವರಿಗೂ, ಬಡವರಿಗೂ, ಶ್ರೀಮಂತರಿಗೂ, ಗಂಡಸರಿಗೂ, ಹೆಂಗಸರಿಗೂ, ಒಟ್ಟಿನಲ್ಲಿ ಪ್ರಪಂಚದ ಪ್ರತಿಯೊಬ್ಬರಿಗೂ ಸಮಾನವಾಗಿ ಸಿಕ್ಕಿರುವುದೆಂದರೆ ಸಮಯ. ಎಲ್ಲರಿಗೂ ಸರಿಯಾಗಿ ಗಂಟೆಗೆ ೬೦ ನಿಮಿಷ, ದಿನಕ್ಕೆ ೨೪ ಗಂಟೆ. ಒಂದು ಸೆಕೆಂಡ್ ಹೆಚ್ಚಿಲ್ಲ ಕಡಿಮೆಯಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಕಾಲವನ್ನು ಅಥವಾ ಸಮಯವನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದರ ಮೇಲೆ ಅವರವರ ಜೀವನ ನಿರ್ಧಾರವಾಗುತ್ತದೆ. ಅವರೇ ಹೇಳುವ ಹಾಗೆ ಸದಾಕಾಲ ಚಟುವಟಿಕೆಯಿಂದಿರುವವರಿಗೆ ಎಲ್ಲ ಕೆಲಸಗಳಿಗೂ ಸಮಯ ಇರುತ್ತದೆ. ಸೋಮಾರಿಗಳು, "ಅಯ್ಯೋ ಯಾವುದಕ್ಕೂ ಟೈಮೇ ಸಿಗಲ್ಲ" ಅಂತ ಹೇಳ್ತಿರ‍್ತಾರೆ. ಕೆಲವರು ತುಂಬ ಬಿಝಿ ಅಂತ ತಿಳ್ಕೊಂಡಿರ‍್ತಾರೆ. ಆದರೆ ವಾಸ್ತವದಲ್ಲಿ ಹಾಗಿರಲ್ಲ. ಅವರು ಕೆಲಸವನ್ನು ವ್ಯವಸ್ಥಿತಗೊಳಿಸಿಕೊಳ್ಳದೆ ಎಲ್ಲ ಕೆಲಸವನ್ನೂ ಒಟ್ಟಿಗೆ ಮಾಡುತ್ತಿರುತ್ತಾರೆ. ಆದರೆ ಯಾವುದನ್ನೂ ಸರಿಯಾಗಿ ಮಾಡಲಾಗುವುದಿಲ್ಲ. "ಎಂಥ ಕಾಲ ಬಂತಪ್ಪ! ಇವ್ನು ಕಾಲದ ಬಗ್ಗೆ ಹೇಳ್ತಾ ಹೇಳ್ತಾ ಸಮಯದ ಬಗ್ಗೆ ಕೊರೆಯೋಕೆ ಶುರುಮಾಡಿದ (ಸಮಯ ಸಾಧಕ !)" ಅಂತ ನೀವು ಸಕಾಲದಲ್ಲಿ ಎಚ್ಚರಿಕೆ ಕೊಟ್ಟಿದ್ದು ಒಳ್ಳೆಯದಾಯಿತು.

ಸಕಾಲ ಅಂದ್ರೆ ನೋಡಿ ಕರ್ನಾಟಕ ಸರ್ಕಾರವೇ ನೆನಪಾಗುತ್ತೆ. ಏನಾದರೂ ಅರ್ಜಿ ಕೊಡಲು ಹೋದರೆ ಸಕಾಲದಲ್ಲಿ ಅರ್ಜಿ ಸಲ್ಲಿಸಿ ಅಂತಾರೆ. ಹೌದು, ಅರ್ಜಿ ತಗೊಳ್ಳಿ ಅಂದ್ರೆ "ಈಗ ಅರ್ಜಿ ತಗೊಳಲ್ಲ. ಯಾವಾಗ ಅರ್ಜಿ ತಗೋಬೇಕು ಅಂತ ಸರ್ಕಾರದ ಪ್ರಕಟಣೆ ನೋಡ್ಕೊಂಡು ಆಮೇಲೆ ಬನ್ನಿ" ಅಂತಾರೆ. ಸಕಾಲ ಯಾವಾಗ ಬರುತ್ತೋ ಕಾಯ್ತಾ ಕೂರಬೇಕು. ಕೇಂದ್ರ ಸರ್ಕಾರದಲ್ಲಿ ಹಾಗಿಲ್ಲ ನೋಡಿ. ಅಲ್ಲಿ ಒಳ್ಳೆ ದಿನ ಬರುತ್ತೆ ಅಂತ ಹೇಳಿಬಿಟ್ಟಿದ್ದಾರೆ. (ಒಳ್ಳೆ ಕಾಲ ಬರುತ್ತೆ ಅಂತ ಹೇಳಿಲ್ಲ! ಬುದ್ಧಿವಂತರು!) ಆ ಒಂದು ದಿನ ಯಾವಾಗ ಬರುತ್ತೋ ಅಥವಾ ನಮಗೆ ಗೊತ್ತಿಲ್ಲದ ಹಾಗೆ ಬಂದು ಹೋಗೇಬಿಡ್ತೋ ಅಂತ ದಿನಾ ಕಾಲ ಹಾಕಬೇಕು. ಛೇ! ಹೇಗೆ ವಿಷಯಾಂತರ ಆಗಿಹೋಯ್ತು ನೋಡಿ. ಈ ರಾಜಕೀಯ ಇಣುಕಿದರೆ ಹೀಗೇ..., ವಿಷಯದ ಹಾದಿಯೇ ತಪ್ಪಿಹೋಗುತ್ತೆ.

ನಾವು ರಾಹುಕಾಲ, ಗುಳಿಗಕಾಲ, ಯಮಗಂಡ ಕಾಲಗಳ ಬಗ್ಗೆ ಶುರು ಹಚ್ಕೊಂಡ್ರೆ ಬೇರೆನೇ ಪ್ರಬಂಧ ಆಗುತ್ತೆ. ಅದು ಬಿಟ್ಟು ಗಂಭೀರವಾದ ಸಾಹಿತ್ಯದ ವಿಷಯಕ್ಕೆ ಬರೋಣ. ಯಾವುದೇ ಕೃತಿಯ ಬಗ್ಗೆ ವಿಮರ್ಶಿಸುವಾಗ ಅದರ ಮೌಲ್ಯವನ್ನು ಕಾಲವೇ ನಿರ್ಧರಿಸುತ್ತದೆ ಎನ್ನುತ್ತಾರೆ. ಹೌದು, ಕಾಲವೇ ಎಲ್ಲವನ್ನೂ ನಿರ್ಧರಿಸುತ್ತದೆ. ಯಾರೋ ನನ್ನನ್ನು ಕರೆಯುತ್ತಿದ್ದಾರೆ. ಕಾಲನ ಕರೆಯೇ ಇರಬೇಕು. ಕಾಲನ ಕರೆ ಆದರೆ ಸ್ವಲ್ಪ ಇರಪ್ಪ ಪ್ರಬಂಧ ಮುಗಿಸಿ ಬರ‍್ತೀನಿ ಅಂತ ಹೇಳಬಹುದು. ಆದರೆ ಇದು ಅಡುಗೆ ಮನೆಯ ಕರೆ! ನಾನಿನ್ನು ಹೋಗಲೇಬೇಕು! ನನ್ನ ಈ ಲಲಿತ ಪ್ರಬಂಧದ ಸಮಯ ಇಲ್ಲಿಗೇ ಮುಗಿಯುತ್ತಿದೆ. ಅದರ ಮೌಲ್ಯವನ್ನು ಕಾಲವೇ ನಿರ್ಧರಿಸಲಿ! ನಾನಿನ್ನು ಬರುತ್ತೇನೆ!

ವಿ. ಶ್ರೀನಿವಾಸ
ನಂ. ೧೨, 'ಆಹ್ಲಾದ', ೧ನೇ ತಿರುವು, ದೂರವಾಣಿ ಬಡಾವಣೆ
ವಿನೋಬನಗರ ಅಂಚೆ, ಶಿವಮೊಗ್ಗ – ೫೭೭ ೨೦೪

## ತಾರತಮ್ಯ

ಬರಗಾಲ
ಚಳಿಗಾಲ
ದ
ಬಿಸಿ ತಟ್ಟುವುದು –
ಬೂಟುಗಾಲಿನವರಿಗಲ್ಲ –
ಬರಿಗಾಲಿನವರಿಗೆ –
ಎಲ್ಲ!

ವ. ಉಮೇಶ್ ಕಾರಂತ
ಮಂಗಳೂರು

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil.

